# ಜಾನಪದರ ದೃಷ್ಟಿಯಲ್ಲಿ ಬ್ಯಾಂಕಿಂಗ್

## ಅಂದು-ಇಂದು

(ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಶಂಕರಾನಂದ ಕೆ.ಜಿ.

ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೭೬

೨೦೦೯

# ಜನಪದರ ದೃಷ್ಟಿಯಲ್ಲಿ ಬ್ಯಾಂಕುಗಳು

## ಅಂದು-ಇಂದು

(ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಶಂಕರಾನಂದ ಕೆ.ಜಿ.






ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೯

## ಪ್ರಮಾಣ ಪತ್ರ

ಜನಪದರ ದೃಷ್ಟಿಯಲ್ಲಿ ಬ್ಯಾಂಕುಗಳು ಅಂದು-ಇಂದು ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸಂಶೋಧಕ**
ಶಂಕರಾನಂದ ಕೆ.ಜಿ.
ಶಂಕರಾನಂದ ಕೆ.ಜಿ.
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೩.೦೯.೨೦೦೯

## ದೃಢೀಕರಣ ಪತ್ರ

ಶ್ರೀ ಶಂಕರಾನಂದ ಕೆ.ಜಿ. ಅವರು ಜನಪದರ ದೃಷ್ಟಿಯಲ್ಲಿ ಬ್ಯಾಂಕುಗಳು ಅಂದು-ಇಂದು ಎಂಬ ಶೀರ್ಷಿಕೆಯ ಪ್ರೌಢಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಪ್ರೌಢಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದಶಕರು

ಡಾ.ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: ೨೩.೦೯.೨೦೦೯

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ ಹಾಗೂ, ಡಾ.ಎ.ಮುರಿಗೆಪ್ಪ ಅವರಿಗೆ, ಮಾನ್ಯ ಕುಲಸಚಿವರಾದ ಶ್ರೀ ವಿ.ಶಂಕರ್, ಶ್ರೀ ಎಸ್.ಎಸ್.ಪೂಜಾರ ಅವರಿಗೆ ಅಧ್ಯಯನಾಂಗದ ಹಿಂದಿನ ನಿರ್ದೇಶಕರಾದ ಡಾ.ಪಾಂಡುರಂಗಬಾಬು ಮತ್ತು ಇಂದಿನ ನಿರ್ದೇಶಕರಾದ ಡಾ.ವೀರೇಶ ಬಡಿಗೇರ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು.

ಅಧ್ಯಯನಕ್ಕೆ ತಾಳ್ಮೆಯಿಂದ ಮಾರ್ಗದರ್ಶನ ಮಾಡಿದ ಮಾರ್ಗದರ್ಶಕರು ಹಾಗೂ ಜಾನಪದ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಮಂಜುನಾಥ ಬೇವಿನಕಟ್ಟಿ ಅವರಿಗೆ ನಾನು ಋಣಿಯಾಗಿರುತ್ತೇನೆ.

ಅಧ್ಯಯನದ ಅವಧಿಯಲ್ಲಿ ವಿವಿಧ ರೀತಿಯಲ್ಲಿ ಸಹಕರಿಸಿದ ಜಾನಪದ ಅಧ್ಯಯನ ವಿಭಾಗದ ಡಾ.ಸ.ಚಿ.ರಮೇಶ್, ಡಾ.ಮೊಗಳ್ಳಿ ಗಣೇಶ್, ಡಾ.ಹೆಬ್ಬಾಲೆ ನಾಗೇಶ್, ದಿವಂಗತ ಡಾ.ಹರಿಶ್ಚಂದ್ರ ದಿಗ್ಗಂಗೀಕರ್, ವಿಭಾಗದ ಸಿಬ್ಬಂದಿಗಳಾದ ಶ್ರೀ ಅಜಿತ ಹಡಪದ ಹಾಗೂ ಶ್ರೀ ಖಾಸಿಂಭಾಷಾ ಅವರುಗಳಿಗೂ ಅಭಿನಂದನೆಗಳು.

ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ನೀಡುವಲ್ಲಿ ನೆರವಾದ ಪ್ರಗತಿ ಗ್ರಾಮೀಣ ಬ್ಯಾಂಕಿನ ಮುಖ್ಯ ಕಛೇರಿಯ ಸಿಬ್ಬಂದಿಯವರಿಗೆ, ಸೋಗಿ, ರಾರಾವಿ, ಬಾಣಾಪುರ, ದರೋಜಿ, ಹಂಪಸಾಗರ, ಮರಿಯಮ್ಮನಹಳ್ಳಿ, ಖಾನಾಹೊಸಹಳ್ಳಿ ಪ್ರಗತಿ ಗ್ರಾಮೀಣ ಬ್ಯಾಂಕ್‌ಗಳ ಸಿಬ್ಬಂದಿ ವರ್ಗದವರಿಗೆ, ಕ್ಷೇತ್ರಕಾರ್ಯದಲ್ಲಿ ಸಹಾಯ ಮಾಡಿದ ಬ್ಯಾಂಕಿನ ಫಲಾನುಭವಿಗಳಿಗೆ, ಹೊಸಪೇಟೆಯ ವಿಜಯನಗರ ಕಾಲೇಜಿನ ಪ್ರಾಚಾರ್ಯರುಗಳಾದ ಪ್ರೊ.ಸಾಲಂಕಿಮಠ ಹಾಗೂ ಡಾ.ಮರೀಗೌಡರಿಗೂ ಹರಪನಹಳ್ಳಿಯ ಎ.ಡಿ.ಬಿ. ಮಹಾವಿದ್ಯಾಲಯದ ಪ್ರಾಚಾರ್ಯರಾದ ಪ್ರೊ.ಎಸ್.ನಾಗೇಂದ್ರ ಹಾಗೂ ಹಿರಿಯರಾದ ಪ್ರೊ.ಯು.ರಾಘುವೇಂದ್ರರಾವ್ ಹಾಗೂ ಡಾ.ಚಂದ್ರಬಾಬು ಮತ್ತು ಅಧ್ಯಾಪಕರು ಹಾಗೂ ಸಿಬ್ಬಂದಿ ವರ್ಗದವರಿಗೆ, ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದ ನಿರ್ದೇಶಕರಾದ ಡಾ.ಕೆ.ಎಂ.ಸುರೇಶ ಅವರಿಗೆ ಮತ್ತು ಶಾಸನಶಾಸ್ತ್ರ ಮುಖ್ಯಸ್ಥರಾದ ಡಾ.ಎಂ.ಕೊಟ್ರೇಶ ಅವರಿಗೆ ಹಾಗೂ ವೀರಶೈವ ವಿದ್ಯಾವರ್ದಕ ಸಂಘದ ಎಲ್ಲಾ ಪದಾಧಿಕಾರಿಗಳಿಗೆ, ರಾಷ್ಟ್ರೀಯ ಸಮಗ್ರ ಗ್ರಾಮೀಣಾಭಿವೃದ್ಧಿ ಕಛೇರಿ, ಹೈದ್ರಾಬಾದ್ ಸಿಬ್ಬಂದಿ ವರ್ಗಕ್ಕೆ, ಐ.ಎಸ್.ಈ.ಸಿ. ಬೆಂಗಳೂರು ಸಿಬ್ಬಂದಿವರ್ಗಕ್ಕೆ, ಜಿಐಪಿಇ ಪುಣೆ ಸಿಬ್ಬಂದಿವರ್ಗಕ್ಕೆ, ಮೈಸೂರು, ಕುವೆಂಪು, ಗುಲ್ಬರ್ಗಾ ವಿಶ್ವವಿದ್ಯಾಲಯದ ಅರ್ಥಶಾಸ್ತ್ರ ವಿಭಾಗದ ಅಧ್ಯಾಪಕ ವರ್ಗದವರಿಗೆ ಎಲ್ಲಾ ಗ್ರಂಥಾಲಯಗಳ ಸಿಬ್ಬಂದಿಗೆ, ಅಧ್ಯಯನದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ಮತ್ತು ಪೂಜ್ಯ ತಂದೆಯವರಾದ ಶ್ರೀ ಕೆ.ಜಿ.ಕಲ್ಲಪ್ಪ, ತಾಯಿ ಶ್ರೀಮತಿ ಶರಣಮ್ಮ, ಪತ್ನಿ ಶ್ರೀಮತಿ ಬಿ.ಶಂಕರಮ್ಮ, ಚಿರಂಜೀವಿಗಳಾದ ಸಿಂಧು ಪಟೇಲ್, ಸಚಿನ್ ಪಟೇಲ್ ಮತ್ತು ತಂಗಿ ತಮ್ಮಂದಿರುಗಳ ಸಹಕಾರವನ್ನು ಸ್ಮರಿಸಲೇಬೇಕು. ಸಕಾಲದಲ್ಲಿ ಅಂದವಾಗಿ ಅಕ್ಷರ ಸಂಯೋಜಿಸಿಕೊಟ್ಟ ಶ್ರೀ ವೀರೇಶ್ ಅವರಿಗೆ, ಬೈಡಿಂಗ್ ಮಾಡಿದವರಿಗೆ ಪ್ರೀತಿಪೂರ್ವಕ ನಮನಗಳು.

ದಿನಾಂಕ: ಶಂಕರಾನಂದ ಕೆ.ಜಿ.

ಸ್ಥಳ: ೨೩.೦೯.೨೦೦೯

## ಪರಿವಿಡಿ

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

## ೧.೧. ಪೀಠಿಕೆ

ಇತಿಹಾಸವನ್ನು ಅವಲೋಕಿಸಿದಾಗ ಜನಪದರು ಆದಿಮ ಹಂತದಿಂದ ನಾಗರೀಕತೆಗೆ ಪಯಣಿಸಿದ ಹಾದಿಯನ್ನು ಅನೇಕ ಅಂಶಗಳಿಂದ ಕಂಡುಕೊಳ್ಳಬಹುದಾಗಿದೆ. ಆದಿಮ ಹಂತದಲ್ಲಿ ಜನಪದರು ತಮ್ಮ ಆಹಾರವನ್ನು ಸಂಪಾದಿಸಲು ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಯುತ್ತಿದ್ದರು. ಇವರು ಪ್ರಕೃತಿಯ ನಿಗೂಢತೆಯ ವಿರುದ್ಧ ಹೋರಾಡುತ್ತಾ ಪರಸ್ಪರ ಸುಖ ದುಃಖಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಇದರಿಂದಾಗಿ ಸಮೂಹ ಜೀವನ ಆರಂಭವಾಯಿತು. ಸಮೂಹ ಜೀವನದ ಸಹಜ ಪ್ರವೃತ್ತಿಯಿಂದಾಗಿ ನೈಸರ್ಗಿಕ ವಿಕೋಪಗಳಿಂದ ಮತ್ತು ಕಾಡು ಪ್ರಾಣಿಗಳಿಂದ ರಕ್ಷಣೆಗೋಸ್ಕರ ಪರಸ್ಪರ ಸಹಕಾರ ಮತ್ತು ಸಹಬಾಳ್ವೆಯು ಅಸ್ತಿತ್ವಕ್ಕೆ ಬಂದಿತು.

ಜನಪದರು ಕ್ರಿ.ಪೂ. ೭೦೦೦ ವರ್ಷಗಳ ಹಿಂದೆಯೇ ಅಲೆದಾಡುತ್ತಲೇ ತಮಗೆ ಬೇಕಾದ ಆಹಾರ ಪದಾರ್ಥಗಳನ್ನು ಬೆಳೆಸಿಕೊಳ್ಳುವುದನ್ನು ಕಲಿತಿದ್ದರು. ಆ ಕಾಲದಲ್ಲಿ ವ್ಯವಸಾಯವು ಸಂಚಾರಿಯಾಗಿತ್ತು. ಇದನ್ನೇ ಕುಮರಿ ವ್ಯವಸಾಯ ಪದ್ಧತಿ ಎನ್ನುತ್ತಿದ್ದರೆಂದು ಕೆ.ಸಿ. ಚಾಂಗ್ ಹೇಳಿರುತ್ತಾರೆ. ಆ ನಂತರದಲ್ಲಿ ಇವರು ನದಿ ತೀರ ಮತ್ತು ಫಲವತ್ತಾದ ಭೂಮಿ ಹಾಗೂ ತಮ್ಮ ರಕ್ಷಣೆಗೆ ಅನುಕೂಲವಾದ ಪ್ರದೇಶಗಳಲ್ಲಿ ನೆಲೆನಿಂತರು. ಇದರಿಂದಾಗಿ ಗ್ರಾಮಗಳು ಅಸ್ತಿತ್ವಕ್ಕೆ ಬಂದವು. ಹಾಗೂ ಗ್ರಾಮೀಣ ಆರ್ಥಿಕ ಚಟುವಟಿಕೆಗಳ ಉಗಮಕ್ಕೆ ಕಾರಣವಾಯಿತು. ಕೃಷಿಗೆ ಬೇಕಾದ ಉಪಕರಣಗಳ ಉತ್ಪಾದನೆಗಾಗಿ ಅನೇಕ ಪಂಗಡಗಳು ಗ್ರಾಮಗಳಲ್ಲಿ ಸೃಷ್ಟಿಯಾದವು. ಈ ಪಂಗಡಗಳು ತಮ್ಮ ಜೀವನ ನಿರ್ವಹಣೆಗೆ ಪರಸ್ಪರ ಕೊಡುಕೊಳ್ಳುವುದು ಅನಿವಾರ್ಯವಾಯಿತು; ಹಾಗೂ ಪರಸ್ಪರ ಸಹಕಾರವಿಲ್ಲದೆ ಜೀವನ ನಿರ್ವಹಣೆ ಕಷ್ಟವಾಯಿತು. ಕಾಲಾನಂತರದಲ್ಲಿ ಗ್ರಾಮಗಳಲ್ಲಿ ವಸ್ತುವಿನಿಮಯ ಪದ್ಧತಿಯು ಅಸ್ತಿತ್ವಕ್ಕೆ ಬಂದಿತು. ಜನಪದರ ಅವಶ್ಯಕತೆಗಳು ಅಧಿಕವಾದ ಹಾಗೆ ವಸ್ತುವಿನಿಮಯ ಪದ್ಧತಿಯು ಕಷ್ಟಕರವಾಗತೊಡಗಿತು. ಈ ಕಷ್ಟಗಳ ನಿವಾರಣೆಗೆ ಬೆಲೆಯ ಏಕಮಾನ ಕಲ್ಪನೆಯು ರೂಪಗೊಂಡಿತು. ಅದರ ಫಲವೇ ವೇದಗಳ ಕಾಲದಲ್ಲಿ ಆಕಳನ್ನು ತಮ್ಮ ವ್ಯವಹಾರದಲ್ಲಿ ಏಕಮಾನವಾಗಿ ಬಳಸಲಾರಂಭಿಸಿದರು. ಆ ನಂತರದಲ್ಲಿ ಹಂತ ಹಂತವಾಗಿ ವಸ್ತುರೂಪದ ಹಣ, ಲೋಹದ ಹಣ, ಕಾಗದದ ಹಣ, ಚೆಕ್ ರೂಪದ ಹಣ, ಇತ್ತೀಚಿನ ದಿನಗಳಲ್ಲಿ ಪ್ಲಾಸ್ಟಿಕ್ ರೂಪದ ಹಣವು ಅಸ್ತಿತ್ವಕ್ಕೆ ಬಂದಿರುವುದನ್ನು ಕಾಣಬಹುದು.

ಗ್ರಾಮಗಳಲ್ಲಿ ವಿವಿಧ ಪಂಗಡಗಳು ಅಸ್ತಿತ್ವಕ್ಕೆ ಬಂದ ನಂತರದಲ್ಲಿ, ಸಮಾಜದಲ್ಲಿ ಉಳ್ಳವರು ಮತ್ತು ಇಲ್ಲದವರ ವರ್ಗಗಳು ಸೃಷ್ಟಿಯಾದವು. ನೈಸರ್ಗಿಕ ವಿಕೋಪ ಮತ್ತು ಬರಗಾಲದ ಸಂದರ್ಭಗಳಲ್ಲಿ ಉಳ್ಳವರು ಆಹಾರ ಪದಾರ್ಥಗಳನ್ನು ಶೇಖರಿಸಿಟ್ಟುಕೊಳ್ಳುತ್ತಿದ್ದರು. ಇಂತಹ ಸಂದರ್ಭಗಳಲ್ಲಿ ಇಲ್ಲದವರಲ್ಲಿ (ಬಡವರ್ಗವು) ಜೀವನ ನಿರ್ವಹಣೆ ಕಷ್ಟವಾದಾಗ ಉಳ್ಳವರ ಹತ್ತಿರ ಧಾನ್ಯ ಸಾಲವನ್ನು (ಕಡ) ಪಡೆಯುತ್ತಿದ್ದರು. ಪಡೆದ ಕಡವನ್ನು ಮುಂದಿನ ವರ್ಷದ ಸುಗ್ಗಿಯ ಕಾಲದಲ್ಲಿ ವಾಪಾಸ್ಸು ಮಾಡಬೇಕಾಗಿತ್ತು. ಆಗ ತಾವು ಪಡೆದ ಸಾಲದ ಒಂದೂವರೆ ಪಟ್ಟು ಧಾನ್ಯ ವಾಪಾಸ್ಸು ಮಾಡಬೇಕಾಗಿತ್ತು. ಕಾಲಾನಂತರದಲ್ಲಿ ಲೋಹದ ಮತ್ತು ಕಾಗದದ ಹಣವು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಸಾಲ ಕೊಡುವ ಮತ್ತು ಹಿಂದಿರುಗಿಸಿ ಪಡೆಯುವುದು ಸಹಜವಾಗಿತ್ತು. ಈ ಮೊದಲು ಬಾಯಿ ಮಾತಿನ ಮೂಲಕ ಸಾಲ ಪಡೆಯುತ್ತಿದ್ದರು. ಕಾಗದವು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಬರವಣಿಗೆ ಮತ್ತು ಜಾಮೀನುದಾರರ ಮೂಲಕ ವ್ಯವಹಾರ ನಿರ್ವಹಿಸುತ್ತಿದ್ದರು. ಕಾಲಾನಂತರದಲ್ಲಿ ಇವರೇ ಗ್ರಾಮೀಣ ಲೇವಾ-ದೇವಿಗಾರರಾಗಿ ಬೆಳೆದು ಬಂದರು.

ಅಂದಿನಿಂದ - ಇಂದಿನ ಕಾಲದವರೆಗೂ ಲೇವಾ-ದೇವಿಗಾರರು ತಮ್ಮ ವ್ಯವಹಾರವನ್ನು ನಿರಂತರವಾಗಿ ನಡೆಸುತ್ತಾ ಬಂದಿದ್ದಾರೆ. ೧೮ನೇ ಶತಮಾನದಲ್ಲಿ ವಾಣಿಜ್ಯ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಇವರ ವಹಿವಾಟು ಕಡಿಮೆಯಾಗುತ್ತಾ ಬಂದಿತು. ಪ್ರಾರಂಭದಲ್ಲಿ ಖಾಸಗಿ ವಾಣಿಜ್ಯ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದವು. ಇವುಗಳು ವಾಣಿಜ್ಯ ಚಟುವಟಿಕೆಗಳಿಗೆ ಸಮಾಜದಲ್ಲಿನ ವ್ಯಾಪಾರಸ್ಥರಿಗೆ ಹಾಗೂ ಶ್ರೀಮಂತ ವರ್ಗದವರ ಸಾಲಕ್ಕೆ ಮಾತ್ರ ಸೀಮಿತವಾಗಿದ್ದವು. ಹಾಗಾಗಿ ೧೯೦೪ರಲ್ಲಿ ರಾಷ್ಟ್ರದಲ್ಲಿ ಸಹಕಾರ ಸಂಘಗಳು ಅಸ್ತಿತ್ವಕ್ಕೆ ಬಂದವು. ಈ ಸಹಕಾರ ಸಂಘಗಳು ಕೂಡ ಜನಸಾಮಾನ್ಯರ, ಬಡವರ, ದುರ್ಬಲ ವರ್ಗದವರ ಹಣಕಾಸಿನ ವ್ಯವಸ್ಥೆಯನ್ನು ಪೂರ್ಣಗೊಳಿಸಲು ಸಾಧ್ಯವಾಗದ ಕಾರಣ, ಭಾರತ ಸರಕಾರವು ಒಂದು ಹೊಸ ನೀತಿಯನ್ನು ರೂಪಿಸಿತು.

## ೧.೨. ಅಧ್ಯಯನದ ಮಹತ್ವ

ಭಾರತ ಸರ್ಕಾರವು ರಚಿಸಿದ ಬ್ಯಾಂಕುಗಳ ಆಯೋಗ ಮತ್ತು ಸ್ಥಾಯಿ ಸಮಿತಿಗಳು ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳು ಗ್ರಾಮೀಣ ಜನಪದರ ಸಾಲದ ಅವಶ್ಯಕತೆಗಳನ್ನು ಪೂರೈಸುವಲ್ಲಿ ವಿಫಲವಾಗಿವೆ ಎಂದು ಅಭಿಪ್ರಾಯಪಟ್ಟವು. ಈ ಬ್ಯಾಂಕುಗಳು ಸಮಾಜದಲ್ಲಿನ ದುರ್ಬಲ ವರ್ಗದವರ ಸಾಲದ ಅವಶ್ಯಕತೆಯನ್ನು ಪೂರೈಸಲು ಸಾಧ್ಯವಾಗಿಲ್ಲವೆಂದು ತಮ್ಮ ವರದಿಯಲ್ಲಿ ತಿಳಿಸಿದ್ದವು. ಮುಂದಿನ ದಿನಗಳಲ್ಲಿಯೂ ಗ್ರಾಮೀಣ ಜನಪದರ ಸಾಲದ ವ್ಯವಸ್ಥೆಯನ್ನು ಪೂರೈಸಲು ಸಾಧ್ಯವಾಗದೆಂಬ ಸಂಶಯವನ್ನು ವ್ಯಕ್ತಪಡಿಸಿದವು. ಈ ಸಮಿತಿಗಳು ಗ್ರಾಮೀಣ ಪ್ರದೇಶದಲ್ಲಿನ ಸಾಲದ ಕೊರತೆ ತುಂಬಲು ಭಾರತ ಸರಕಾರಕ್ಕೆ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿದವು. ೧೯೭೫ರಲ್ಲಿ ಭಾರತ ಸರಕಾರವು ಈ ಸಮಿತಿಗಳ ಶಿಫಾರಸ್ಸನ್ನು ಅಂಗೀಕರಿಸಿ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸುವ ನಿರ್ಧಾರ ಕೈಗೊಂಡಿತು.

ಈ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳಲ್ಲಿ ಸ್ಥಾಪನೆಯಾಗಿದ್ದು, ಅದರ ಅಭಿವೃದ್ಧಿಯನ್ನು ಸಾಧಿಸುವ ಗುರಿಯನ್ನು ಹೊಂದಿದ್ದವು. ಈ ಪ್ರದೇಶಗಳಲ್ಲಿನ ಕೃಷಿ, ವ್ಯಾಪಾರ, ಸಣ್ಣ ಕೈಗಾರಿಕೆ, ಕರಕುಶಲಕರ್ಮಿಗಳು, ಸಣ್ಣ/ಅತಿಸಣ್ಣರೈತರು, ಭೂರಹಿತ ಕಾರ್ಮಿಕರು, ದುರ್ಬಲ ವರ್ಗದವರಿಗೆ ಸಾಲಸೌಲಭ್ಯವನ್ನು ಕಲ್ಪಿಸಿ, ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗ ವರಮಾನವನ್ನು ಹೆಚ್ಚಿಸಿ, ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವ ಹೊಣೆಯನ್ನು ಹೊತ್ತುಕೊಂಡಿತು. ಈ ಎಲ್ಲಾ ಉದ್ದೇಶಗಳನ್ನು ಈಡೇರಿಸುವಲ್ಲಿ ಬ್ಯಾಂಕುಗಳು ಸಫಲವಾಗಿವೆಯೇ? ಎನ್ನುವಂತಹ ಪ್ರಶ್ನೆ ಹುಟ್ಟುವುದು ಸಹಜ. ಈ ಹಿನ್ನೆಲೆಯಲ್ಲಿ, ಉತ್ತರ ಕಂಡುಕೊಳ್ಳುವುದಕ್ಕೋಸ್ಕರವಾಗಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಈ ಬ್ಯಾಂಕುಗಳು ಸಮಾಜದಲ್ಲಿನ ದುರ್ಬಲ ವರ್ಗದವರ ವರಮಾನ ಮತ್ತು ಉದ್ಯೋಗದ ಪ್ರಮಾಣವನ್ನು ಹೆಚ್ಚಿಸಿವೆಯೇ? ಇವರ ಉತ್ಪಾದನಾ ಸಾಮರ್ಥ್ಯ ಹೆಚ್ಚಾಗಿದೆಯೇ? ಗ್ರಾಮೀಣ ಆರ್ಥಿಕಾಭಿವೃದ್ಧಿಗೆ ಈ ಬ್ಯಾಂಕುಗಳ ಕೊಡುಗೆ ಏನಾದರೂ ಇದೆಯೇ? ಈ ಎಲ್ಲಾ ಪ್ರಶ್ನೆಗಳು ಆಸಕ್ತಿಯನ್ನು ಕೆರಳಿಸಿದ್ದರಿಂದ, ಈ ವಿಷಯದ ಮೇಲೆ ಆಳವಾದಂತಹ ಅಧ್ಯಯನವನ್ನು ಕೈಗೊಳ್ಳುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಈ ಬ್ಯಾಂಕುಗಳು ಒದಗಿಸಿದ ಸಾಲದಿಂದ ಅನುಕೂಲ/ಅನಾನುಕೂಲವಾಗಿರುವುದನ್ನು ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶವೂ ಆಗಿರುತ್ತದೆ. ಇದು ವ್ಯಕ್ತಿಯಾಧಾರಿತ ಸಂಶೋಧನೆಯಾದ್ದರಿಂದ ಇಡೀ ರಾಷ್ಟ್ರದ ಅಧ್ಯಯನ ನಡೆಯಿಸಿ ಪರಿಣಾಮ ಕಂಡುಕೊಳ್ಳಲು ಅಸಾಧ್ಯವಾಗಿರುವುದರ ಹಿನ್ನೆಲೆಯಲ್ಲಿ ಅಧ್ಯಯನ ಪ್ರದೇಶವನ್ನು ದಕ್ಷಿಣ ಭಾರತದಲ್ಲಿ ಮೊಟ್ಟ ಮೊದಲ ಪ್ರಾದೇಶಿಕ ಗ್ರಾಮೀಣ ಬ್ಯಾಂಕಾದ ತುಂಗಭದ್ರಾ ಗ್ರಾಮೀಣ ಬ್ಯಾಂಕು (ಇಂದು ಪ್ರಗತಿ ಗ್ರಾಮೀಣ ಬ್ಯಾಂಕು) ಕಾರ್ಯನಿರ್ವಹಿಸುತ್ತಿರುವ ಪ್ರದೇಶಗಳಲ್ಲಿನ ಒಂದು ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು.

ಭಾರತವು ಸುಮಾರು ೬ ಲಕ್ಷ ಹಳ್ಳಿಗಳನ್ನು ಹೊಂದಿದ್ದು ಪ್ರತಿಶತ ೬೬ರಷ್ಟು ಜನಪದರು ಹಳ್ಳಿಗಳಲ್ಲಿ ವಾಸ ಮಾಡುತ್ತಿದ್ದಾರೆ. ಈ ಭಾಗದ ಕೃಷಿಕರು ಕಡಿಮೆ ಉತ್ಪಾದಕತೆಯನ್ನು ಹೊಂದಿರುವುದಲ್ಲದೆ ನಿರುದ್ಯೋಗ ಮತ್ತು ಕಡಿಮೆ ವರಮಾನದ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಇದರಿಂದಾಗಿ ಆ ಭಾಗದ ಜನಪದರು ಕನಿಷ್ಟ ಮಟ್ಟದ ಜೀವನ ನಡೆಸುತ್ತಿದ್ದಾರೆ.

ರಾಷ್ಟ್ರದ ಅಭಿವೃದ್ಧಿ ಸಾಧಿಸುವುದೆಂದರೆ ಗ್ರಾಮೀಣಾಭಿವೃದ್ಧಿಯನ್ನು ಸಾಧಿಸುವುದಾಗಿದೆ. ಭಾರತ ಸರಕಾರ ಸ್ವಾತಂತ್ರ್ಯ ಬಂದಾಗಿನಿಂದಲೂ ಅಭಿವೃದ್ಧಿಗೆ ಪ್ರಯತ್ನಿಸುತ್ತಲೇ ಬಂದಿದೆ. ೧೯೫೧ರಿಂದಲೇ ಬಡತನ ನಿರ್ಮೂಲನೆಗೆ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತಂದಿದೆ. ೧೯೫೧ರಿಂದ ೨೦೦೪ರವರೆಗೆ ವಿವಿಧ ಕಾರ್ಯಕ್ರಮಗಳು ರೂಪುಗೊಂಡು ಜಾರಿಯಲ್ಲಿವೆ. ಆ ಮೂಲಕ ಸಮಾಜದಲ್ಲಿನ ದುರ್ಬಲ ವರ್ಗದವರ ಜೀವನ ಮಟ್ಟವನ್ನು ಸುಧಾರಿಸುವ ಮಹತ್ವಾಕಾಂಕ್ಷೆಯನ್ನು ಹೊಂದಿತ್ತು. ಆದರೆ ಅವು ಸರ್ಕಾರವು ನಿರೀಕ್ಷಿಸಿದ ಮಟ್ಟ ತಲುಪಲಾಗಲಿಲ್ಲ.

ರಾಷ್ಟ್ರದ ಸ್ವಾತಂತ್ರ್ಯನಂತರದಲ್ಲಿ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಬದಲಾವಣೆಗಳು ಕಂಡು ಬಂದವು. ೧೯೫೫ರಲ್ಲಿ 'ಇಂಪಿರಿಯಲ್ ಬ್ಯಾಂಕ'ನ್ನು 'ಭಾರತೀಯ ಸ್ಟೇಟ್ ಬ್ಯಾಂಕಾಗಿ' ಪುನರ್ ನಾಮಕರಣ ಮಾಡಲಾಯಿತು. ೧೯೬೯ ಮತ್ತು ೧೯೮೦ರಲ್ಲಿ ೧೪ ಮತ್ತು ೬ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು. ೧೯೭೫ರಲ್ಲಿ ಬ್ಯಾಂಕು ಸ್ಥಾಯಿ ಸಮಿತಿಯ ಶಿಫಾರಸ್ಸಿನಂತೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳು ಅಸ್ತಿತ್ವಕ್ಕೆ ಬಂದವು. ಇವುಗಳ ಸಂಖ್ಯೆ ೨೦೦೭ರ ಜೂನ್ ವೇಳೆಗೆ ದೇಶದಾದ್ಯಂತ ೯೩ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೪೬೯ ಜಿಲ್ಲೆಗಳಲ್ಲಿ ೧೪, ೪೩೫ ಶಾಖೆಗಳೊಂದಿಗೆ ಕಾರ್ಯನಿರ್ವಹಿಸುತ್ತಿವೆ. ಇಂದು ರಾಷ್ಟ್ರದಲ್ಲಿನ ಪ್ರತಿಶತ ೯೫ರಷ್ಟು ಹಣಕಾಸಿನ ಸಂಪನ್ಮೂಲವನ್ನು ಸರಕಾರ ತನ್ನ ವಶಕ್ಕೆ ತೆಗೆದುಕೊಂಡಿದೆ. ಒಟ್ಟಾರೆಯಾಗಿ, ಗ್ರಾಮೀಣ ಬದುಕನ್ನು ಹಸನಾಗಿಸುವ ಉದ್ದೇಶಗಳನ್ನು ಗ್ರಾಮೀಣ ಬ್ಯಾಂಕುಗಳು ಹೊಂದಿವೆ. ಇದನ್ನು ಕೇಂದ್ರವಾಗಿಟ್ಟುಕೊಂಡು ಬ್ಯಾಂಕುಗಳ ಸಮಸ್ಯೆ ಮತ್ತು ಕಾರ್ಯಾಚರಣೆ ಬಗ್ಗೆ ಸವಿವರವಾದ ಅಧ್ಯಯನ ನಡೆಸಿ, ಈ ಬ್ಯಾಂಕುಗಳು ಗ್ರಾಮೀಣ ಜನಪದರ ಮೇಲೆ ಮತ್ತು ವಿಶೇಷವಾಗಿ ದುರ್ಬಲ ವರ್ಗದವರ ಮೇಲೆ ಎಷ್ಟರಮಟ್ಟಿಗೆ ಪ್ರಭಾವ ಬೀರಿವೆ ಹಾಗೂ ಗ್ರಾಮೀಣ ಬ್ಯಾಂಕುಗಳ ಸಾಲ, ಗ್ರಾಮೀಣ ಜನಪದರ ಉದ್ಯೋಗ ಮತ್ತು ವರಮಾನವನ್ನು ಹೆಚ್ಚಿಸುವಲ್ಲಿ ಎಷ್ಟರಮಟ್ಟಿಗೆ ಕಾರಣವಾಗಿದೆ ಎನ್ನುವುದನ್ನು ಕಂಡುಕೊಳ್ಳುವುದಕ್ಕಾಗಿ ಈ ಅಧ್ಯಯನ ನಡೆಸಲಾಗಿದೆ.

### ೧.೩. ಅಧ್ಯಯನದ ಉದ್ದೇಶಗಳು

೧. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಗ್ರಾಮೀಣ ಸಾಲದ ರಚನೆಯಲ್ಲಿ ಸಮಗ್ರ ಪಾತ್ರ ನಿರ್ವಹಿಸುತ್ತಿರುವುದರ ಬಗ್ಗೆ ಪರಿಶೀಲಿಸುವುದು.

೨. ದುರ್ಬಲ ವರ್ಗದ ನಿವಾಸಿಗಳಿಗೆ ಈ ಬ್ಯಾಂಕುಗಳು ನೀಡಿದ ಸಾಲದ ಪರಿಣಾಮಗಳನ್ನು ಕುರಿತು ಅಧ್ಯಯನ ಮಾಡುವುದು.

೩. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ತಮ್ಮ ನಿಗದಿತ ಧ್ಯೇಯ ಮತ್ತು ಗುರಿಗಳನ್ನು ತಲುಪುವಲ್ಲಿ ಇರುವ ಇತಿ-ಮಿತಿಗಳನ್ನು ಪರಿಶೀಲಿಸುವುದು.

೪. ಅಧ್ಯಯನದ ಫಲಿತಾಂಶವನ್ನು ಆಧಾರವಾಗಿಟ್ಟುಕೊಂಡು ಗ್ರಾಮೀಣ ಪ್ರದೇಶದ ಸಮತೋಲನ ಅಭಿವೃದ್ಧಿಗೆ ಸಲಹೆಗಳನ್ನು ನೀಡುವುದು.

### ೧.೪. ಅಧ್ಯಯನದ ಪರಿಕಲ್ಪನೆಗಳು

ಸಂಶೋಧನೆಯಲ್ಲಿ ಈ ಕೆಳಗಿನ ಪರಿಕಲ್ಪನೆಗಳನ್ನು ಮಾಡಿಕೊಳ್ಳಲಾಗಿದೆ.

೧. ಗ್ರಾಮೀಣ ಭಾಗದ ನಿವಾಸಿಗಳ ವರಮಾನವನ್ನು ಹೆಚ್ಚಿಸಿಕೊಳ್ಳುವಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಹಾಯ ಮಾಡಿವೆ.

೨. ಕೃಷಿ ಮತ್ತು ಕೃಷಿಯೇತರ ಗ್ರಾಮೀಣ ನಿವಾಸಿಗಳ ಉದ್ಯೋಗಾವಕಾಶವನ್ನು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಹೆಚ್ಚಿಸಿವೆ.

ಈ ಪರಿಕಲ್ಪನೆಗಳನ್ನು ೧೯೭೭ರ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸ್ಥಾಯಿ ಸಮಿತಿ ಶಿಫಾರಸ್ಸುಗಳ ಆಧಾರದಿಂದ ಮತ್ತು ೧೯೭೬ರ ಭಾರತ ಸರಕಾರದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಶಾಸನದ ಆಧಾರದ ಮೇಲೆ ಇಟ್ಟುಕೊಳ್ಳಲಾಗಿದೆ. ಇವುಗಳಲ್ಲದೆ ಇತ್ತೀಚೆಗೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳ ಮೇಲೆ ನಡೆಯಿಸಿದ ಅಧ್ಯಯನಗಳನ್ನು ಪರಿಶೀಲಿಸಲಾಗಿದೆ.

### ೧.೫. ಅಧ್ಯಯನ ವಿಧಾನ

ಈ ಅಧ್ಯಯನವು ಪ್ರಮುಖವಾಗಿ ಪ್ರಾಯೋಗಿಕವಾದುದರಿಂದ, ಇದು ಸಮೀಕ್ಷಾ ವಿಧಾನದ ಮೇಲೆ ಆಧಾರವಾಗಿದೆ. ಪ್ರಾಥಮಿಕ ವರ್ತಮಾನಗಳನ್ನು ನೇರವಾಗಿ ಆಯ್ದ ಗ್ರಾಮೀಣ ಬ್ಯಾಂಕಿನ ಶಾಖಾ ವ್ಯವಸ್ಥಾಪಕರಿಂದ ಪಡೆಯಲಾಗಿದೆ. ಅನೇಕ ಅವಶ್ಯಕ ವರ್ತಮಾನಗಳನ್ನು ಸರ್ಕಾರಿ, ಅರೆಸರಕಾರಿ ಕಛೇರಿಗಳಾದ ಜಿಲ್ಲಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಬಳ್ಳಾರಿ, ಪ್ರಗತಿ ಗ್ರಾಮೀಣ ಬ್ಯಾಂಕಿನ ಮುಖ್ಯ ಕಛೇರಿ, ಎನ್.ಐ.ಆರ್.ಡಿ. ಹೈದ್ರಾಬಾದ್, ಗ್ರಾಮೀಣಾಭಿವೃದ್ಧಿ ಬ್ಯಾಂಕಿಂಗ್, ಆರ್ಥಿಕ ಮತ್ತು ಸಾಂಖಿಕ ಸಂಸ್ಥೆ, ಕೆನರಾ ಬ್ಯಾಂಕ್ ಮುಖ್ಯ ಕಛೇರಿ, ಬೆಂಗಳೂರು, ಗೋಖಲೆ ರಾಜಕೀಯ ಮತ್ತು ಆರ್ಥಿಕ ಸಂಸ್ಥೆ ಪುಣೆ, ಆರ್.ಬಿ.ಐ. ವರದಿಗಳು ಕರ್ನಾಟಕ ಸರಕಾರದ ಅಂಕಿ-ಅಂಶಗಳು, World Bank Report ಇನ್ನು ಮುಂತಾದವುಗಳ ವರದಿಗಳನ್ನು ಪರಿಶೀಲಿಸಿ ವಿಷಯಗಳನ್ನು ಸಂಗ್ರಹಿಸಲಾಯಿತು.

ಆಳವಾದ ಅಧ್ಯಯನಕ್ಕಾಗಿ ಗ್ರಾಮೀಣ ನಿವಾಸಿಗಳಿಗೆ ಪ್ರಶ್ನಾವಳಿಗಳನ್ನು ತಯಾರಿಸಿ ಆಯ್ದ ಫಲಾನುಭವಿಗಳಿಗೆ ಪ್ರಶ್ನಾವಳಿಗಳ ಮೂಲಕ ಪರೀಕ್ಷೆಗೆ ಒಳಪಡಿಸಬೇಕಾದ ಮಾಹಿತಿಯನ್ನು ಸಂಗ್ರಹಿಸಲಾಯಿತು. ದುರ್ಬಲ ವರ್ಗಕ್ಕೆ ಸೇರಿದ ಫಲಾನುಭವಿಗಳಾದ ಸಣ್ಣ/ಅತಿಸಣ್ಣ ರೈತರು, ಸಣ್ಣ ಉದ್ದಿಮೆದಾರರು/ಕರಕುಶಲಕರ್ಮಿಗಳು, ಸಣ್ಣ ವ್ಯಾಪಾರಸ್ಥರು, ಭೂರಹಿತ ಕಾರ್ಮಿಕರೆಂದು ವಿಭಜಿಸಲಾಯಿತು. ಈ ಎಲ್ಲಾ ಗುಂಪುಗಳಲ್ಲಿ ಆಯ್ದ ನಿವಾಸಿಗಳಿಗೆ ಪ್ರಶ್ನಾವಳಿಗಳನ್ನು ನೀಡುವ ಮೂಲಕ ಮಾಹಿತಿ ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಿಕೊಳ್ಳಲಾಯಿತು.

ಜೊತೆಗೆ ಅಧ್ಯಯನದ ಉದ್ದೇಶಗಳಿಗೆ ಮತ್ತು ಸಂಶೋಧನೆಗೆ ಅವಶ್ಯಕ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲು ಈ ಕೆಳಗಿನ ಅಧ್ಯಯನ ವಿಧಾನ ಹಾಗೂ ಸಾಧನೆಗಳ ಸಹಾಯ ಪಡೆಯಲಾಗಿದೆ.

೧. ಸಂದರ್ಶನ ಮತ್ತು ಪ್ರಶ್ನಾವಳಿ ವಿಧಾನ
೨. ಅವಲೋಕನ ವಿಧಾನ
೩. ಔಪಚಾರಿಕ ಸಂದರ್ಶನಗಳು
೪. ಅನೌಪಚಾರಿಕ ಸಂದರ್ಶನಗಳು
೫. ಧ್ವನಿ ಮುದ್ರಿಕೆ ಯಂತ್ರ
೬. ಕ್ಯಾಮೆರಾ

ಮಾಹಿತಿಗಳನ್ನು ಸಂಗ್ರಹಿಸಲು ಈ ಕೆಳಕಂಡವರಿಂದ ಮಾಹಿತಿಗಳನ್ನು ಪಡೆಯಲಾಯಿತು.

೧. ಜನಪದ ಮಾಹಿತಿದಾರರು
೨. ಸಾಹಿತಿಗಳು
೩. ವಿದ್ವಾಂಸರು
೪. ಅಧಿಕಾರಿಗಳು
೫. ಸ್ಥಳೀಯ ರಾಜಕಾರಣಿಗಳು

ಎರಡನೆಯದಾಗಿ ಪ್ರಸ್ತುತ ಅಧ್ಯಯನಕ್ಕೆ ಈಗಾಗಲೇ ಗ್ರಂಥಗಳು ಹಾಗೂ ಇತರೆ ದಾಖಲೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಗತ್ಯಕ್ಕೆ ತಕ್ಕಂತೆ ಅಧ್ಯಯನದ ವಿಶ್ಲೇಷಣೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಇದರ ಜೊತೆಗೆ ಬ್ಯಾಂಕಿನ ಬಗೆಗೆ ತಿಳಿದುಕೊಂಡಿರುವ ಹಿರಿಯ ಮಾಹಿತಿದಾರರು ಹಾಗೂ ವಿದ್ವಾಂಸರೊಂದಿಗೆ ಚರ್ಚಿಸಿ ಅಧ್ಯಯನ ಮಾಡಲಾಗಿದೆ. ಇದೊಂದು ಮಾಹಿತಿ ಪ್ರಧಾನವಾದ ಅಧ್ಯಯನವಾಗಿದ್ದು, ಅಲ್ಲಲ್ಲಿ ಅಗತ್ಯಕ್ಕೆ ತಕ್ಕಂತೆ ವಿಶ್ಲೇಷಣೆಯನ್ನು ಮಾಡಲಾಗಿದೆ.

ಅಂದಿನ ತುಂಗಭದ್ರಾ ಗ್ರಾಮೀಣ ಬ್ಯಾಂಕು, (ಇಂದು ಪ್ರಗತಿ ಗ್ರಾಮೀಣ ಬ್ಯಾಂಕ್) ೭ ಜಿಲ್ಲೆಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಅಧ್ಯಯನಕ್ಕಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ೨೦೦೭ನೇ ವರ್ಷದಲ್ಲಿ ಆಯ್ಕೆ ಮಾಡಿಕೊಂಡ ಶಾಖೆಗಳಲ್ಲಿ ದುರ್ಬಲ ವರ್ಗಕ್ಕೆ ಸೇರಿದ ಖಾತೆಗಳಲ್ಲಿ ಪ್ರತಿಶತ ೫ ರಷ್ಟು ಫಲಾನುಭವಿಗಳನ್ನು ಆಯ್ಕೆ ಮಾಡಿಕೊಂಡು ಪ್ರಾಥಮಿಕ ಮಾಹಿತಿಯನ್ನು ಸಮೀಕ್ಷಾ ಆಧಾರದ ಮೇಲೆ ಸಂಗ್ರಹಿಸಲಾಯಿತು.

## ೧.೬. ಅಧ್ಯಯನದ ವ್ಯಾಪ್ತಿ

ಅಧ್ಯಯನದ ಪ್ರದೇಶವು ದಕ್ಷಿಣ ಭಾರತದಲ್ಲಿ ಪ್ರಪ್ರಥಮವಾಗಿ ಸ್ಥಾಪನೆಯಾದಂತಹ ತುಂಗಭದ್ರ ಗ್ರಾಮೀಣ ಬ್ಯಾಂಕು ಕಾರ್ಯ ನಿರ್ವಹಿಸುತ್ತಿರುವ ಪ್ರದೇಶವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ೨೦೦೫ ಸೆಪ್ಟೆಂಬರ್ ನಂತರ ಕರ್ನಾಟಕ ರಾಜ್ಯದ ಕೆನರಾ ಬ್ಯಾಂಕ್ ಪ್ರಾಯೋಜಿತ ಗ್ರಾಮೀಣ ಬ್ಯಾಂಕುಗಳೆಲ್ಲವನ್ನು ಒಂದುಗೂಡಿಸಿ ಪ್ರಗತಿ ಗ್ರಾಮೀಣ ಬ್ಯಾಂಕ್ ಅಸ್ತಿತ್ವಕ್ಕೆ ಬಂದಿತು. ಇಂದು ೭ ಜಿಲ್ಲೆಗಳ ವ್ಯಾಪ್ತಿಯಲ್ಲಿ ೩೫೧ ಶಾಖೆಗಳೊಡನೆ ಈ ಬ್ಯಾಂಕು ಕಾರ್ಯನಿರ್ವಹಿಸುತ್ತದೆ. ಅಧ್ಯಯನಕ್ಕಾಗಿ ಬಳ್ಳಾರಿ ಜಿಲ್ಲೆಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಜಿಲ್ಲೆಯಲ್ಲಿರುವ ಎಲ್ಲಾ ತಾಲೂಕುಗಳಲ್ಲಿ ಒಂದೊಂದು ಬ್ಯಾಂಕ್ ಶಾಖೆಯನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಈ ಜಿಲ್ಲೆಯು ತುಂಗಾಭದ್ರ ಯೋಜನಾ ಪ್ರದೇಶದಲ್ಲಿದ್ದು ರಾಜ್ಯದ ಉತ್ತರ ಭಾಗದಲ್ಲಿದೆ. ೨೦೦೧ರ ಜನಗಣತಿಯ ಪ್ರಕಾರ ಈ ಜಿಲ್ಲೆಯ ಪ್ರತಿಶತ ೬೫ ಜನಪದರು ಗ್ರಾಮೀಣ ಪ್ರದೇಶಗಳಲ್ಲಿ ವಾಸ ಮಾಡುತ್ತಿದ್ದಾರೆ. ಜಿಲ್ಲೆಯಲ್ಲಿ ಒಟ್ಟಾರೆ ೫೨೪ ಜನವಸತಿ ಹಳ್ಳಿಗಳು, ೩೦ ಜನ ವಸತಿ ರಹಿತ ಹಳ್ಳಿಗಳಿವೆ. ಜಿಲ್ಲೆಯಲ್ಲಿ ಬಿತ್ತನೆ ಪ್ರದೇಶವು ೫೩೧.೮೧ ಹೆಕ್ಟೇರ್‌ನಷ್ಟು ಇದ್ದು, ಅದರಲ್ಲಿ ೧೬೧.೨೨ ಹೆಕ್ಟೇರ್‌ನಷ್ಟು ನೀರಾವರಿಗೆ ಒಳಪಟ್ಟಿದೆ. ಇಲ್ಲಿ ಪ್ರತಿಶತ ೧೩ರಷ್ಟು ಪರಿಶಿಷ್ಟ ಜಾತಿ, ೧೩.೮ರಷ್ಟು ಪರಿಶಿಷ್ಟ ವರ್ಗಕ್ಕೆ ಸೇರಿರುತ್ತಾರೆ.

ಜಿಲ್ಲೆಯಲ್ಲಿ ಕೃಷಿ ಮುಖ್ಯ ವೃತ್ತಿಯಾಗಿದ್ದು, ಜಿಲ್ಲೆಯ ಕೆಲವು ಭಾಗಗಳನ್ನು ಬರಗಾಲ ಪ್ರದೇಶಗಳೆಂದು ಸರ್ಕಾರ ಘೋಷಿಸಿದೆ. ಈ ಎಲ್ಲಾ ಅಂಶಗಳು ಅಧ್ಯಯನಕ್ಕೆ ಸೂಕ್ತ ಹಾಗೂ ಪ್ರಸ್ತುತ ಅಧ್ಯಯನಕ್ಕೆ ಈ ಪ್ರದೇಶವನ್ನು ಆಯ್ಕೆ ಮಾಡಿಕೊಳ್ಳಲಾಗಿತ್ತು.

ಈ ಜಿಲ್ಲೆಯಲ್ಲಿ ೬೫ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿದ್ದು, ಗ್ರಾಮೀಣ ಪ್ರದೇಶಗಳಲ್ಲಿ ೪೮ ಶಾಖೆಗಳು ಬಹು ದೂರದ ಹಳ್ಳಿಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಅಂದರೆ ಪ್ರತಿಶತ ೭೪ ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿವೆ. ೭ ತಾಲೂಕುಗಳಲ್ಲಿ ಆಯ್ಕೆ ಮಾಡಿಕೊಂಡ ಶಾಖೆಗಳೆಂದರೆ ಸೋಗಿ (ಹಡಗಲಿ), ಹಂಪಸಾಗರ (ಹಗರಿಬೊಮ್ಮನಹಳ್ಳಿ), ಮರಿಯಮ್ಮನಹಳ್ಳಿ (ಹೊಸಪೇಟೆ), ಬಾಣಪುರ (ಬಳ್ಳಾರಿ), ರಾರಾವಿ (ಶಿರಗುಪ್ಪಾ), ದರೋಜಿ (ಸಂಡೂರು) ಖಾನಹೊಸಹಳ್ಳಿ, (ಕೂಡ್ಲಿಗಿ) ಈ ಶಾಖೆಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು.

ಹವಾಮಾನ, ಸಾಲ ವಿತರಣೆ, ಭೂಮಿಯ ಗುಣಧರ್ಮ, ವೃತ್ತಿ ರಚನೆ, ಮಳೆಯ ಪ್ರಮಾಣ ಇನ್ನೂ ಮುಂತಾದ ಅಂಶಗಳು ಜಿಲ್ಲೆಯಿಂದ ಜಿಲ್ಲೆಗೆ, ರಾಜ್ಯದಿಂದ ರಾಜ್ಯಕ್ಕೆ ಬದಲಾವಣೆಯಾಗಿರುತ್ತವೆ. ಆದಕಾರಣ ಅಧ್ಯಯನದ ಫಲಿತಾಂಶವನ್ನು ರಾಷ್ಟ್ರಮಟ್ಟದಲ್ಲಿ ಸಾಮನ್ಯೀಕರಿಸುವುದು ಕಷ್ಟಕರವಾಗಿದೆ. ಈ ಎಲ್ಲಾ ಇತಿ-ಮಿತಿಗಳ ನಡುವೆ ಸಾಧ್ಯವಿದ್ದ ಎಲ್ಲಾ ಪ್ರಯತ್ನ ಮಾಡಿ ಅಧ್ಯಯನಕ್ಕೆ ಬೇಕಾದ ವಿಷಯಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ.

ಅಧ್ಯಯನವು ಸಮೀಕ್ಷಾ ಮಾದರಿಯದ್ದಾಗಿರುವುದರಿಂದ ಪ್ರಾಥಮಿಕ, ಮಾಧ್ಯಮಿಕ ಅಂಕಿ-ಅಂಶಗಳನ್ನೇ ಸಂಗ್ರಹಿಸಿ, ಸಂಸ್ಕರಿಸಿ ಪ್ರತ್ಯೇಕವಾದ ಪಟ್ಟಿಯನ್ನು ರಚಿಸಲಾಗಿದೆ. ಈ ವಿಶ್ಲೇಷಣೆಯು ಆಸ್ತಿಗಳು, ಭೂ ಒಡೆತನ, ಸಾಗುವಳಿವೆಚ್ಚ, ಉತ್ಪಾದನೆಯಿಂದ ವರಮಾನ ಮತ್ತು ಉದ್ಯೋಗಕ್ಕೆ ಸಂಬಂಧಿಸಿದ ಕ್ಷೇತ್ರವಾರು ಪಟ್ಟಿಗಳ ಅಧ್ಯಯನ ಹೊಂದಿದೆ. ಅಧ್ಯಯನೆವು ನಿಗದಿಪಡಿಸಲ್ಪಟ್ಟ ಪರಿಕಲ್ಪನೆಗಳ ಪರೀಕ್ಷೆಗೆಂದು ಯಾವುದೇ ಸಂಖ್ಯಾಶಾಸ್ತ್ರದ ತಂತ್ರವನ್ನು ಉಪಯೋಗ ಮಾಡಿ ವಿಶ್ಲೇಷಿಸುವುದು ಸಾಧ್ಯವಾಗಿಲ್ಲ. ಆದರೆ ಪರಿಕಲ್ಪನೆಗಳನ್ನು ಅಧ್ಯಯನದಲ್ಲಿ ಸರಸಾರಿ ಮತ್ತು ಪ್ರತಿಶತ ಅಂಶಗಳ ಸಹಾಯದಿಂದ ಪರೀಕ್ಷೆಗೊಳಪಡಿಸಲಾಗಿದೆ. ಆದಕಾರಣ ಅಧ್ಯಯನವು ಸಾಮಾನ್ಯವಾಗಿ ವಿಶ್ಲೇಷಣೆಯನ್ನು ಸರಾಸರಿ ಮತ್ತು ಪ್ರತಿಶತ ಅಂಕಿ-ಅಂಶಗಳನ್ನು ಅವಲಂಬಿಸಿರುವುದು ಅನಿವಾರ್ಯವೆನಿಸುತ್ತದೆ.

# ಅಧ್ಯಾಯ ಎರಡು

# ಬ್ಯಾಂಕುಗಳ ಪರಿಕಲ್ಪನೆ: ಜನಪದರ ದೃಷ್ಟಿ ಮತ್ತು ಪ್ರಜ್ಞೆ

೨.೧. ಪೀಠಿಕೆ

೨.೨. ಆದಿ ಮಾನವನ ಸಂಸ್ಕೃತಿ

೨.೩. ಪ್ರಾಚೀನ ಕಾಲದ ಬ್ಯಾಂಕುಗಳು

೨.೪. ಕಡ ಮತ್ತು ಸಾಲ ಪದ್ಧತಿ

೨.೫. ದೇಶಿ ಬ್ಯಾಂಕರರು

೨.೬. ದೇಶಿ ಬ್ಯಾಂಕರರ ದೋಷಗಳು

೨.೭. ಆಧುನಿಕ ಬ್ಯಾಂಕಿಂಗ್ ವ್ಯವಹಾರದ ಬೆಳವಣಿಗೆ

೨.೮. ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಪತ್ತು

೨.೯. ಸಾಮಾಜಿಕ ನಿಯಂತ್ರಣ ಮತ್ತು ವಾಣಿಜ್ಯ ಬ್ಯಾಂಕಿನ ರಾಷ್ಟ್ರೀಕರಣ

೨.೧೦. ಆದ್ಯತಾ ವಲಯ ಮತ್ತು ವಾಣಿಜ್ಯ ಬ್ಯಾಂಕುಗಳು

೨.೧೧. ಗ್ರಾಮೀಣ ಪತ್ತಿನಲ್ಲಿ ಸಹಕಾರ ಸಂಸ್ಥೆಗಳು

### ಅಧ್ಯಾಯ ಎರಡು

## ಬ್ಯಾಂಕುಗಳ ಪರಿಕಲ್ಪನೆ: ಜನಪದ ದೃಷ್ಟಿ ಮತ್ತು ಪ್ರಜ್ಞೆ

### ೨.೧. ಪೀಠಿಕೆ

ಅನುಭವ ಸಾರದಿಂದ ಬೆಳೆದುಕೊಂಡು ಬಂದ ನಮ್ಮ ಸಂಸ್ಕೃತಿ ಒಮ್ಮೆಲೆ ಉದ್ಭವಿಸಿದ್ದಲ್ಲ. ಅದಕ್ಕೆ ತನ್ನದೇ ಆದ ಚರಿತ್ರೆಯಿದೆ, ಸೊಗಡಿದೆ, ಸಾಗಿ ಬಂದ ಕ್ರಮಯಿದೆ. ನಮ್ಮ ಇತಿಹಾಸವನ್ನು ಬಿಚ್ಚಿಡುವ ಪ್ರಮುಖ ಆಕರವಾಗಿ ಈ ಸಾಂಸ್ಕೃತಿಕ ಅಂಶಗಳು ಕೆಲಸ ಮಾಡುತ್ತವೆ. ಶಿಷ್ಟ ರೂಪದಲ್ಲಿ ಕಂಡು ಬರುವ ಸಾಂಸ್ಕೃತಿಕ ಅಂಶಗಳಿಗೆಲ್ಲಾ ಪ್ರೇರಣೆ ಜನಪದವೇ ಎನ್ನುವುದನ್ನು ಮರೆಯಬಾರದು. ಶಿಷ್ಟ ರೂಪದಲ್ಲಿ ಕಂಡು ಬರುವ ಈಗಿನ ಜೀವ ಪರಿಸರಕ್ಕೆ ಜನಪದರ ಆಶಯವೇ ಮೂಲ. ಜನಪದ ಎಂದರೇನು? ಎಂಬುದನ್ನು ಕುರಿತು ಹಲವಾರು ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ. ಒಂದು ನಿರ್ದಿಷ್ಟವಾದ ಪ್ರದೇಶದಲ್ಲಿ ವಾಸ ಮಾಡುವ ಜನಸಮುದಾಯವನ್ನು 'ಜನಪದ'[೧] ಎಂದು ವಿದ್ವಾಂಸರು ಕರೆಯುತ್ತಾರೆ. ೧೯ನೇ ಶತಮಾನದ ನಂತರ FOLKLORE ಶಬ್ದ ಸೃಷ್ಟಿಯಾಯಿತು. W.J. ಥಾಮ್ಸ್[೨] ಅವರು ೧೮೪೬ರಲ್ಲಿ ಜಾನಪದಕ್ಕೆ FOLKLORE ಎಂದು ನಾಮಕರಣ ಮಾಡಿದರು. ಪ್ರಪಂಚದಾದ್ಯಂತ ಆ ಪದವೇ ಹೆಚ್ಚು ಸ್ವೀಕಾರವಾಯಿತು. ಕರ್ನಾಟಕದಲ್ಲಿ FOLKLOREಗೆ ಸಂವಾದಿಯಾಗಿ ಜಾನಪದ ಪದವನ್ನು ಒಪ್ಪಿಕೊಳ್ಳಲಾಯಿತು.

ಜನಪದ ಅಂಶಗಳು ಗತಕಾಲದಲ್ಲಿ ಸೃಷ್ಠಿಯಾಗಿ ಪಳಿಯುಳಿಕೆಯಾಗಿ ಮಾತ್ರವಿರದೇ ಸಮಕಾಲೀನ ಪರಿಸರದಲ್ಲಿಯು ಸೃಷ್ಠಿಯಾಗುತ್ತವೆ. ಅಷ್ಟೇ ಅಲ್ಲದೆ, ಭವಿಷ್ಯದಲ್ಲೂ ನಿರಂತರವಾಗಿ ಸೃಷ್ಠಿಯಾಗುತ್ತವೆ ಎಂದು ಅಲೆನ್ ಡೆಂಡಸ್[೩] ಹೇಳುತ್ತಾರೆ. ಜೀವನದ ರೀತಿ-ನೀತಿಗಳು, ಆಚಾರ ವಿಚಾರಗಳು, ಸಂಪ್ರದಾಯ ನಂಬಿಕೆಗಳು, ಒಂದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿ ಬರುತ್ತವೆಂದು ಎಡ್ವಿನ್ ಸಿಡ್ನಿ ಹಾರ್ಸಲ್ಯಾಂಡ್[೪] ತಿಳಿಸಿದ್ದಾರೆ. ಬಿ.ಎ. ಬಾಟ್ಕನ್ In a Purely Oral Culture Every thing is Folklore[೫] ಎಂದಿದ್ದಾರೆ. ಕವಿರಾಜಮಾರ್ಗ[೬] ಎಂಬ ಕನ್ನಡ ಗ್ರಂಥದಲ್ಲಿ ಕರ್ನಾಟಕವೆಂಬ ಪ್ರದೇಶದಲ್ಲಿ ವಾಸಿಸುವ ಜನರನ್ನು ಜನಪದವೆಂದು ಕರೆಯಲಾಗಿದೆ.

ಜರ್ಮನ್ ತತ್ವಶಾಸ್ತ್ರಜ್ಞ ಹರ್ಡರ್ ೧೮ನೇ ಶತಮಾನದ ಕೊನೆಯ ಭಾಗದಲ್ಲಿ ಯುರೋಪಿಯನ್ ಅಭಿಜಾತರ ವಿರುದ್ಧವಾಗಿ ಪ್ರತಿಪಾದಿಸಿದ ರಮ್ಯ ರಾಷ್ಟ್ರೀಯವಾದದಿಂದಾಗಿ ಜರ್ಮನ್, ಫಿನ್ಲೆಂಡ್, ಐರ್ಲೆಂಡ್, ಫ್ರಾನ್ಸ್ ಮುಂತಾದ ದೇಶಗಳಲ್ಲಿ ಜಾನಪದ ಸಂಗ್ರಹ ಮತ್ತು ಸಂಪಾದನಾ ಕಾರ್ಯ

ನಡೆಯಲು ಕಾರಣವಾಯಿತು. ಪ್ರತಿಯೊಂದು ದೇಶವು ತನ್ನ ಕೀಳರಿಮೆಯನ್ನು ಕಳೆದುಕೊಂಡು ಸಾಂಸ್ಕೃತಿಕ ಅನನ್ಯತೆಯನ್ನು ಕಂಡುಕೊಳ್ಳಲು, ಸ್ವಾತಂತ್ರ್ಯ ಗಳಿಸಿಕೊಳ್ಳಲು ಜನಸಾಮಾನ್ಯರನ್ನು ಒಗ್ಗೂಡಿಸಲು ರಮ್ಯ ರಾಷ್ಟ್ರೀಯವಾದ ನೆರವಾಯಿತು.[೭]

ರಾಷ್ಟ್ರದ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಲಾವಣಿ, ಗೀಗೀ ಪದಗಳ ಮೂಲಕ ಜನರಲ್ಲಿ ಜನಜಾಗೃತಿ ಉಂಟುಮಾಡುವಲ್ಲಿ ಜನಪದವು ಬಹಳಷ್ಟು ಯಶಸ್ವಿಯಾಗಿತ್ತು. ಪರಂಪರಾನುಗತವಾಗಿ ಜನರ ಬಾಯಲ್ಲಿ ಉಳಿದು ಬಂದ ಈ ಜಾನಪದವು ವ್ಯಾಪಕವೂ ವೈವಿಧ್ಯಪೂರ್ಣವು ಆದುದಾಗಿದೆ.[೮] ಬಾಯಿ ಮಾತಿನ ಮೂಲಕ ಲಭ್ಯವಾಗುವ ಗೀತೆ, ಲಾವಣಿ, ಕಾವ್ಯ, ಗಾದೆ, ಒಗಟು, ಒಡಪು, ನುಡಿಗಟ್ಟು, ಶಿಶುಪ್ರಾಸ ಅಣುಕು ನುಡಿಗಳು, ಯಾಂತ್ರಿಕ ನುಡಿಗಳು, ಶಾಪಗಳು ಬೈಗಳ ಮುಂತಾದವುಗಳು ಜನಪದ ಅಂಶಗಳಾಗಿವೆ. ಜಾರ್ಜ ಎಂ. ಪಾಸ್ಟರ್ "ಅಲಿಖಿತ ರೂಪದ ಸಾಹಿತ್ಯ ಶಿಕ್ಷಿತ ಜನಾಂಗದಲ್ಲಿರಲಿ, ಅಶಿಕ್ಷಿತ ಜನಾಂಗದಲ್ಲಿರಲಿ, ಅದು ಅರ್ಥೈಸುವುದೇ ಜಾನಪದ[೯] ಮೇರಿಯನ್ ಬಾಕ್ಸ್ "ಗ್ರಂಥಸ್ಥ ಮೂಲಕ್ಕೆ, ಮುದ್ರಣಕ್ಕೆ ಸಂಬಂಧ ಪಡದೆ, ಶಾಲಾ ಉಪಾಧ್ಯಾಯರಿಗೆ ಸಂಬಂಧ ಪಡದೇ, ತಲೆಮಾರಿನಿಂದ ತಲೆಮಾರಿಗೆ, ಹಿರಿಯರಿಂದ ಕಿರಿಯರಿಗೆ ನಿರ್ದೇಶನಗಳ ಮೂಲಕ ಅಥವಾ ಮಾತಿನ ಮೂಲಕ ಸಾಗಿ ಬಂದಿರುವ ಹಿಂದಿನ ಜ್ಞಾನ, ಅನುಭವ, ಜಾಣ್ಮೆ, ಕೌಶಲ, ಹವ್ಯಾಸ ಹಾಗೂ ಆಚರಣೆಗಳೇ ಜಾನಪದ"[೧೦]ವೆಂದಿದ್ದಾರೆ.

ಜಾನಪದವೆಂದರೆ ನಿರ್ದಿಷ್ಟ ಜನ ಸಮುದಾಯದ ಜೀವಂತ ಚಟುವಟಿಕೆಯೇ ಹೊರತು ಒಂದು ಕಾಲಕ್ಕೆ ಬದ್ಧವಾದ ಸ್ಥಗಿತಗೊಂಡ ಜ್ಞಾನದ ಮೊತ್ತವಲ್ಲ ಅಥವಾ ಒಂದಿಷ್ಟು ಕಾಲದ ಪ್ರಾಚೀನತೆಯನ್ನು ತಲುಪುವವರೆಗೂ ಅದು ಜನಪದವಾಗಲಾರದು. ಪಳಿಯುಳಿಕೆಯ ಸಾಮಗ್ರಿಯ ಬಗೆಗೂ ಅಲ್ಲವೆಂದು ವಿದ್ವಾಂಸರು ತಿಳಿಸಿದ್ದಾರೆ.

ಜಾನಪದವು ವೈವಿಧ್ಯಮಯವಾಗಿದ್ದು, ವಿನೂತನ ವ್ಯಾಪಕತೆಯಿಂದಾಗಿ ಎಲ್ಲಾ ವರ್ಗದ ಜನರನ್ನು ಆಕರ್ಷಿಸುತ್ತದೆ. ಮಾನವೀಯ ಮೌಲ್ಯಗಳನ್ನು ಅರಿಯಲು ಸಮಾಜದ ಬಗೆಗೆ ತಿಳಿಯಲು, ನಿರ್ಲಕ್ಷ್ಯ ಜನಾಂಗದ ಬದುಕನ್ನು ಅರ್ಥಮಾಡಿಕೊಳ್ಳಲು, ಸಂಸ್ಕೃತಿಯ ಪೂರ್ಣ ಮಾಹಿತಿ ಪಡೆಯಲು, ಶೋಷಿತ ಜನಸಮುದಾಯದ ಧ್ವನಿಯನ್ನು ಗುರುತಿಸಲು, ಜಾನಪದವು ನೆರವಾಗುತ್ತದೆ. ಇದು ವರ್ತಮಾನ ಕಾಲಕ್ಕೆ ಭೂತಕಾಲದ ಕೊಂಡಿಯನ್ನು ಸೇರಿಸುವಂತಹ ಕೈಂಕರ್ಯವನ್ನು ನಿರ್ವಹಿಸುವಂತಹದ್ದು, ನಾಗರೀಕ ಜೀವನ ನಿಸ್ಸಾರವಾದಾಗ ಜಾನಪದ ಅದನ್ನು ಸಾರವಾಗಿ ಪರಿವರ್ತಿಸಿ ಹೊಸ ಹುರುಪು ತುಂಬಲು ನೆರವಾಗುತ್ತದೆ. ಈ ಅಂಶವನ್ನು ಗಮನಿಸಿದಾಗ ಜಾನಪದದ ಮಹತ್ವವನ್ನು ತಿಳಿಯಲು ಸಹಾಯಕಾರಿಯಾಗುತ್ತದೆ. ಜಾನಪದವೆಂಬುದು ತರ್ಕಬದ್ಧತೆಯನ್ನೊಳಗೊಂಡು, ಸಂಸ್ಕೃತಿಯಲ್ಲಿ ಅರ್ಥಪೂರ್ಣವಾದ ಪಾತ್ರವಹಿಸುವ ವಿಷಯವಾಗಿದೆಯೆಂಬುದನ್ನು ಕಾಣಬಹುದು.

### ೨.೨. ಆದಿಮಾನವ ಸಂಸ್ಕೃತಿ

ಆದಿಮಾನವ ಸಂಸ್ಕೃತಿಯು ಆರಂಭವು ಕ್ರಿ.ಪೂ. ೫೦ ಲಕ್ಷ ವರ್ಷಗಳ ಹಿಂದೆಯೇ ಆರಂಭವಾಯಿತು.

ಮಾನವನು ಹುಟ್ಟಿದಂದಿನಿಂದಲೇ ಭೂಮಿಯ ಮೇಲಿನ ಸಂಬಂಧ ಆರಂಭವಾಯಿತು. ಇದು ಮಾನವನಿಗೆ ಮಾತ್ರ ಸೇರಿದ್ದು ಎಂದು ಈಗಲೂ ಭಾವಿಸಿದ್ದಾನೆ. ಅದು ಪ್ರಾಣಿ ಪಕ್ಷಿ ಕುಲಕ್ಕೂ ಸೇರಿದೆ ಎಂಬುದನ್ನು ಇಂದಿನ ಜನಪದರು ಕಡೆಗಣಿಸಿದ್ದಾರೆ. ಇವರು ಪ್ರಾಣಿಗಳು ಹೇಗೆ ಜೀವಿಸುತ್ತಾ ಬಂದಿದ್ದವೋ ಹಾಗೆಯೇ ಆ ಪ್ರಾಣಿಗಳನ್ನು ಅನುಸರಿಸಿ ಬದುಕನ್ನು ಸಾಗಿಸುತ್ತಿದ್ದರು. ಪಶು, ಪಕ್ಷಿ, ಪ್ರಾಣಿ, ಗಿಡ, ಮರ, ಭೂಮಿ, ಸೂರ್ಯ ಚಂದ್ರಾದಿಗಳೆಲ್ಲಾ ತನ್ನಂತೆಯೇ ಜೀವವಿದ್ದು, ಅವುಗಳು ಸಹ ತಮ್ಮಂತೆ ವರ್ತಿಸಬಲ್ಲವು ಎಂಬ ದೃಢವಾದ ನಂಬಿಕೆಯು ಈ ಜನಪದರಲ್ಲಿತ್ತು; ಎಂದು ಕಾಕ್ಸ್‌ನ್[೨](ಜಾನ್) ಹೇಳಿದ್ದಾನೆ.

ಈ ಸಂಸ್ಕೃತಿಯಲ್ಲಿನ ಜನಪದರ ಜೀವನವು ಹೋರಾಟಮಯವಾಗಿತ್ತು. ಇವರು ಅನೇಕ ರೀತಿಯ ಕಷ್ಟಗಳನ್ನು ಎದುರಿಸಬೇಕಾಗಿತ್ತು. ನೈಸರ್ಗಿಕ ವಿಕೋಪಗಳಾದ ಮಳೆ, ಬಿರುಗಾಳಿ, ಮಿಂಚು, ಗುಡುಗು, ಸಿಡಿಲುಗಳಲ್ಲದೆ, ಕಾಡಿನಲ್ಲಿರುವ ವನ್ಯಮೃಗಗಳು ವಿಷಜಂತುಗಳು ಕಲ್ಲು ಮುಳ್ಳುಗಳ ಭಯದಿಂದಲೇ ಜೀವನ ಸಾಗಿಸಬೇಕಾಗಿತ್ತು. ಇವರು ತಮ್ಮ ಆಹಾರವನ್ನು ಸಂಪಾದಿಸಲು ಆ ಪ್ರದೇಶದಲ್ಲಿ ನೈಸರ್ಗಿಕವಾಗಿ ದೊರೆಯುವ ಗೆಡ್ಡೆ, ಗೆಣಸು, ಹಣ್ಣು-ಹಂಪಲುಗಳನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಕ್ರಿ.ಪೂ. ೧೫೦೦೦ ವರ್ಷಗಳ ಹಿಂದೆಯೇ ಜನಪದರಿಗೆ ಗೆಡ್ಡೆ, ಗೆಣಸುಗಳ ಆಹಾರ ಪದಾರ್ಥಗಳು ದೊರೆಯದಿದ್ದಾಗ, ಅನಿವಾರ್ಯವಾಗಿ ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಪ್ರಾಣಿಗಳ ಬೇಟೆಗೆ ಚೂಪಾದ ಕಲ್ಲಿನ ತುಂಡುಗಳನ್ನು, ಮರದ ಕೊಂಬೆಗಳನ್ನು ಬಳಸುತ್ತಿದ್ದರು. ವನ್ಯಮೃಗಳಿಂದ ರಕ್ಷಣೆ ಪಡೆಯಲು ಮರದ ತುಂಡುಗಳು ಮತ್ತು ಕಲ್ಲಿನ ಆಯುಧಗಳನ್ನು ಬಳಸಿಕೊಂಡಿದ್ದಾರೆ. ಹೀಗೆ ಆಹಾರ ಪದಾರ್ಥಗಳ ಹುಡುಕಾಟದಲ್ಲಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಗಳಿಗೆ ಅಲೆದಾಡುತ್ತಾ ಅಲೆಮಾರಿಯಾಗಿದ್ದರು. ತಾವು ಪಡೆದಂತಹ ಆಹಾರ ಪದಾರ್ಥಗಳನ್ನು ಪರಸ್ಪರ ಹಂಚಿಕೊಂಡು ಜೀವನ ನಿರ್ವಹಿಸುತ್ತಿದ್ದರು.

ಜನಪದ ಸಂಸ್ಕೃತಿಯಲ್ಲಿ ಜನಪದರು ಆಹಾರಕೋಸ್ಕರವಾಗಿ ಅಲೆದಾಡುವಾಗ ಕಾಡಿನಲ್ಲಿ ಕಾಡುಕಿಚ್ಚಿನಿಂದ ಅನೇಕ ಪ್ರಾಣಿಗಳು ಅರೆಬೆಂದು, ಬೆಂದು, ಸುಟ್ಟು ಕರಕರಲಾಗಿರುತ್ತಿದ್ದವು. ಇವರು ತಮ್ಮ ಹಸಿವನ್ನು ತೀರಿಸಿಕೊಳ್ಳಲು ಅನಿವಾರ್ಯವಾಗಿ ಈ ಪ್ರಾಣಿಗಳ ಮಾಂಸವನ್ನು ಸೇವಿಸುತ್ತಿದ್ದರು. ಇದರಿಂದಾಗಿ ಬೆಂದ ಮಾಂಸದ ರುಚಿಯನ್ನು ಕಂಡುಕೊಂಡರು. ಆ ನಂತರದಲ್ಲಿ ಬೆಂಕಿಯನ್ನು ಕಂಡು ಹಿಡಿಯಲು ಪ್ರಯತ್ನಿಸಿ, (ಚಕಮಕಿ ಕಲ್ಲಿನ ಸಹಾಯದಿಂದ) ಯಶಸ್ಸನ್ನು ಕಂಡುಕೊಂಡರು. ಆ ಯಶಸ್ಸಿನ ನಂತರ ತಾನು ಸಂಗ್ರಹಿಸಿದ ಗೆಡ್ಡೆ-ಗೆಣಸು, ಬೇಟೆಯಾಡಿದ ಪ್ರಾಣಿಗಳನ್ನು ಸುಟ್ಟುಕೊಂಡು ತಿನ್ನಲಾರಭಿಸಿದರು. ಇವರು ಪ್ರಾಣಿಗಳನ್ನು ಎದುರಿಸಲು ಹಾಗೂ ತಮ್ಮ ದೇಹವನ್ನು ಬೆಚ್ಚಗಿಡಲು ಬೆಂಕಿಯ ಉಪಯೋಗವನ್ನು ಪಡೆದುಕೊಂಡರು.

ಇವರು ತಮ್ಮನ್ನು ನೈಸರ್ಗಿಕ ವಿಕೋಪಗಳಿಂದ ಮತ್ತು ಕಾಡು ಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಗಿಡ ಮರದ ಪೊಟರೆಗಳಲ್ಲಿ ಹಾಗೂ ಕಲ್ಲು ಬಂಡೆಗಳಲ್ಲಿ ಆಸರೆ ಪಡೆಯುತ್ತಿದ್ದರು. ಕೆಲವು ಸಂದರ್ಭಗಳಲ್ಲಿ

ನಿಸರ್ಗದತ್ತವಾದ ಗವಿಗಳನ್ನು ಕಂಡುಕೊಂಡು ಅಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡರು. ಅಲ್ಲದೆ ತಾವು ಬೇಟೆಯಾಡಿದ ಪ್ರಾಣಿಗಳ ಚರ್ಮವನ್ನು ತಮ್ಮ ದೇಹ ರಕ್ಷಣೆಗೆ ಬಳಸಿಕೊಳ್ಳಲಾರಂಭಿಸಿದರು. ನಿಸರ್ಗದ ನಿಗೂಢತೆಯ ವಿರುದ್ಧ ಸೆಣಸಾಡುವುದು. ಕಾಡು ಪ್ರಾಣಿಗಳಿಂದ ತನ್ನನ್ನು ರಕ್ಷಿಸಿಕೊಳ್ಳುವುದು ಕಷ್ಟಕರವಾದಾಗ, ಇತರರ ಸಹಾಯ ಪಡೆಯುವುದು ಅನಿವಾರ್ಯವಾಯಿತು. ಇದರಿಂದಾಗಿ ಕುಟುಂಬ ವ್ಯವಸ್ಥೆಯು ಅಸ್ತಿತ್ವಕ್ಕೆ ಬಂದು ಒಂದೆಡೆ ನೆಲೆ ನಿಲ್ಲುವುದು ಅನಿವಾರ್ಯವಾದಾಗ, ನದಿ ಮೂಲದ ಫಲವತ್ತಾದ ಪ್ರದೇಶದ ಕಡೆ ಜನಪದರು ವಾಸಿಸಲಾರಂಭಿಸಿದರು. ಹೀಗೆ ಕೆಲವು ಕುಟುಂಬಗಳು ನೆರೆ-ಹೊರೆಯಾಗಿ ಒಂದೆಡೆ ನಿಲ್ಲಲಾರಂಭಿಸಿದರು. ಮಾನವ ಸ್ವಭಾವತಃ ಸಂಘಜೀವಿಯಾಗಿದ್ದರಿಂದ ಸಮೂಹ ಜೀವನ ಆರಂಭವಾಯಿತು. ಸಮೂಹ ಜೀವನದ ಸಹಜ ಪ್ರೌವೃತ್ತಿ ಪಂಗಡ, ಬಂಧನ, ಕಾಡು ಪ್ರಾಣಿಗಳಿಂದ ರಕ್ಷಣೆ, ಪರಸ್ಪರ ಸಹಕಾರ, ನೆರವು ಈ ಎಲ್ಲಾ ಅಂಶಗಳು ಗ್ರಾಮೀಣ ಸಮುದಾಯಗಳ ಉಗಮಕ್ಕೆ ಕಾರಣವಾದವು. ಈ ಸಮುದಾಯಗಳೇ ಮುಂದೆ ಗ್ರಾಮಗಳಾಗಿ ಪರಿವರ್ತನೆಗೊಂಡವು ಎನ್ನಬಹುದು.

೧೯ನೇ ಶತಮಾನದ ೭ನೇಯ ದಶಕದಲ್ಲಿ ದಕ್ಷಿಣ ಭಾರತದ ಹಲವಾರು ಪ್ರದೇಶಗಳಲ್ಲಿ ಮಾನವರು ನೆಲೆಸಿದ ಕಲ್ಲುಗಳೊಡಗೂಡಿದ ನೆಲೆಯನ್ನು ಗುರುತಿಸಿದವರು ರಾಬರ್ಟ್ ಬ್ರೂಸಪೇಟ.[೧೪] ಇವರು ಕ್ರಿ.ಶ. ೧೮೭೩ ರಿಂದ ೧೮೮೦ರವರೆಗೆ ಕರ್ನಾಟಕ ರಾಜ್ಯದ ತುಮಕೂರು, ಕಡೂರು, ನಿಡುಗಟ್ಟ ಇನ್ನೂ ಮುಂತಾದ ಪ್ರದೇಶಗಳಲ್ಲಿ ಹಳೆ ಶಿಲಾಯುಗದ ಪಳಿಯುಳಿಕೆಯನ್ನು ಸಂಗ್ರಹಿಸಿದ್ದರು. ಇವರು ಸುರಪುರ ತಾಲೂಕಿನ ಹುಣಸಗಿ ನೆಲೆಯಲ್ಲಿ ಆದಿ ಶಿಲಾಯುಗದ ಸುಮಾರು ೨ ಲಕ್ಷ ವರ್ಷಗಳ ಹಿಂದೆ ಮಾನವರು ತಮ್ಮನ್ನು ನೈಸರ್ಗಿಕ ವಿಪತ್ತಿನಿಂದ ರಕ್ಷಿಸಿಕೊಳ್ಳುವ ಅವಶೇಷಗಳನ್ನು ಪತ್ತೆ ಮಾಡಿದರು. ಇವರು ಅಪೊಲಿಯನ್ ಪ್ರಕಾರದ, ಕೈಗೊಡಲಿ, ಕಲ್ಲಿನ ಚಕ್ಕೆಗಳು ಮತ್ತು ತಮಗೆ ಅನುಕೂಲವಾಗುವ ಸಸ್ಯ ಸಂಪತ್ತನ್ನು ಉಪಯೋಗಿಸಿಕೊಳ್ಳುತ್ತಿದ್ದರೆಂದು ಪೇಟ್‌ನ ಉತ್ಖನನದಿಂದ ಕಂಡುಕೊಳ್ಳಬಹುದು.

ಆದಿ ಹಳೆಯ ಶಿಲಾಯುಗದ ಮಾನವರು ಸದಾ ನೀರಿನ ಆಸರೆಯುಳ್ಳ[೧೫] ತನ್ನ ರಕ್ಷಣೆಗೆ ನೆರವಾಗುವ ಹಾಗೂ ತನ್ನ ಬೇಟೆಗೆ ಬೇಕಾದ ಕಲ್ಲಿನ ಉಪಕರಣಗಳು ದೊರೆಯುವ ಪ್ರದೇಶಗಳಲ್ಲಿ ನೆಲೆ ನಿಲ್ಲಲಾರಂಭಿಸಿದರು. ಇವರು ತಮ್ಮ ಆಹಾರಕ್ಕೋಸ್ಕರವಾಗಿ ಪ್ರಕೃತಿದತ್ತವಾಗಿ ದೊರೆಯುವ ಗೆಡ್ಡೆ, ಗೆಣಸು, ಬೋರೆ ಮತ್ತು ಉತ್ತುತ್ತಿ ಹಣ್ಣು ಇನ್ನು ಮುಂತಾದವುಗಳ ಜೊತೆಗೆ ಪ್ರಾಣಿಗಳ ಬೇಟೆಯಾಡಿ ತಮ್ಮ ಆಹಾರವನ್ನು ಸಂಪಾದಿಸುವುದು ಅವರ ಕ್ರಮವಾಗಿತ್ತೆಂದು ಹುಣಸಗಿಯ ಉತ್ಖನನದಿಂದ ತಿಳಿದು ಬರುತ್ತದೆ.

ಕೃಷ್ಣ ಮತ್ತು ತುಂಗಭದ್ರಾ ನದಿ ಬಯಲಿನ ಕೆಳದಂಡೆ ಪ್ರದೇಶಗಳಲ್ಲಿ ಮಧ್ಯ ಹಳೆ ಶಿಲಾಯುಗದ[೧೬] ಜನರು ವಾಸಿಸುತ್ತಿದ್ದು, ತಾವು ಬೇಟೆಯಾಡಿದ ಪ್ರಾಣಿಗಳ ಚರ್ಮವನ್ನು ತಮ್ಮ ದೇಹ ರಕ್ಷಣೆಗೆ ಬಳಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಆ ಸಂಸ್ಕೃತಿಯ ಅಂಶವಾಗಿ ಹಳೆಯ ಶಿಲಾಯುಗದ ಸಂಸ್ಕೃತಿಯು ವಿಕಾಸ ಹೊಂದಿರಬಹುದು. ಸಂಗನ ಕಲ್ಲಿನ ಬಳಿ ದೊರೆತ ಶಾಸನಗಳ ಆಧಾರದ ಮೇಲೆ ಈ ಸಂಸ್ಕೃತಿಯ

ಕಾಲಾವಧಿಯು ಕ್ರಿ.ಪೂ. ೧೦,೦೦೦ ವರ್ಷಗಳಿಂದ ೩,೦೦೦[೧೭] ವರ್ಷಗಳ ಅಂತರದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ನವಶಿಲಾಯುಗ ತಾಮ್ರಶಿಲಾಯುಗ[೧೮]ದಲ್ಲಿ ಜನಪದರು (ಮಾನವರು) ಹಲವಾರು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬದಲಾವಣೆಗೆ ಒಳಗಾದ ಕಾರಣದಿಂದಾಗಿ ಮಾನವ ಸಂಸ್ಕೃತಿಯ ಇತಿಹಾಸದಲ್ಲೇ ಕ್ರಾಂತಿಯನ್ನು ಸಾಧಿಸಿದ ಘಟ್ಟ ಇದೆಂದು ತಿಳಿದು ಬಂದಿದೆ. ಈ ಸಂಸ್ಕೃತಿಯ ಪೂರ್ವದಲ್ಲಿ ಜನಪದರು ಅಲೆಮಾರಿಗಳಾಗಿ ಜೀವನ ನಿರ್ವಹಿಸುತ್ತಿದ್ದರು. ಆದರೆ ಈ ಸಂಸ್ಕೃತಿಯ ಜನಪದರು ಒಂದೆಡೆ ನೆಲೆ ನಿಲ್ಲಲು ಬೇಸಾಯ ಮತ್ತು ಪಶುಪಾಲನೆ ಕಾರಣವಾದವು. ಇದರಿಂದಾಗಿ ಗ್ರಾಮ ಜೀವನ ಅಸ್ತಿತ್ವಕ್ಕೆ ಬಂದಿತು. ಇವರಲ್ಲಿ ಆಸ್ತಿಯ ಕಲ್ಪನೆ ಮತ್ತು ಅಧಿಕ ಆಹಾರೋತ್ಪಾದನೆ ಸಾಧ್ಯವಾಯಿತು. ಸಮಾಜದಲ್ಲಿ ಉಳ್ಳವರು ಮತ್ತು ಇಲ್ಲದವರು, ಬುದ್ಧಿವಂತ, ದಡ್ಡ ಎಂಬ ಕಲ್ಪನೆಯು ಬೆಳೆಯುತ್ತಾ ನಾಗರೀಕತೆ ಬೆಳೆಯಲು ಅವಕಾಶವಾಯಿತು. ಇಂತಹ ಕ್ರಾಂತಿಕಾರಿ ಕಾಲಘಟ್ಟವನ್ನು ಕರ್ನಾಟಕದ[೧೯] ಸಂಗನಕಲ್ಲು, ತೆಕ್ಕಲಕೋಟೆ, ಹಳ್ಳೂರು, ತಿರುಮಲಕೂಡಲು ಪ್ರದೇಶಗಳಲ್ಲಿನ ಶಿಲಾಯುಗದ ನೆಲೆಗಳಲ್ಲಿ ಕಾಣಬಹುದು.

ಈ ಸಂಸ್ಕೃತಿಯ ಜನಪದರು ಸಾಮಾನ್ಯವಾಗಿ ಗುಡ್ಡಗಳ ಮೇಲೆ ನದಿ ತೊರೆಗಳ ಹತ್ತಿರದ ಪ್ರದೇಶಗಳಲ್ಲಿ ಗ್ರಾಮಗಳನ್ನು ನಿರ್ಮಿಸಿಕೊಳ್ಳುತ್ತಿದ್ದರು. ಇವರು ಪ್ರತಿ ಕುಟುಂಬಕ್ಕೆ ಒಂದೊಂದರಂತೆ ಪ್ರತ್ಯೇಕವಾದ ಗುಡಿಸಲುಗಳನ್ನು ಹೊಂದಿದ್ದರು. ಇವರು ಹೊಂದಿದ್ದ ಶಂಖಾಕಾರದ ಗುಡಿಸಲುಗಳ ಅವಶೇಷಗಳನ್ನು ತೆಕ್ಕಲಕೋಟೆ[೨೦] ಸಂಗನಕಲ್ಲು ಮುಂತಾದ ಕಡೆ ಬೆಳಕಿಗೆ ಬಂದಿದ್ದನ್ನು ಕಾಣುತ್ತೇವೆ.

ಜನಪದರು ತಮ್ಮ ಆಹಾರವನ್ನು ಪಡೆಯುವುದಕ್ಕಾಗಿ ಒಂದೆಡೆ ನೆಲೆ ನಿಂತು ಭೂಮಿಯನ್ನು ಉಳುಮೆ ಮಾಡಲಾರಂಭಿಸಿದರು. ಆರಂಭದಲ್ಲಿ ಭೂಮಿಯನ್ನು ಉಳುಮೆ ಮಾಡಲು ಚೂಪಾದ ಕಲ್ಲುಗಳು ಮತ್ತು ಮರದ ಕೊಂಬೆಯನ್ನು ಬಳಸುತ್ತಿದ್ದರು. ಇವೆರಡರ ಸಹಾಯದಿಂದ ಉಳುಮೆ ಕಷ್ಟಕರವಾದಾಗ ಪ್ರಾಣಿಗಳನ್ನು ಪಳಗಿಸಿ ತಮ್ಮ ಉಪಯೋಗಕ್ಕಾಗಿ ಬಳಸಿಕೊಂಡರು. ಇದರಿಂದಾಗಿ ಕೃಷಿಯ ಜೊತೆಗೆ ಪಶುಪಾಲನೆಯು ಬೆಳೆದು ಗ್ರಾಮಗಳು ನಿರ್ಮಾಣವಾಗಲು ಸಾಧ್ಯವಾಯಿತು.

ಕಬ್ಬಿಣದ ಅದಿರು ದೊರೆಯುವ ಕರ್ನಾಟದ ಬಿಜಾಪುರ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಕೊಡಗು, ಬೆಂಗಳೂರು ಪ್ರದೇಶಗಳಲ್ಲಿ ಕ್ರಿ.ಪೂ. ೩೦೦೦ ವರ್ಷಗಳ ಹಿಂದೆಯೇ ಜನಪದರಿಗೆ ಕಬ್ಬಿಣದ ಉಪಯೋಗದ ಬಗ್ಗೆ ಮಾಹಿತಿ ಇತ್ತು ಎಂಬುದನ್ನು ಮಡೋಸ್ ಟೈಲರ್[೨೧] ತಿಳಿಸಿದ್ದಾರೆ. ಈ ಯುಗದ ಜನಪದರು ಕಲ್ಗೋರಿಗಳನ್ನು ಕಟ್ಟುವುದರಲ್ಲಿ ನಿಸರ್ಗದಲ್ಲಿ ದೊರೆಯುವ ಎಲ್ಲಾ ಸವಲತ್ತುಗಳ ಬಗ್ಗೆ ಮಾಹಿತಿ ಹೊಂದಿದ್ದರು. ಇವರು ವಾಸಕ್ಕೆ ಗುಡಿಸಲು, ಕೃಷಿಗೆ ಉಪಯೋಗವಾಗುವ ನೇಗಿಲಕುಳ, ಕುಡುಗೋಲು, ಚಾಕು, ಉಳಿ ಮತ್ತು ಗೃಹೋಪಯೋಗಿ ಉಪಕರಣಗಳಾದ ಮೂರು ಕಾಲಿನ ಮಣೆ, ಕತ್ತಿ, ಈಟಿ, ಬಾಣದ ಮೊನೆ, ಭರ್ಚಿ ಮುಂತಾದ ಕಬ್ಬಿಣದ ಸಾಮಾನುಗಳನ್ನು ಉಪಯೋಗಿಸಿ ಕೊಳ್ಳುತ್ತಿದ್ದರು. ಇವರು ತಮ್ಮ ಆಹಾರಕ್ಕಾಗಿ ಭತ್ತ, ರಾಗಿ, ಹುರುಳಿ ಧಾನ್ಯಗಳನ್ನು, ಜೊತೆಗೆ ಹೈನುಗಾರಿಕೆಗೆ ಎಮ್ಮೆ ಕುರಿಗಳನ್ನು ಮತ್ತು ಓಡಾಟಕ್ಕೆ ಕುದುರೆಯನ್ನು ಉಪಯೋಗಿಸಿಕೊಳ್ಳುತ್ತಿದ್ದರು.

ಜನಪದರು ಒಂದೆಡೆ ನೆಲೆ ನಿಲ್ಲಲು ಮತ್ತು ನಾಗರೀಕತೆಯೆಡೆಗೆ ನಡೆಯಿಸಿದ ಪ್ರಥಮಜ್ಞಾನ ಕೃಷಿಯಾಗಿದೆ. ಭೂಮಿಯ ಉಳುಮೆಯೆಂದರೆ ಭವಿಷ್ಯದ ಕಲ್ಪನೆ, ಮುಂಬರುವ ದಿನಗಳಿಗೆ ಆಹಾರ ಪದಾರ್ಥಗಳನ್ನು ಒದಗಿಸುತ್ತದೆಂಬ ಮಹಾಯೋಜನೆ ಜನಪದರನ್ನು ಒಂದೆಡೆ ನೆಲೆ ನಿಲ್ಲಿಸಲು ಸಹಕಾರಿಯಾದ ಸುವರ್ಣ ಬೆಸುಗೆ, ಹಸಿವನ್ನಿಂಗಿಸಿ, ಪರಿಸರವನ್ನೆದುರಿಸುವ ಶಕ್ತಿಯನ್ನು ಗಳಿಸಿಕೊಳ್ಳಲು ಮಾನವನಿಗೊದಗಿ ಬಂದ ಮಹಾಚೇತನ, ಭವಿಷ್ಯದ ಜೀವನಕ್ಕಾಗಿ ಆಹಾರ ಪದಾರ್ಥಗಳನ್ನು ಶೇಖರಿಸಿಟ್ಟುಕೊಳ್ಳಬೇಕೆಂಬ ಬುದ್ಧಿಕೊಟ್ಟು.[೨೨] ಮಾತೃಭೂಮಿಯೆಂಬ ಅರಿವು ಬೆಳೆಸಿಕೊಟ್ಟು, ಸುಭದ್ರ ತಳಹದಿಯನ್ನು ಒದಗಿಸಿದೆ. ಕೃಷಿಯು ಜನಪದರಿಗೆ ದೊರೆತ ಮಹಾಪ್ರಸಾದ.[೨೩] ಮಾನವ ಸಂಸ್ಕೃತಿಯ ದೀವಿಗೆಯನ್ನು ಹೊತ್ತಿಸಿದ ಅದ್ಭುತಶಕ್ತಿ[೨೪] ಎನ್ನಬಹುದು.

ಜನಪದರು ಕೃಷಿಯನ್ನವಲಂಬಿಸಿ ಒಂದೆಡೆ ನೆಲಸಲಾರಂಭಿಸಿದ ನಂತರದಲ್ಲಿ ಕೃಷಿ ಚಟುವಟಿಕೆಯಲ್ಲಿ ಎಲ್ಲಾ ರೀತಿಯ ಆಹಾರ ಪದಾರ್ಥಗಳು ವರ್ಷದ ಎಲ್ಲಾ ದಿನಗಳಲ್ಲಿ ಪಡೆಯಲು ಸಾಧ್ಯವಿಲ್ಲವೆಂಬ ಅರಿವು ಮೂಡಿತು. ಜನಪದರು ತಮ್ಮ ಕುಟುಂಬದ ರಕ್ಷಣೆಗಾಗಿ ಆಹಾರ ಪದಾರ್ಥಗಳನ್ನು ಶೇಖರಿಸಿಟ್ಟುಕೊಳ್ಳುವುದು ಅನಿವಾರ್ಯವಾಯಿತು. (ಈ ಕಾಲದಲ್ಲೇ ಧಾನ್ಯ ಶೇಖರಿಸುವ ಧಾನ್ಯ ಬ್ಯಾಂಕು ಅಸ್ತಿತ್ವಕ್ಕೆ ಬಂದವು ಎನ್ನಬಹುದು) ಹೀಗೆ ಶೇಖರಿಸಿಟ್ಟ ಆಹಾರ ಪದಾರ್ಥಗಳನ್ನು ಆಹಾರ ಪದಾರ್ಥಗಳ ಕೊರತೆ ಅಥವಾ ಬರಗಾಲದ ಸಂದರ್ಭಗಳಲ್ಲಿ ಹೊರ ತೆಗೆದು ಪರಸ್ಪರ ಕಡಕೊಡುವ ಅಥವಾ ವಾತ ಕೊಡುವ ಪದ್ಧತಿಯು ಅಸ್ತಿತ್ವಕ್ಕೆ ಬಂದು ಜೀವನ ನಿರ್ವಹಿಸುತ್ತಿದ್ದರು. ಇದರ ಜೊತೆಗೆ ವಸ್ತುಗಳಿಗೆ ಬದಲಾಗಿ ವಸ್ತುಗಳನ್ನು ವಿನಿಮಯಗೊಳಿಸುವ ಪದ್ಧತಿಯು ಅಸ್ತಿತ್ವಕ್ಕೆ ಬಂದಿತು. ಇದೇ ಸಾಟಿ ವಿನಿಮಯ ಪದ್ಧತಿಯ ಮೂಲ ನೆಲೆ.

ಕೃಷಿ ಹೊತ್ತಿಸಿದ ಸಂಸ್ಕೃತಿ ಮತ್ತು ನಾಗರೀಕತೆಯ ಜ್ಯೋತಿಯ ಬೆಳಕಿನಲ್ಲಿ ಮಾನವ ತನ್ನ ಅಂಧಕಾರಮಯವಾದ ಜೀವನದ ಹಾದಿಯನ್ನು ಸುರಕ್ಷಿತವಾಗಿ ದಾಟಿ ಆಧುನಿಕ ಸಮಾಜದೆಡೆಗೆ ಧಾವಿಸಿದನು. ಇಂದು ಕೂಡಾ ಜನಪದರು ತಮ್ಮ ಹಿಂದಿನ ವರ್ಷಗಳ ಸಾಧನೆಯನ್ನು ಮುಂದೆ ಸಾಧಿಸಬೇಕಾಗಿರುವುದಕ್ಕೆ ತಳಹದಿಯನ್ನಾಗಿ ಮಾಡಿಕೊಂಡು ಅಭಿವೃದ್ಧಿಯೆಡೆಗೆ ಹೆಜ್ಜೆ ಹಾಕುತ್ತಿದ್ದಾರೆ.

### ೨.೩. ಪ್ರಾಚೀನ ಕಾಲದ ಬ್ಯಾಂಕುಗಳು

ಮೊಟ್ಟ ಮೊದಲ ಬ್ಯಾಂಕುಗಳು ಸಂಭಾವನೀಯವಾಗಿ ಪ್ರಾಚೀನ ಕಾಲದ ದೇವಾಲಯಗಳಾಗಿದ್ದವು. ಅವು ಕ್ರಿ.ಪೂ. ೩೦೦೦ದಲ್ಲಿ ಸ್ಥಾಪಿಸಲ್ಪಟ್ಟಿದ್ದವೆಂದು ತಿಳಿಯಲಾಗಿದೆ. ಹಣವು ಚಲಾವಣೆಗೆ ಬರುವುದಕ್ಕಿಂತ ಮುಂಚಿತವಾಗಿ ಅವು ಸ್ಥಾಪನೆಗೊಂಡಿದ್ದವೆಂದು ತಿಳಿಯಲಾಗಿದೆ. ಕಾಳು ಕಡಿಗಳ ರೂಪದಲ್ಲಿ ಠೇವಣಿ ಇಡುತ್ತಿದ್ದರೆಂದು, ನಂತರದಲ್ಲಿ ದನಗಳು ಹಾಗೂ ಕೃಷಿ ಸಲಕರಣೆಗಳ ರೂಪದಲ್ಲಿಯೂ ಠೇವಣಿ ಇಡುತ್ತಿದ್ದರೆಂದು ತಿಳಿಯಲಾಗಿದ್ದು, ಅವು ಸಾಗಾಣಿಕೆಗೆ ತೊಂದರೆದಾಯಕವಾಗಿದ್ದವು. ಕಾಲ ಕಳೆದಂತೆ ಠೇವಣಿ ಇಡಲ್ಪಡುವ ವಸ್ತುಗಳಲ್ಲಿ ಗಣನೀಯ ಸುಧಾರಣೆ ಕಂಡು ಬಂದಿತು. ಬಂಗಾರ ಬೆಳ್ಳಿಯಂತಹ

ಲೋಹಗಳನ್ನು ಕಂಡುಹಿಡಿದ ನಂತರ ಅವುಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸುಲಭವಾಗಿ ಸಾಗಿಸಲು ಬರುತ್ತಿದ್ದುದರಿಂದ ಅವುಗಳನ್ನು ಠೇವಣಿ ಇಡುವ ಪದ್ಧತಿ ಜಾರಿಗೆ ಬಂದಿತು. ದೇವಾಲಯಗಳು ಮತ್ತು ಅರಮನೆಗಳು ಭದ್ರವಾಗಿ ನಿರ್ಮಾಣ ಮಾಡಲ್ಪಡುತ್ತಿದ್ದರಿಂದ ಅವುಗಳು ಅತಿ ಸುರಕ್ಷಿತ ಸ್ಥಳಗಳಾಗಿದ್ದವು. ದೇವಾಲಯಗಳು ಪವಿತ್ರ ಸ್ಥಳಗಳಾಗಿದ್ದರಿಂದ ಕಳ್ಳತನಕ್ಕೆ ಮುಂದಾಗುವವರನ್ನು ಹಿಂಜರಿಯುವಂತೆ ಮಾಡುತ್ತಿದ್ದವು. ಕಾಲ ಕ್ರಮೇಣವಾಗಿ ಸಾಲ ಪದ್ಧತಿಯೂ ಜಾರಿಗೆ ಬಂದಿತು. ಇದು ಕ್ರಿ.ಪೂ. ೧೮ನೇ ಶತಮಾನದಲ್ಲಿ ಜಾರಿಗೆ ಬಂದಿತು. ದೇವಾಲಯಗಳ ಅರ್ಚಕರು ಹಾಗೂ ವ್ಯಾಪಾರಸ್ಥರ ನಡುವೆ ಇಂತಹ ಸಾಲಪದ್ಧತಿಯು ಜಾರಿಗೆ ಬಂದಿತೆಂದು ತಿಳಿಯಲಾಗಿದೆ. ಬ್ಯಾಂಕಿನ ಪದ್ಧತಿಯು ಬ್ಯಾಬಿಲೋನಿಯಾದ ದೊರೆಯಾದ ಹಮ್ಮುರಬಿಯ ಕಾಲದಲ್ಲಿ ಬಹಳ ಉತ್ತಮವಾದ ಕಾಯ್ದೆ ಕಾನೂನುಗಳೊಂದಿಗೆ ಜಾರಿಗೆ ಬಂದಿತೆಂದು ತಿಳಿಯಲಾಗಿದೆ.

ಅದರಂತೆಯೆ ಪ್ರಾಚೀನ ಗ್ರೀಕ್ ಸಾಮ್ರಾಜ್ಯದಲ್ಲಿಯೂ ಕೂಡಾ ಆ ಬ್ಯಾಂಕಿನ ಪದ್ಧತಿಯು ಜಾರಿಯಲ್ಲಿತ್ತೆಂದು ಕಂಡು ಬಂದಿದೆ. ಗ್ರೀಕರ ದೇವಾಲಯಗಳು ಅಲ್ಲದೇ ಖಾಸಗೀ ಸಂಸ್ಥೆಗಳು ಕೂಡಾ ಈ ಹಣಕಾಸಿನ ವ್ಯವಹಾರಗಳನ್ನು ನಡೆಸಿಕೊಂಡು ಬರುತ್ತಿದ್ದವು. ಇವು ಸಾಲವನ್ನು ನೀಡುವ ಠೇವಣಿ ಇಟ್ಟುಕೊಳ್ಳುವ, ಹಣದ ವಿನಿಮಯದ ಹಾಗೂ ನಾಣ್ಯ ಚಲಾವಣೆಯಂತಹ ಕಾರ್ಯಗಳನ್ನು ನಿರ್ವಹಿಸಿದವು. ಅಂತೆಯೇ ಆ ಕಾಲವನ್ನು ನಾಣ್ಯಯುಗವೆಂದೂ ಕರೆದರು. ಸಾಲ ನೀಡುವ ಪದ್ಧತಿ ಹಾಗೂ ಸಾಲ ಮರುಪಾವತಿಗೆ ಸಂಬಂಧಿಸಿದಂತೆ ಸಾಲ ಪಡೆದವನಿಂದ ಸಾಲ ನೀಡಿದವರಿಗೆ ಸಾಲದ ಕರಾರು ಪತ್ರಗಳನ್ನು ಬರೆದುಕೊಡುವ ಪದ್ಧತಿಯೂ ಜಾರಿಗೆ ಬಂದಿತು. ವ್ಯಾಪಾರಸ್ಥರೂ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವ್ಯಾಪಾರಕ್ಕೆ ಹೋಗುವಾಗ ಬಹಳಷ್ಟು ಹಣ ಅಂದರೆ ನಾಣ್ಯಗಳ ರೂಪದಲ್ಲಿ ಕೊಂಡೊಯ್ಯುವ ಸಂದರ್ಭದಲ್ಲಿ ಕಷ್ಟವಾಗುತ್ತಿದ್ದುದಕ್ಕೆ ಅನುಕೂಲವಾಗಲೆಂದು ಗ್ರೀಕ್ ಸಾಮ್ರಾಜ್ಯದ "ಬಂದರು" ಪ್ರದೇಶದಲ್ಲಿದ್ದು ಅಂತಹ ವ್ಯಾಪಾರಸ್ಥರು ಬೇರೆ ವ್ಯಾಪಾರದ ಸ್ಥಳಕ್ಕೆ ಹೋಗಿ ಅಲ್ಲಿ ಹಣ ಪಡೆಯಬಹುದಿತ್ತು. "ಪೈಥಿಯಸ್" ಎಂಬ ಒಬ್ಬ ವ್ಯಕ್ತಿಯಿದ್ದನೆಂದು ಕಂಡುಬಂದಿದೆ. ಅವನು ಒಬ್ಬ ವ್ಯವಹಾರಿಕ ಬ್ಯಾಂಕರನಾಗಿದ್ದನು. ಕ್ರಿ.ಪೂ. ೫ನೇ ಶತಮಾನದಲ್ಲಿ "ಏಶ್ಯಾ ಮೈನರ್" ಪ್ರದೇಶದಾದ್ಯಂತ ಈ ರೀತಿಯ ವ್ಯವಹಾರ ನಡೆಸುತ್ತಿದ್ದನು. ಅವನು ಈ ರೀತಿಯ ವ್ಯವಹಾರ ನಡೆಸಿದ್ದಕ್ಕೆ ಸ್ಪಷ್ಟವಾದ ಆಧಾರಗಳಿವೆ. ಅವನ ನಂತರ ಅಂತಹ ಹಲವಾರು ಬ್ಯಾಂಕರುಗಳು ಗ್ರೀಕ್ ನಗರಗಳಲ್ಲಿದ್ದರೆಂದು ಕಂಡುಬರುತ್ತದೆ. ಅವರಲ್ಲಿ ಕೆಲವರು ವಿದೇಶಿಯರು ಆಗಿದ್ದರು. ಕ್ರಿ.ಪೂ.ಸುಮಾರು ೩೭೧ರಲ್ಲಿ "ಪಾಶನ್" ಎಂಬ ಒಬ್ಬ ಗುಲಾಮನು ಈ ವ್ಯವಹಾರದಲ್ಲಿ ತೊಡಗಿ ಅತೀ ಶ್ರೀಮಂತನಾದನು. ಅಲ್ಲದೇ 'ಅಥೆನ್ಸ್' ನಗರದ ಪ್ರಜೆಯಾದನು.

ಹೀಗೆಯೇ ಕ್ರಿ.ಪೂ. ೪ನೇ ಶತಮಾನದಲ್ಲಿ "ಮೆಡಿಟರೇನಿಯನ್ ಜಗತ್ತಿನಲ್ಲಿಯ ಇಂತಹ ಸಾಲದ ಆಧಾರದ ಬ್ಯಾಂಕಿಂಗ್ ವ್ಯವಸ್ಥೆಯು ಜಾರಿಯಲ್ಲಿ ಇತ್ತೆಂದು ಕಂಡುಬಂದಿದೆ. ಈಜಿಪ್ತಿನಲ್ಲಿಯು ಕೂಡಾ

ಪುರಾತನ ಕಾಲದಿಂದಲೂ ಕಾಳು ಕಡಿಯ ರೂಪದಲ್ಲಿ ಹಾಗೂ ಅಮೂಲ್ಯವಾದ ಲೋಹಗಳ ರೂಪದಲ್ಲಿಯೂ ಈ ಬ್ಯಾಂಕಿಂಗ್ ವ್ಯವಸ್ಥೆ ಇತ್ತೆಂದು ಕಂಡುಬಂದಿದೆ. ರಾಜ್ಯಗಳ ಉಗ್ರಾಣ ರೂಪದಲ್ಲಿಯು ಇದು ಇತ್ತು. ಈಜಿಪ್ತ ಪತನಗೊಂಡು ಗ್ರೀಕ್ ಸಾಮ್ರಾಜ್ಯದ ಅಧೀನಕ್ಕೆ ಬಂದಾಗ ಟಾಲೆಮಿಗಳು(ptalemies) ಕ್ರಿ.ಪೂ. ೩೩೦-೩೨೩ರಲ್ಲಿ ಸಾಮ್ರಾಜ್ಯದಾದ್ಯಂತ ಇಂತಹ ಸರ್ಕಾರಿ ಸ್ವಾಮ್ಯದ ಉಗ್ರಾಣಗಳು ಈ ವ್ಯವಹಾರದ ಪದ್ಧತಿಯನ್ನು ಕಾಳು ಕಡಿಗಳ ರೂಪದಲ್ಲಿ ನಡೆಸಿಕೊಂಡು ಬಂದಿದ್ದವು. ಇವೆಲ್ಲ "ಅಲೆಕ್ಸಾಂಡ್ರಿಯಾ" (ಸ್ಥಳ)ವನ್ನು ಕೇಂದ್ರವಾಗಿಟ್ಟುಕೊಂಡು ರಾಜ್ಯದಾದ್ಯಂತ ಒಂದೇ ಲೆಕ್ಕ (account) ದಡಿಯಲ್ಲಿ ನಡೆಸಿದ್ದವೆಂದು ಆಧಾರಗಳು ತಿಳಿಸುತ್ತವೆ. ಇಂತಹ ಬ್ಯಾಂಕಿಂಗ್ ವ್ಯವಸ್ಥೆಯು ಒಂದು ವ್ಯಾಪಾರದ ಸಾಲ ಪದ್ಧತಿಯಲ್ಲಿ ಹಣನೀಡುವ ವ್ಯವಸ್ಥೆ ಜಾರಿಗೆ ಬಂದಿತು. ಇದು ರಾಜ್ಯದ ವಿವಿಧ ಸ್ಥಳಗಳಿಂದಲೂ ಹಣ ಪಡೆಯುವ ವ್ಯವಸ್ಥೆ ಮಾಡಲಾಗಿತ್ತು.

ನಂತರದಲ್ಲಿ ಕ್ರಿ.ಪೂ. ೩ನೇ ಶತಮಾನದಲ್ಲಿ "ಡೆಲೋಸ್"ನ ಏಜಿಯನ್ ದ್ವೀಪಗಳಲ್ಲಿಯೂ ಇಂತಹ ಬ್ಯಾಂಕಿಂಗ್ ವ್ಯವಸ್ಥೆ ಇತ್ತು. ಈ ದ್ವೀಪಗಳು ಅದ್ಭುತವಾದ "ಬಂದರು"ಗಳನ್ನು ಮತ್ತು "ಅಪೊಲೋ" ದೇವಸ್ಥಾನಗಳನ್ನು ಕೇಂದ್ರಗಳನ್ನಾಗಿಸಿಕೊಂಡು ಈ ಬ್ಯಾಂಕಿಂಗ್ ವ್ಯವಸ್ಥೆಯನ್ನು ನಡೆಸಿದ್ದರು. ಈಜಿಪ್ಪಿನಲ್ಲಿಯಂತೆ ಇಲ್ಲಿಯೂ ಕೂಡಾ ಖಾತೆದಾರರಿಗೆ ಅವರಿಗೆ ಅನುಕೂಲವಾಗುವ ರೀತಿಯಲ್ಲಿ ಬೇರೆ ಬೇರೆ ಕಡೆಯಿಂದ ಹಣ ಪಡೆಯುವ ಅನುಕೂಲ ಒದಗಿಸಲಾಗಿತ್ತು. ಖಾತೆದಾರರಿಗೆ ಸುಲಭವಾದ ಸೂಚನೆಗಳನ್ನು ನೀಡುವ ಮುಖಾಂತರ ವ್ಯವಹಾರ ಸುಲಭವಾಗಿ ನಡೆಯುವ ವ್ಯವಸ್ಥೆ ಜಾರಿಗೆ ಬಂದಿತು. ಡೆಲೋಸ್(Delos)ನ ಪ್ರಭಲ ವೈರಿಗಳಾದ "ಕಾರ್ತೇಜ್" ಮತ್ತು "ಕೋರಿಂಥ್"ಗಳು "ರೋಮನ್"ರಿಂದ ಪಥನಗೊಂಡ ನಂತರ ಡೆಲೋಸ್ ಪ್ರಭಾವ ಮತ್ತಷ್ಟು ಹೆಚ್ಚಿತು. ಪರಿಣಾಮವಾಗಿ ಡೆಲೋಸ್ ಮತ್ತು ರೋಮನ್ನರ ಸಂಬಂಧವು ಸುಧಾರಣೆಗೊಂಡು, ರೋಮನ್ನರು ಕೂಡಾ ಇಂತಹ ಬ್ಯಾಂಕಿಂಗ್ ವ್ಯವಸ್ಥೆಯನ್ನು ಅನುಸರಿಸಿದರು.

ಪ್ರಾಚೀನ ಕಾಲದ ರೋಮನ್ನರು ಈ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಬಹಳಷ್ಟು ಸುಧಾರಣೆಗಳನ್ನು ತಂದರು. ಸುಧಾರಿತ ಬ್ಯಾಂಕಿಂಗ್ ಆಡಳಿತ ವ್ಯವಸ್ಥೆಯೊಂದಿಗೆ ಹಣಕಾಸಿನ ವ್ಯವಹಾರಕ್ಕೆ ಸಂಬಂಧಿಸಿದ ಕಾಯ್ದೆ ಕಾನೂನುಗಳನ್ನು ಜಾರಿಗೆ ತಂದರು. ಇಂತಹ ಬ್ಯಾಂಕಿಂಗ್ ವ್ಯವಸ್ಥೆಗಾಗಿ ನಿರ್ಧಿಷ್ಟ ಸಂಸ್ಥೆಗಳನ್ನು (ಕಟ್ಟಡಗಳನ್ನು) ನಿರ್ಮಿಸಿದರು. ಸಾಲ ಪಡೆದವರಿಂದ ಪಡೆದ ಹಣಕ್ಕೆ ಬಡ್ಡಿ ಹಾಕುವ ಹಾಗೂ ಬ್ಯಾಂಕಿನಲ್ಲಿ ಠೇವಣಿ ಹಣಕ್ಕೆ ಬಡ್ಡಿಯನ್ನು ನೀಡುವ ವ್ಯವಸ್ಥೆ ಜಾರಿಗೆ ಬಂದದ್ದು ಇಂತಹ ವ್ಯವಹಾರದಲ್ಲಿ ಮತ್ತಷ್ಟು ಸುಧಾರಣೆಯಾಯಿತು. ಬಹಳಷ್ಟು ಸ್ಪರ್ಧಾತ್ಮಕ ರೂಪ ತಾಳಿತು. ರೋಮನ್ನರ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಸುಧಾರಣೆಯು ಮಿತಿಯಲ್ಲಿ ಇತ್ತು. ಆದಾಗ್ಯೂ ರೋಮನ್ನರು ಹಣದ ವಿನಿಮಯಕ್ಕೆ ಹೆಚ್ಚಿನ ಮಹತ್ವ ನೀಡಿದ್ದರು. ಕ್ರಿ.ಪೂ. ೨೬೦-೨೬೮ರಲ್ಲಿ ರೋಮನ್ ದೊರೆ "ಗ್ಯಾಲಿನಸ್"ರ ಆಡಳಿತದಲ್ಲಿ ರೋಮನ್ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ತಾತ್ಕಾಲಿಕ ಕುಂಟಿತವಾಯಿತು. ಇದಕ್ಕೆ ಪ್ರಮುಖ ಕಾರಣವೆಂದರೆ

ಠಂಕಸಾಲಿಗಳು(Mints) ತಯಾರಿಸುತ್ತಿದ್ದ ತಗಡುಗಳು ಬಹಳಷ್ಟು ತೆಳ್ಳಗಿದ್ದು ಅಪಮೌಲ್ಯವಾಗುತ್ತಿದ್ದವು. ಕಾರಣ ಬ್ಯಾಂಕುಗಳು ಅಂತಹ ತೆಲುವಾದ ತಾಮ್ರದ ತಗಡುಗಳನ್ನು ತಿರಸ್ಕರಿಸುತ್ತಿದ್ದವು. ಕ್ರಿಶ್ಚಿಯನ್ನರು ಆಳ್ವಿಕೆಗೆ ಬಂದ ನಂತರ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಮತ್ತಷ್ಟು Conditions ಬಂದವು. ಅಂದರೆ ಬಡ್ಡಿಯನ್ನು ಹಾಕುವುದು ಅನೈತಿಕವೆಂದು ಪರಿಗಣಿಸಿದ್ದರು. ರೋಮನ್ನರ ಪತನದ ನಂತರ ಪಶ್ಚಿಮ ಯುರೋಪಿನಲ್ಲಿ ಈ ಬ್ಯಾಂಕಿಂಗ್ ವ್ಯವಸ್ಥೆಯು ತಿರಸ್ಕರಿಸಲ್ಪಟ್ಟಿತು. ಕ್ರಿಶ್ಚಿಯನ್ನರ ಧರ್ಮಯುದ್ಧ (crusader)ದವರೆಗೂ ಈ ವ್ಯವಸ್ಥೆ ಸುಧಾರಣೆ ಕಾಣಲಿಲ್ಲ.

ಆದಿಮ ಹಂತದಿಂದ ಕಬ್ಬಿಣದ ಯುಗದವರೆಗಿನ ಅವಧಿಯಲ್ಲಿ ಜನಪದರ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಹಲವಾರು ಬದಲಾವಣೆಗಳನ್ನು ಕಾಣಬಹುದು. ಕಡ, ವಾತ ಕೊಡುವ ತೆಗೆದುಕೊಳ್ಳುವ ವ್ಯವಹಾರವು ಸಣ್ಣ ಪ್ರಮಾಣದಲ್ಲಿದ್ದು, ಕಬ್ಬಿಣದ ಯುಗದ ಅಂತಿಮ ಘಟ್ಟಕ್ಕೆ ಜನಪದರ ವ್ಯವಹಾರವು ಅಧಿಕವಾಗುತ್ತಾ ಬಂದ ಹಾಗೆ ವಸ್ತುವಿನಿಮಯ ಪದ್ಧತಿಯು ಅಸ್ತಿತ್ವಕ್ಕೆ ಬಂದಿತು. ಈ ಯುಗದ ನಂತರದಲ್ಲಿ ಜನಪದರು ಕೃಷಿಗೆ ಬೇಕಾದ ಕಬ್ಬಿಣದ ಮತ್ತು ಮರದ ಉಪಕರಣಗಳ ಉಪಯೋಗವನ್ನು ಕಂಡುಕೊಂಡರು. ಕುಟುಂಬದ ನಿರ್ವಹಣೆಗೆ ಬೇಕಾದ ಉಪಕರಣಗಳ ಉಪಯೋಗವನ್ನು ಕಂಡುಕೊಳ್ಳುವ ಸಂದರ್ಭಗಳಲ್ಲಿ ಗುಂಪುಗಳು (ವರ್ಗಗಳು) ಸೃಷ್ಟಿಯಾದವು.

ಜನಪದರಲ್ಲಿ ಕೃಷಿ ಚಟುವಟಿಕೆಗಳು ಅಧಿಕವಾದ ಹಾಗೆ ಅದರ ಉಪಕರಣಗಳ ಬಳಕೆ ಹೆಚ್ಚಾದಾಗ ಅವುಗಳ ನಿರ್ಮಾಣಕ್ಕೆ ವರ್ಗಗಳು ಸೃಷ್ಟಿಯಾದವು. ಕುಟುಂಬಗಳಿಗೆ ಬೇಕಾದ ಮಡಕೆ, ಕುಡಿಕೆಗಳ ನಿರ್ಮಾಣಕ್ಕೆ ಕುಂಬಾರ ವರ್ಗ, ಮರದ ಸಾಮಾನುಗಳನ್ನು ಮಾಡುವ ಬಡಗಿವರ್ಗ, ಕಬ್ಬಿಣದ ಕುಳಗಳಿಗೆ ಕಮ್ಮಾರ, ಚಮ್ಮಾರ ಇನ್ನು ಮುಂತಾದ ವರ್ಗಗಳು ಗ್ರಾಮದಲ್ಲಿ ಹುಟ್ಟಿಕೊಂಡವು.

ಆದಿ ಮಾನವನಿಂದ ಆಧುನಿಕ ಮಾನವನವರೆಗಿನ ವಿಕಾಸಶೀಲ ಸಂಸ್ಕೃತಿಯನ್ನು ಅನಾಗರೀಕ, ಅರೆನಾಗರೀಕ ಮತ್ತು ನಾಗರೀಕವೆಂಬ ಮೂರು ಹಂತಗಳಲ್ಲಿ ಕಾಣುತ್ತೇವೆ. ಹಿಂದಿನ ಹಂತದಿಂದ ಪ್ರಗತಿ ಪರವಾದ ಮುಂದಿನ ಮಜಲು ಸಾಧಿತವಾಗುತ್ತದೆಂದು; ಮನುಕುಲದ ಭವಿಷ್ಯದ ಸಂಸ್ಕೃತಿಯು ಜನಪದದಿಂದಲೇ ಸಂಭವಿಸುತ್ತಿದೆಯೆಂದು ಮಾನವಶಾಸ್ತ್ರ E.B.[೨೫] ಟೇಲರ್ ಹೇಳುತ್ತಾರೆ.

ಸಮಾಜದಲ್ಲಿ ವಿವಿಧ ಗುಂಪುಗಳು (ವರ್ಗಗಳು) ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಜನಪದರ ವ್ಯವಹಾರವು ದುಸ್ತರವಾಗತೊಡಗಿತು. ಸಾಟಿ ವಿನಿಮಯ ಪದ್ಧತಿಯಿಂದ ವ್ಯವಹಾರದ ನಿರ್ವಹಣೆ ಅಸಾಧ್ಯವಾದಾಗ, ವ್ಯವಹಾರ ನಿರ್ವಹಣೆಗೆ ಬೇರೊಂದು ಮಾರ್ಗ ಹುಡುಕಲು ಯತ್ನಿಸಿದರು. ಋಗ್ವೇದ ಕಾಲದಲ್ಲಿ ವ್ಯವಹಾರ ದುಸ್ತರವಾದಾಗ ಅವರು ತಮ್ಮ ಆರಾಧ್ಯದೈವವಾದ ಆಕಳನ್ನು ಏಕಮಾನವಾಗಿ ವಿನಿಮಯ ಮಾಧ್ಯಮದಲ್ಲಿ ಬಳಸಿದರು. ಈ ಮಾಧ್ಯಮದಲ್ಲಿ ಪುನಃ ಅನೇಕ ತೊಂದರೆಗಳುಂಟಾದಾಗ ವ್ಯವಹಾರ ನಿರ್ವಹಣೆಗೆ ಮತ್ತೊಮ್ಮೆ ಬೇರೊಂದು ಮಾರ್ಗವನ್ನು ಹುಡುಕಿದರು. ಆ ನಂತರದಲ್ಲಿ ಜನಪದರು ತಾವು ಬೆಳೆದಂತಹ ಧಾನ್ಯಗಳನ್ನು ವಿನಿಮಯ ಮಾಧ್ಯಮಕ್ಕೆ ಬಳಸಲಾರಂಭಿಸಿದ ಮೇಲೆ

ವಸ್ತುವಿನಿಮಯ ಪದ್ಧತಿಯು ಅಸ್ತಿತ್ವಕ್ಕೆ ಬಂದಿರುವುದನ್ನು ಗುರುತಿಸಿದ್ದೇವೆ. ಇದರಲ್ಲಿ ಧಾನ್ಯಗಳನ್ನು ವಿನಿಮಯಕ್ಕೆ ಬಳಸಲಾರಂಭಿಸಿದರು. U.S.A.ನಲ್ಲಿ ಆರಂಭದಲ್ಲಿ ಹೊಗೆಸೊಪ್ಪನ್ನು[೨೧] ವಿನಿಮಯ ಮಾಧ್ಯಮವಾಗಿ, ಅರಣ್ಯ ವಾಸಿಗಳು ಚರ್ಮ, ಜೇನುತುಪ್ಪ ಕೊಂಬು ಮುಂತಾದವುಗಳನ್ನು ವಿನಿಮಯ ಮಾಧ್ಯಮವಾಗಿ ಬಳಸಿದರು. ಸಮುದ್ರ ದಂಡೆಯಲ್ಲಿ ವಾಸಿಸುವ ಜನಪದರು ಸಮುದ್ರದಲ್ಲಿ ದೊರೆಯುವ ಕಪ್ಪೆಚಿಪ್ಪು, ಶಂಕು,[೨೨] ಕವಡೆ ಹಾಗೂ ಉಪ್ಪನ್ನು ಸಹ ವಿನಿಮಯ ಮಾಧ್ಯಮವಾಗಿ ಬಳಸಿಕೊಂಡರು. ಆ ಸಂದರ್ಭದಲ್ಲಿ ಉಪ್ಪಿನ ಉತ್ಪಾದನೆ ಕಡಿಮೆ ಇದ್ದು, ಅದರ ಅವಶ್ಯಕತೆ ಹೆಚ್ಚಾದಾಗ ಉಪ್ಪಿನ ಒಡೆತನ ಹೊಂದಿದವರು ಸಮಾಜದಲ್ಲಿ ಗೌರವ ಸ್ಥಾನ ಪಡೆದಿದ್ದರು. ಜನಪದರು ತಮ್ಮ ದುಡಿಮೆಗೆ ಪ್ರತಿಫಲವಾಗಿ ಉಪ್ಪನ್ನು ಪಡೆಯುತ್ತಿದ್ದರು ಎಂಬುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದು.

### ೨.೪. ಕಡ ಮತ್ತು ಸಾಲ ಪದ್ಧತಿ

ಕೃಷಿ ಚಟುವಟಿಕೆಗಳಿಂದ ಬರುವ ಆಹಾರ ಪದಾರ್ಥಗಳು ವರ್ಷದ ಎಲ್ಲಾ ಕಾಲದಲ್ಲೂ ಬೆಳೆಯಲು ಸಾಧ್ಯವಿಲ್ಲವೆಂಬ ಅರಿವು ಬಂದ ಮೇಲೆ ಕೃಷಿಕನಿಗೆ ಅವುಗಳನ್ನು ಸಂಗ್ರಹಿಸಿಡುವುದು ಅನಿವಾರ್ಯವಾಯಿತು. ಕೃಷಿಕರು ತಾವು ಸಂಗ್ರಹಿಸಿದ ಆಹಾರ ಪದಾರ್ಥಗಳನ್ನು ಇತರ ವರ್ಗದವರಿಗೆ ಆಹಾರ ಪದಾರ್ಥಗಳ ಕೊರತೆ ಉಂಟಾದಾಗ ಕಡ ರೂಪದಲ್ಲಿ ಒದಗಿಸಿಕೊಡುತ್ತಿದ್ದರು. ಕಡ ಪಡೆದವರು ಕಡ ಕೊಟ್ಟವರಿಗೆ ಬಿಟ್ಟಿ ಕೆಲಸಗಳನ್ನು ಮಾಡಿಕೊಡುತ್ತಿದ್ದರು. ಇನ್ನೂ ಕೆಲವರು ಅವರಿಂದ ತಮ್ಮ ಕೆಲಸ ಮಾಡಿಸಿಕೊಂಡು ಕಡ ತೀರಿಸಿಕೊಳ್ಳುತ್ತಿದ್ದರು. ಹೀಗೆ ಕಡ ಕೊಡುವ ಮತ್ತು ತೆಗೆದುಕೊಳ್ಳುವ ಪದ್ಧತಿಗೆ, ಕೈಗಡ[೨೩] ಆಯಾ, ಮುಯ್ಯಿ, ಬಿಟ್ಟಿ, ಇನ್ನೂ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ಮನುಸ್ಮೃತಿ ಕಾಲದಲ್ಲೂ ಸಾಲಕೊಡುವುದು ಮತ್ತು ಸಾಲ ಮರುಪಾವತಿಯು ನಡೆಯುತ್ತಿತ್ತು. ಸಾಲ ಕೊಟ್ಟ ಧನಿಕನು ಅನುಕ್ರಮವಾಗಿ ಬ್ರಾಹ್ಮಣರಿಂದ ನೂರಕ್ಕೆ ೨, ಕ್ಷತ್ರಿಯರಿಂದ ೩, ವೈಶ್ಯರಿಂದ ೪, ಮತ್ತು ಶೂದ್ರರಿಂದ ೫ರಷ್ಟು ಬಡ್ಡಿ ಪಡೆಯುತ್ತಿದ್ದರು. ಸಾಲ ಪಡೆಯುವವನು ಭೂಮಿ, ಗೋವು ಮುಂತಾದವುಗಳನ್ನು ಒತ್ತೆ ಇಟ್ಟಿದ್ದರೆ, ಬೋಗ್ಯಕ್ಕೆ ಅಡವಿಟ್ಟಿದ್ದರೆ ಕೊಟ್ಟ ಸಾಲಕ್ಕೆ ಬಡ್ಡಿಕೇಳಬಾರದು, ಸಾಲಗಾರನು ಒತ್ತೆಹಾಕಿದ ವಸ್ತುವನ್ನು ಬಡ್ಡಿ ಬಹಳವಾಗಿದೆ ಎಂದು ಮಾರಬಾರದು ಮತ್ತು ಬೇರೆಯವರಿಗೆ ಕೊಡಬಾರದು.

ಕ್ರಿ.ಪೂ. ೩ನೇ ಶತಮಾನದಲ್ಲಿ ಗ್ರಾಮಗಳ ಬಗ್ಗೆ ಕೌಟಿಲ್ಯನ ಅರ್ಥಶಾಸ್ತ್ರವು ಉಲ್ಲೇಖಿಸುತ್ತದೆ. ಋಗ್ವೇದ, ಮನುಸ್ಮೃತಿಯಲ್ಲಿಯೂ ಕೂಡ ಗ್ರಾಮಗಳ ಬಗ್ಗೆ ಮಾಹಿತಿ ದೊರಕುತ್ತದೆ. ಹಾಗೆಯೇ ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟೆಯಲ್ಲಿ ಉತ್ಖನನ ಸಂದರ್ಭದಲ್ಲಿ ದೊರೆತ ಭತ್ತ, ಗೋಧಿ, ಹುರುಳಿ ಇನ್ನೂ ಮುಂತಾದ ಆಹಾರ ಪದಾರ್ಥಗಳನ್ನು ಬೆಳೆಯುತ್ತಿದ್ದರೆಂಬುದಕ್ಕೆ ಹಾಗೂ ಗ್ರಾಮಗಳಲ್ಲಿ ವಾಸವಾಗಿದ್ದಾರೆಂಬುದಕ್ಕೆ ಸಾಕ್ಷ್ಯಾಧಾರಗಳ ಮಾಹಿತಿಯನ್ನು ಒದಗಿಸುತ್ತದೆ.

ತಾಮ್ರ ಯುಗದಲ್ಲಿ ರೈತರು ತಾವು ಹೆಚ್ಚಾಗಿ ಬೆಳೆದ ಆಹಾರ ಪದಾರ್ಥಗಳನ್ನು ಸಂಗ್ರಹಿಸಲು ಅಂಗಳದಲ್ಲಿ ಹಗೇವುಗಳನ್ನು[೨೪] ನಿರ್ಮಿಸಿ ಅವುಗಳಲ್ಲಿ ಆಹಾರ ಪದಾರ್ಥಗಳನ್ನು ಸಂಗ್ರಹಿಸುತ್ತಿದ್ದರು.

(ಇಂದಿಗೂ ಚಿತ್ರದುರ್ಗ, ಬಳ್ಳಾರಿ, ದಾವಣಗೆರೆ ಮುಂತಾದ ಜಿಲ್ಲೆಗಳಲ್ಲಿ ರೈತರು ಆಹಾರ ಪದಾರ್ಥಗಳನ್ನು ಹಗೇವುಗಳಲ್ಲಿ ಸಂಗ್ರಹಿಸುತ್ತಾರೆ.)

ಕೆಲವು ಸಂದರ್ಭಗಳಲ್ಲಿ ಈಚಲಗರಿಯಿಂದ ತಡಿಕೆ ಗೋಡೆಗಳನ್ನು (ಕರ್ಚಿ) ನಿರ್ಮಿಸಿ ಅದರಲ್ಲಿ ಆಹಾರ ಪದಾರ್ಥಗಳನ್ನು ಸಂಗ್ರಹಿಸುತ್ತಿದ್ದರೆಂದು ಕಾಣುತ್ತದೆ. ಇದಕ್ಕೆ ಪೂರಕವಾಗಿ ಶಿಲಾಯುಗದ ಪ್ರದೇಶಗಳಾದ ಸಂಗನಕಲ್ಲು, ತೆಕ್ಕಲಕೋಟೆ, ಹಳ್ಳೂರು ಉತ್ಖನನದಲ್ಲಿ[೩೦] ಇವುಗಳೂ ದೊರೆತಿರುವುದನ್ನು ಕಾಣಬಹುದು. ಇಂತಹ ಸಂಗ್ರಹ ಕೇಂದ್ರಗಳನ್ನು ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಕಾಣಬಹುದು.

ದೇಶದಲ್ಲಿ ಕೃಷಿಕನು ಕಷ್ಟದಲ್ಲಿದ್ದು ಅಥವಾ ಬಡವನಾಗಿದ್ದರೆ, ರಾಜನಾದವನು ಕೃಷಿಕನಿಗೆ ಬೇಕಾದ ಎತ್ತುಗಳು, ಉಪಕರಣಗಳು ಕೃಷಿಯ ಮೇಲ್ವೆಚ್ಚವನ್ನು ಕೊಡಬೇಕು. ಕೃಷಿಕರು ತಾವು ಬೆಳೆ ಬೆಳೆದು ಅಧಿಕ ಸಂಪತ್ತು ಗಳಿಸಿದ ನಂತರದಲ್ಲಿ ಮರುಪಾವತಿ ಮಾಡಬೇಕೆಂದು ಕೌಟಿಲ್ಯನ್[೩೧] ಅರ್ಥಶಾಸ್ತ್ರವು ತಿಳಿಸುತ್ತದೆ. ಕೃಷಿಯು ಸಂಪತ್ತಿನ ಮೂಲವಾದ್ದರಿಂದ ಅತ್ಯಧಿಕ ಪ್ರಮಾಣದ ಜನಪದರು ಕೃಷಿಯನ್ನವಲಂಬಿಸಿದ್ದರು. ಇವರ ಸಮಸ್ತ ದುಡಿಮೆ, ಉತ್ಪಾದನೆ ವರಮಾನ ಮುಂತಾದವುಗಳು ತಾವು ಹೊಂದಿರುವ ಭೂಮಿಯನ್ನವಲಂಬಿಸಿತ್ತು. ಆ ಕಾಲದಲ್ಲಿ ಭೂ ಒಡೆತನವು ಸಮಾಜದಲ್ಲಿ ಗೌರವದ[೩೨] ಸಂಖೇತವಾಗಿತ್ತು.

ಭೂ ಮಾಲಿಕತ್ವ ಹೊಂದಿರುವವರೆಲ್ಲಾ ಸ್ವತಃ ಕೃಷಿಕರಾಗಿರಬೇಕೆಂದೇನು ಇರಲಿಲ್ಲ. ಸಮಾಜದಲ್ಲಿ ವಿವಿಧ ವೃತ್ತಿಗಳನ್ನು ಹೊಂದಿದವರು ತಮ್ಮ ಭೂಮಿಯನ್ನು ಗೇಣಿ ಆಧಾರದ ಮೇಲೆ ಕೊಡುತ್ತಿದ್ದರು. ಬೆಳೆ ಬರಲಿ, ಬಿಡಲಿ ನಿಗಧಿಯಾದ ಧಾನ್ಯವನ್ನು ಭೂ ಮಾಲೀಕರಿಗೆ ಕೊಡಬೇಕಾಗುತ್ತಿತ್ತು. ಈ ರೀತಿಯಾಗಿ ಧಾನ್ಯಗಳಿಗಾಗಿ ಭೂ ಸಾಗುವಳಿ ಮಾಡಿದವನು ಭೂ ಮಾಲೀಕನಿಗೆ ಒಂದು ಭಾಗವನ್ನು ಕೊಡುವುದಕ್ಕೆ ವಚನಗಳಲ್ಲಿ ಕಟ್ಟಿಗುತ್ತಿಗೆ[೩೩] ಎನ್ನಲಾಗುತ್ತಿದೆ. ಅಂದಿನಿಂದ ಇಂದಿನವರೆವಿಗೂ ಕೃಷಿಯು ಅರ್ಥವ್ಯವಸ್ಥೆಯ ಜೀವನಾಡಿಯಾಗಿರುವುದನ್ನು ಕಾಣಬಹುದಾಗಿದೆ. ೫೦೦ಕ್ಕೂ ಹೆಚ್ಚು ಕುಟುಂಬಗಳು ವಾಸಿಸುವ ಸ್ಥಳಗಳಿಗೆ ಗ್ರಾಮ[೩೪] ಎನ್ನುತ್ತಾರೆ. ಇಂತಹ ಗ್ರಾಮಗಳಲ್ಲಿ ಕೃಷಿಕರು ತಾವು ಬೆಳೆದಂತಹ ಬೆಳೆಯಲ್ಲಿ ಆರನೇ ಒಂದು ಭಾಗವನ್ನು[೩೫] ರಾಜನಿಗೆ ತೆರಿಗೆ ರೂಪದಲ್ಲಿ ಸಲ್ಲಿಸಬೇಕು. ರಾಜನು ಮೊದಲು ಭತ್ತವನ್ನು, ಅನಂತರ ಗೋಧಿಯನ್ನು ತೆರಿಗೆ ರೂಪದಲ್ಲಿ ಸಂಗ್ರಹಿಸುತ್ತಿದ್ದನು. ಮೌರ್ಯರ ಕಾಲಾವಧಿಯಲ್ಲಿಯೇ ಸಾಟಿ ವಿನಿಮಯ ಪದ್ಧತಿಗೆ ವಿದಾಯ ಹೇಳಿ, ನಾಣ್ಯಗಳ ಹೊಸ ವಿನಿಮಯ ಪದ್ಧತಿಯು ಜಾರಿಗೆ ಬಂದಿತ್ತು. ಇವರ ಕಾಲದಲ್ಲಿ ಬೆಳ್ಳಿ, ತಾಮ್ರ, ಸೀಸ ಲೋಹದಿಂದ ತಯಾರಾದ ನಾಣ್ಯಗಳು ಚಲಾವಣೆಗೆ ಬಂದವು.[೩೬] ನಾಣ್ಯಗಳನ್ನು ಆಗ ಪಣ ಎಂಬ ಹೆಸರಿನಿಂದ ಕರೆಯುತ್ತಿದ್ದರು.

ಸಮಾಜದಲ್ಲಿ ಅನಾದಿಕಾಲದಿಂದಲೂ ಬಡವ/ಶ್ರೀಮಂತರು, ಉಳ್ಳವರು ಮತ್ತು ಇಲ್ಲದವರು ಎಂಬ ವರ್ಗಗಳಿದ್ದು, ಇಲ್ಲದವರು ತಮಗೆ ಕೊರತೆ ಬಂದಂತಹ ಆಹಾರ ಪದಾರ್ಥವನ್ನು ಮತ್ತು ಹಣವನ್ನು ಉಳ್ಳವರಿಂದ ಮೌಖಿಕವಾಗಿ ಸಾಲ ಪಡೆಯುತ್ತಿದ್ದರು. ಪ್ರಾರಂಭದಲ್ಲಿ ಉದಾರವಾಗಿ ಕಡ

ಕೊಡುವ ಮತ್ತು ತೆಗೆದುಕೊಳ್ಳುವ ಪದ್ಧತಿಯು ಬೆಳೆದು ನಂತರದಲ್ಲಿ ಸಾಲ ಕೊಟ್ಟವರು ಸಾಲದ ಹಣಕ್ಕೆ ಪ್ರತಿಯಾಗಿ ಅಲ್ಪ ಹಣವನ್ನು ಹೆಚ್ಚುವರಿಯಾಗಿ ಪಡೆಯಲಾರಂಭಿಸಿದರು. ಇದೇ ಪದ್ಧತಿಯು ನಿರಾತಂಕವಾಗಿ ಬೆಳೆದು ಬಂದಿರುವುದನ್ನು ಇಂದಿನ ಸಮಾಜದಲ್ಲೂ ಕೂಡ ಕಾಣಬಹುದು.

ಕ್ರಿ.ಪೂ. ೨೧೦ರಲ್ಲಿ ರೋಂನಲ್ಲಿ ಒಂದು ಶಾಸನವನ್ನು ಅಂಗೀಕರಿಸಿದ್ದರು. ಬೇರೆ ಬೇರೆ ದೇಶಗಳ ನಾಣ್ಯಗಳನ್ನು ಕೊಳ್ಳುವ ಮತ್ತು ಮಾರಾಟ ಮಾಡುವ ವ್ಯವಹಾರದಾರರಿಗೆ ಅಂದರೆ ಲೇವಾದೇವಿಗಾರರಿಗೆ ಪ್ರತ್ಯೇಕವಾದ ಪ್ರದೇಶವನ್ನು ಆ ಕಾಲದಲ್ಲಿ ವ್ಯವಸ್ಥೆ ಮಾಡಲಾಗಿತ್ತು. ಅಂದರೆ ಆ ಕಾಲದಲ್ಲಿ ವ್ಯವಹಾರಕ್ಕೆ ಹೆಚ್ಚು ಮಹತ್ವ ನೀಡಿದ್ದಾರೆಂಬುದನ್ನು ಕಾಣಬಹುದು.

ಮೌರ್ಯ ಸಾಮ್ರಾಜ್ಯವು ತನ್ನ ರಾಜ್ಯದಲ್ಲಿ ನೇವಾರರು, ಅಗಸರು, ಅಕ್ಕಸಾಲಿಗರು, ನಾಣ್ಯ ಪರೀಕ್ಷಕರು, ಸಿಂಪಿಗರು ಕೂಲಿಕಾರರು ರೈತರು ಇನ್ನು ಹಲವಾರು ವರ್ಗಗಳನ್ನು ಒಳಗೊಂಡಿತ್ತು. ಈ ವರ್ಗದವರು ತಮಗೆ ಪಣ(ಹಣ)ದ ಕೊರತೆ ಬಂದಾಗ ಹಣವನ್ನು ಉಳ್ಳವರಿಂದ ಸಾಲವಾಗಿ ಪಡೆಯುತ್ತಿದ್ದರು. ಕೆಲವರು ಸಾಲ ಪಡೆಯುವಾಗ ತಮ್ಮಲ್ಲಿರುವ ಆಸ್ತಿಯನ್ನು ಅಡವಿಟ್ಟು ಸಾಲವನ್ನು[೩೭] ಪಡೆಯುತ್ತಿದ್ದರು. ಆ ಕಾಲದಲ್ಲೇ ವ್ಯವಹಾರಗಳು ಲಿಖಿತವಾಗಿರುತ್ತಿದ್ದವು. ಲಿಖಿತ ರೂಪದಲ್ಲಿನ ಬರಹವು ಸಂಪೂರ್ಣವಾಗಿ ವರ್ಷ, ಋತು, ತಿಂಗಳು ಒಪ್ಪಿಗೆ ಕೊಟ್ಟ ಸಾಲ ತೆಗೆದುಕೊಂಡವರ ಜಾತಿ, ಹೆಸರು, ದೇಶ ಗ್ರಾಮದ ಹೆಸರು ಇವುಗಳನ್ನು ಕ್ರಮಬದ್ಧವಾಗಿ ಬರೆಯಬೇಕಲ್ಲದೆ, ಸಾಕ್ಷಿಗಳನ್ನು ಪರಿಗಣಿಸಬೇಕು ಎಂದಿದೆ. ಇಲ್ಲಿ ಬಡ್ಡಿಗಾಗಿ ವ್ಯವಹಾರ ಮಾಡುವುದು ಋಣವೆನಿಸುವುದು. ಅಡವಿನ ವಿಷಯದಲ್ಲಿ ತಿಂಗಳಿಗೆ ನೂರು ಪಣಕ್ಕೆ ಒಂದು ಕಾಲು (೧ ೧/೪) ಪಣವು ನ್ಯಾಯವಾದ ಬಡ್ಡಿಯಾಗಿರುತ್ತದೆ. ಯಾವುದೇ ವಸ್ತುವನ್ನು ಅಡವಿಡದಿದ್ದರೆ ನೂರಕ್ಕೆ ೫ ಪಣ[೩೮] ಬಡ್ಡಿಯನ್ನು ಮೌರ್ಯ ಸಾಮ್ರಾಜ್ಯದಲ್ಲಿ ಪಡೆಯುತ್ತಿದ್ದರು.

ಸಮಾಜದಲ್ಲಿ ಧಾನ್ಯಗಳ ಕೊರತೆಯುಂಟಾದಾಗ ಧಾನ್ಯ ಸಂಗ್ರಹಿಸಿದ ವರ್ತಕರು, ಗೌಡರು, ಶ್ಯಾನುಭೋಗರು ಹೆಚ್ಚುವರಿ ಧಾನ್ಯವನ್ನು ವರ್ಷದ ಅವಧಿಗೆ ವಾತ ಕೊಡುತ್ತಿದ್ದರು. ಅದರ ಒಂದೂವರೆ (೧ ೧/೨) ಪಟ್ಟು ಧಾನ್ಯವನ್ನು[೩೯] ಸುಗ್ಗಿಯ ಕಾಲದಲ್ಲಿ ಹಿಂದಿರುಗಿಸಬೇಕಾಗಿತ್ತು. ಸಾಲ ಕೊಟ್ಟವರು ಸರಿಯಾದ ಸಮಯದಲ್ಲಿ ಬಡ್ಡಿಯನ್ನು ಪಡೆಯದಿದ್ದರೆ ಎಷ್ಟು ವರ್ಷ ಕಳೆದರೂ ಅವರು ಒಂದು ವರ್ಷದ ಬಡ್ಡಿಯನ್ನು ಮಾತ್ರ ತೆಗೆದುಕೊಳ್ಳಬೇಕೆಂಬ ನಿಯಮ[೪೦] ಮೌರ್ಯ ಸಾಮ್ರಾಜ್ಯದಲ್ಲಿತ್ತು.

ಈ ಸಾಮ್ರಾಜ್ಯದಲ್ಲಿ ಸಾಲ ಪಡೆದವರು ಅಕಸ್ಮಾತ್ ಮೃತರಾದರೆ ಆ ಮೃತನ ಮಕ್ಕಳು, ದಾಯಾದಿಗಳು ಇಲ್ಲವೆ ಜಾಮೀನುದಾರರು ಸಾಲವನ್ನು ಹಿಂದಿರುಗಿಸಬೇಕು.[೪೧] ಬಡವರು ಸಾಲ ಪಡೆದಾಗ ಅವರ ಸಾಲವನ್ನು ಒಣ ಸಂಬಳದ (ಊಟ, ಬಟ್ಟೆ, ವಸತಿ ಅವರೆ ವಹಿಸಿಕೊಳ್ಳುವುದು) ರೂಪದಲ್ಲಿ ಮರುಪಾವತಿ ಮಾಡಬೇಕಾಗಿತ್ತು.

ಚಂದ್ರಗುಪ್ತ ಮೌರ್ಯರ ಕಾಲಾವಧಿಯಲ್ಲಿ ಸಾಲ ಕೊಡುವಾಗ ಸಾಕ್ಷಿಗಳನ್ನಿಟ್ಟುಕೊಂಡು ಸಾಲ ವಿತರಿಸುತ್ತಿದ್ದರು. ಸಾಲ ಮರುಪಾವತಿಯ ಸಂದರ್ಭದಲ್ಲಿ ಸಾಕ್ಷಿದಾರ ಪ್ರಮುಖ ಪಾತ್ರವಹಿಸುತ್ತಾನೆ ಎಂದಿದ್ದಾರೆ. ಸಾಲ ಪಡೆದವರು ಸಾಲ ಮರುಪಾವತಿ ಮಾಡದೇ ಇದ್ದಂತಹ ಸಂದರ್ಭದಲ್ಲಿ ಆ ಸಾಲಕ್ಕೆ ಸಾಕ್ಷಿಗಳು, ಜಾಮೀನುದಾರರನ್ನು ಹೊಣೆಗಾರರನ್ನಾಗಿಸಲಾಗುತ್ತಿತ್ತು ಎಂಬುದನ್ನು ಕೌಟಿಲ್ಯನ ಗ್ರಂಥದಲ್ಲಿ ಕಾಣಬಹುದು. ಇಂದಿಗೂ ಕೂಡ ನಮ್ಮ ರಾಷ್ಟ್ರದಲ್ಲಿ ಈ ಪದ್ಧತಿಯನ್ನು ಕಾಣಬಹುದು.

ಅಷ್ಟೇ ಅಲ್ಲದೆ, ಮೌರ್ಯರ ಕಾಲಾವಧಿಯಲ್ಲಿ ಕರೆಯುವ ಆಕಳು, ಎಮ್ಮೆ, ಎತ್ತುಗಳು ಮುಂತಾದವುಗಳನ್ನು ಅಡವಿಟ್ಟುಕೊಂಡು ಸಾಲವನ್ನು[೪೨] ಕೊಡುತ್ತಿದ್ದರು. ಅಡವಿಟ್ಟ ಪ್ರಾಣಿಗಳನ್ನಾಗಲಿ, ವಸ್ತುಗಳನ್ನಾಗಲಿ ಉಪಯೋಗಿಸಲಿ ಅಥವಾ ಉಪಯೋಗಿಸದಿರಲಿ ಮೂಲ ಧನವನ್ನು ತಂದುಕೊಟ್ಟಾಗ ಮಾತ್ರ ಅಡವಿಟ್ಟ ವಸ್ತು ಮತ್ತು ಪ್ರಾಣಿಗಳನ್ನು ಬಿಟ್ಟು ಕೊಡುತ್ತಿದ್ದರು. ಇದೇ ಕಾಲದಲ್ಲಿ ಕಾಡು ಮನುಷ್ಯರು, ಮ್ಲೇಚ್ಛರು ತಮ್ಮ ಮಕ್ಕಳನ್ನು ಅಡವಿಟ್ಟು ಹಣವನ್ನು ಅಥವಾ ಧಾನ್ಯವನ್ನು ಸಾಲ ಪಡೆಯಲಿಕ್ಕೆ ಅವಕಾಶ ಕಲ್ಪಿಸಲಾಯಿತು. ಇವರನ್ನು ದಾಸರನ್ನಾಗಿ ಸ್ವೀಕರಿಸುವುದು ಆ ಕಾಲದಲ್ಲಿ ರೂಢಿಯಲ್ಲಿತ್ತು. ಆಧುನಿಕ ಕಾಲದಲ್ಲಿಯೂ ನಿಗ್ರೋಗಳನ್ನು ತಂದು ಅಮೇರಿಕಾದಲ್ಲಿ ಮಾರಾಟ ಮಾಡಿರುವುದನ್ನು ಗಮನಿಸಿದ್ದೇವೆ.

ಜನಪದರು ತಾವು ಬೆಳೆದ ಕಾಳು-ಕಡಿಗಳನ್ನು ಶೇಖರಿಸಲು ತಾವು ಬೆಳೆದ ಕಾಳುಕಡಿಯ ಒಂದು ಭಾಗವನ್ನು ಸಮಾಜದ ಹಿತಕ್ಕಾಗಿ ಕೊಟ್ಟಿರುವುದನ್ನು ಹಾಗೂ ಶೇಖರಿಸುವುದಕ್ಕೆ ದೊಡ್ಡ ಪಣತಗಳನ್ನು ನಿರ್ಮಿಸಿದ್ದರು.[೪೩]

ಕ್ರಿ.ಪೂ. ೩ನೇ ಶತಮಾನದ ಪೂರ್ವದಲ್ಲೇ ಜನಪದರಲ್ಲಿ ಪರಸ್ಪರ ಸಹಕಾರದಿಂದ ಕಡ ಕೊಡುವ ಮತ್ತು ತೆಗೆದುಕೊಳ್ಳುವ ಪದ್ಧತಿಯು ಅಸ್ತಿತ್ವದಲ್ಲಿದ್ದಿರಬಹುದು.[೪೪] ಕಡ ಹುಟ್ಟಿ ಬಡವ ಕೆಟ್ಟನೆಂಬ ನಾಣ್ನುಡಿ, ಬಡತನವು ಗ್ರಾಮೀಣ ಋಣಕ್ಕೆ ದಾರಿ ಮಾಡಿಕೊಡುತ್ತದೆ. ಯಾವುದೇ ಕೆಲಸಕ್ಕೂ ಸಾಲ ಮಾಡುವುದು ಅನಿವಾರ್ಯವಾಗುತ್ತದೆ.

ಜನಪದರ ಆರಂಭಿಕ ಜೀವನವು ಅವಶ್ಯಕ ವಸ್ತುಗಳಿಗೆ ಮಾತ್ರ ಸೀಮಿತವಾಗಿದ್ದು, ಇವರು ಕೈಗೊಂಡ ವೃತ್ತಿಗಳು ಹೆಚ್ಚು ನೈಸರ್ಗಿಕವಾಗಿದ್ದವು. ನಾಗರೀಕತೆ ಬೆಳೆದಂತೆ ಸಮಾಜದಲ್ಲಿ ಅನೇಕ ವೃತ್ತಿಗಳು ಹುಟ್ಟಿಕೊಂಡವು. ಇವು ಕ್ರಮೇಣ ಜಾತಿ, ಜನಾಂಗ ವರ್ಗವಾರು ವೃತ್ತಿಗಳಾಗಿ ನಿಂತವು. ಇವುಗಳಲ್ಲಿ ಪ್ರಮುಖವಾದವು ವಿನಿಮಯ ವೃತ್ತಿ ಮತ್ತು ಉತ್ಪಾದಕ ವೃತ್ತಿ.[೪೫] ವಿನಿಮಯ ವೃತ್ತಿಯು ದೇಶದಲ್ಲಿ ಪ್ರಮುಖ ಪಾತ್ರವಹಿಸಿತು. ವೃತ್ತಿಗಳು ಬೆಳೆದ ನಂತರದಲ್ಲಿ ಸಂಘಗಳ ರಚನಾ ಕಾರ್ಯ ಆರಂಭವಾಯಿತು. ಕೆಲವು ವೃತ್ತಿಯವರು ಮಾತ್ರ ತಮ್ಮ ಸಮುದಾಯದ ಜನರ ಸಹಕಾರದೊಂದಿಗೆ (GUILD) ಶ್ರೇಣಿ[೪೬]ಗಳು ಅಸ್ತಿತ್ವಕ್ಕೆ ಬಂದವು. ಸಮುದಾಯ ಜೀವನ ಸಹಕಾರ ತತ್ವಗಳು ಸಮಾಜದ ವ್ಯವಸ್ಥೆಯಲ್ಲಿ ಸೇರಿದಂದಿನಿಂದ ಈ (GUILD) ಶ್ರೇಣಿಗಳ ರಚನೆ ಹೆಚ್ಚ ತೊಡಗಿತು. ಇವು ಕಾಲಕ್ರಮೇಣ ವಿಕಾಸಗೊಂಡು ವೈವಿಧ್ಯಮಯವಾಗಿ ಬೆಳೆದಿರಬಹುದು.

ವೇದಗಳ ಕಾಲದಲ್ಲಿ ದೈವಸ್ವರೂಪಿ ಹಸುವನ್ನು ವಿನಿಮಯ ಮಾಧ್ಯಮವಾಗಿ ಬಳಸಿ ನಂತರದಲ್ಲಿ 'ನಿಷ್ಕ'[೪೭] ಎಂಬ ಆಭರಣವನ್ನು ವಿನಿಮಯ ಮಾಧ್ಯಮಕ್ಕೆ ಬಳಸಿಕೊಂಡರು. ಈಜಿಪ್ಟ್ ಮತ್ತು ಬ್ಯಾಬಿಲೋನಿಯಾ ನಾಗರೀಕತೆಗಳಲ್ಲಿ ಲೋಹದ ಹಣ ಬಳಸಿರುವುದನ್ನು ಕಾಣಬಹುದು. ಮೌರ್ಯರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಹಣವನ್ನು ಗದ್ಯಾಣ, ಪಣ, ಅಡ್ಡ ಹಾಗೂ ವೀಸ್[೪೮] ನಾಣ್ಯಗಳು ಇದ್ದವೆಂದೂ, ವೀಸವೇ ಅತ್ಯಂತ ಸಣ್ಣದೆಂದು ವಿದ್ವಾಂಸರು ಗುರುತಿಸಿದ್ದಾರೆ. ಹರಪ್ಪ ಮತ್ತು ಮಹೆಂಜೋದಾರ ನಾಗರೀಕರು ಸಹ ನಾಣ್ಯಗಳನ್ನು ಬಳಸುತ್ತಿದ್ದರೆಂದೂ ಚಾರಿತ್ರಿಕ ಅಂಶಗಳು ತಿಳಿಸುತ್ತವೆ. ಹಾಗೆಯೇ ಅಲೆಗ್ಸಾಂಡರ ಕಾಲದಲ್ಲೂ ನಾಣ್ಯಗಳಿದ್ದವೆಂದೂ ಆತ ಟಂಕಸಾಲೆಗಳನ್ನು ಸ್ಥಾಪಿಸಿದ್ದನೆಂದು ಚಾರಿತ್ರಿಕ ಅಂಶಗಳು ತಿಳಿಸುತ್ತವೆ.

ಮೌರ್ಯ ಸಾಮ್ರಾಜ್ಯದ ನಂತರದಲ್ಲಿ ಅಸ್ತಿತ್ವಕ್ಕೆ ಬಂದ ಶಾತವಾಹನರು ಸಹ 'ಚಿಮುಖ'[೪೯]ವೆಂಬ ಹೆಸರುಳ್ಳ ನಾಣ್ಯಗಳನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಇವರು ೧ನೇ ಶತಮಾನದ ಹೊತ್ತಿಗೆ ಧಾನ್ಯಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಕಣಜಗಳನ್ನು ಉಪಯೋಗಿಸಿಕೊಳ್ಳುತ್ತಿದ್ದರು. ಇಂತಹ ಸರಕು ಮತ್ತು ಸನ್ನತಿಯ ಕೋರಿಗಳು ೧೯೮೫-೮೬ರ[೫೦] ಉತ್ಖನನದಲ್ಲಿ ದೊರೆತಿವೆ. ಇವರು ಆಗಿನ ಕಾಲದಲ್ಲೇ ಅಂತರರಾಷ್ಟ್ರೀಯ ಮಟ್ಟದಲ್ಲಿ ವ್ಯವಹಾರವನ್ನು ನಿರ್ವಹಿಸುತ್ತಿದ್ದರು ಎಂಬುದಕ್ಕೆ ೧೯೪೭ರ ಚಂದ್ರವಳ್ಳಿ ಉತ್ಖನನದಲ್ಲಿ ದೊರೆತ ರೋಮನ್ ಸಾಮ್ರಾಜ್ಯದ ನಾಣ್ಯಗಳೇ ಸಾಕ್ಷಿಗಳಾಗಿವೆ.[೫೧] ಈ ಸಾಮ್ರಾಜ್ಯದಲ್ಲೂ ಕಡ ಕೊಡುವ ಮತ್ತು ತೆಗೆದುಕೊಳ್ಳುವ ಪದ್ಧತಿಯು ಪರಸ್ಪರ ಸಹಕಾರದಿಂದ ಕಾರ್ಯನಿರ್ವಹಣೆಗೊಳ್ಳುತ್ತಿದ್ದವೆಂಬುದನ್ನು ಗುರುತಿಸಬಹುದು.

ಶಾತವಾಹನರು ಮತ್ತು ಕದಂಬರ ಕಾಲದಲ್ಲೂ ಕೃಷಿ ಪ್ರಮುಖ ಉದ್ಯೋಗವಾಗಿದ್ದಿತು. ಕೃಷಿ ಚಟುವಟಿಕೆಗಳಲ್ಲಿ ತೊಡಗಿದ ಜನಪದರು ತಮಗೆ ಹಣದ ಕೊರತೆ ಬಂದಾಗ ವರ್ತಕ ಸಂಘಗಳಿಂದ ನೆರವನ್ನು ಪಡೆಯುತ್ತಿದ್ದರೆಂದು ಶಾಸನಗಳು[೫೨] ತಿಳಿಸುತ್ತವೆ.

ಕದಂಬರು ರಾಜ್ಯವಾಳುತ್ತಿದ್ದ ಅವಧಿಯಲ್ಲಿ ಕೃಷಿ ಮತ್ತು ವ್ಯಾಪಾರದಲ್ಲಿ ತೊಡಗಿದ ವರ್ಗ ವೈಶ್ಯರದಾಗಿತ್ತು. ಇವರ ಕಾಲದಲ್ಲಿ ವ್ಯಾಪಾರವು ಉತ್ತುಂಗ ಸ್ಥಿತಿ ತಲುಪಿ, ಅನೇಕ ವರ್ತಕರ ಸಂಘಗಳು ಅಸ್ತಿತ್ವಕ್ಕೆ ಬಂದವು. ಇವುಗಳ ಜೊತೆಗೆ ಕಾರ್ಮಿಕ ಮತ್ತು ಸಹಕಾರ ಸಂಘಗಳು ಆರಂಭವಾದವು. ವರ್ತಕರ ಸಂಘಗಳು ಜನಪದರಿಗೆ ಹಣದ ಕೊರತೆ ಬಂದಾಗ ಹಣಕಾಸಿನ ನೆರವನ್ನು (ಇಂದಿನ ಬ್ಯಾಂಕುಗಳಂತೆ) ಒದಗಿಸುತ್ತಿತ್ತೆಂದು ತಿಳಿದು ಬರುತ್ತದೆ.

ಗಂಗರ ಕಾಲಾವಧಿಯಲ್ಲಿ ಶ್ರೇಣಿಗಳು ಆ ಕಾಲದ ಆರ್ಥಿಕ ಜೀವನದಲ್ಲಿ ಮುಖ್ಯ ಪಾತ್ರವಹಿಸಿದ್ದವು. ಬೇರೆ ಬೇರೆ ವೃತ್ತಿಗಳ ಜನಪದರು ತಮ್ಮ ತಮ್ಮ ಶ್ರೇಣಿಗಳನ್ನು ಸ್ಥಾಪಿಸಿಕೊಳ್ಳುತ್ತಿದ್ದರು. ಇವರ ಕಾಲಾವಧಿಯಲ್ಲಿ ಮೇಂಟಿ ಶ್ರೇಣಿಯು ಪ್ರಮುಖವಾಗಿದ್ದಿತು. ಈ ಶ್ರೇಣಿಗಳು ಜನರಿಂದ ಹಣವನ್ನು ಠೇವಣಿಯನ್ನಾಗಿ ಸ್ವೀಕರಿಸಿ, ಆ ಠೇವಣಿ ಹಣಕ್ಕೆ ಬಡ್ಡಿಯನ್ನು ನೀಡುತ್ತಿದ್ದರು. ಯಾರಿಗೆ ಹಣದ

ಅವಶ್ಯಕತೆ ಇದೆಯೋ ಅವರಿಗೆ ಸಾಲದ ರೂಪದಲ್ಲಿ ನೀಡಿ ಅದಕ್ಕೆ ಪ್ರತಿಯಾಗಿ ಬಡ್ಡಿಯನ್ನು[೩೩] ಪಡೆಯುತ್ತಿದ್ದರು. ಇದರ ಜೊತೆಗೆ ಸರ್ಕಾರಕ್ಕೆ ವೃತ್ತಿ ತೆರಿಗೆಯನ್ನು ನೀಡುತ್ತಿದ್ದರು. ಆಧುನಿಕ ಬ್ಯಾಂಕಿಂಗ್ ಪದ್ಧತಿಯು ಅಸ್ತಿತ್ವಕ್ಕೆ ಬರುವ ಪೂರ್ವದಲ್ಲೇ ಬ್ಯಾಂಕ್ ಹೇಗೆ ಕಾರ್ಯನಿರ್ವಹಿಸಬೇಕೊ ಹಾಗೆ ಆ ಕಾಲದಲ್ಲೇ ಮೇಂಟಿ ಶ್ರೇಣಿಯು ಕಾರ್ಯನಿರ್ವಹಿಸುತ್ತಿತ್ತು.

ಇವರ ಆಳ್ವಿಕೆಯಲ್ಲಿ ಸಮಾಜದಲ್ಲಿ ಚಾತುರ್ವರ್ಣ ಪದ್ಧತಿಯು ಅಸ್ತಿತ್ವದಲ್ಲಿತ್ತು. ಕೃಷಿಯು ಮುಖ್ಯವಾದ ಕಸುಬಾಗಿದ್ದು, ರಾಜ್ಯಕ್ಕೆ ಪ್ರಮುಖ ಆದಾಯದ ಮೂಲವಾಗಿತ್ತು. ಕೃಷಿ ಮತ್ತು ವ್ಯಾಪಾರಗಳೆರಡರಲ್ಲೂ ತೊಡಗಿದ ವರ್ಗ ವೈಶ್ಯರದು, ಇವರು ಸಹ ರೋಮ್ ಸ್ರಾಮಾಜ್ಯದ ಜೊತೆ ಅಂತರರಾಷ್ಟ್ರೀಯ ವ್ಯಾಪಾರದಲ್ಲೂ ತೊಡಗಿಸಿಕೊಂಡಿದ್ದರು. ಇವರು ವಿನಿಮಯದಲ್ಲಿ ಪದ್ಮ, ಟಂಕ ಎಂಬ ನಾಣ್ಯಗಳನ್ನು ದೊಡ್ಡ ಪ್ರಮಾಣದಲ್ಲಿ ಬಳಸುತ್ತಿದ್ದರು. ಇವರು ಕೃಷಿಕರಿಗೆ ಬೇಕಾದ ಹಣಕಾಸಿನ ಸೌಲಭ್ಯವನ್ನು ಸಾಲದ ರೂಪದಲ್ಲಿ ಒದಗಿಸುತ್ತಿದ್ದರು. ಅದಕ್ಕೆ ಪ್ರತಿಯಾಗಿ ಅವರು ಬಡ್ಡಿಯನ್ನು ಪಡೆಯುತ್ತಿದ್ದರು.

ಚಾಲುಕ್ಯರ ಕಾಲದಲ್ಲೂ ಕೃಷಿಯು ಪ್ರಮುಖ ವೃತ್ತಿಯಾಗಿತ್ತು. ಇವರ ಆಳ್ವಿಕೆಯಲ್ಲಿ ಗದ್ಯಾಣ, ಸುವರ್ಣ, ಧರಣ, ಪಣ, ವಿಸ ಎಂಬ ನಾಣ್ಯಗಳನ್ನು ವಿನಿಮಯಕ್ಕೆ ಬಳಸುತ್ತಿದ್ದರು. ಈ ಅವಧಿಯಲ್ಲಿ ಜಾತಿ ಆಧಾರದ ಮೇಲೆ ಶ್ರೇಣಿಗಳು(GUILD) ಅಸ್ತಿತ್ವಕ್ಕೆ ಬಂದವು. ಇವುಗಳು ವರ್ತಕರ ಶ್ರೇಣಿಗಳಾಗಿದ್ದು ಮುಖ್ಯವಾಗಿ ಜನಸಾಮಾನ್ಯರಿಗೆ ಸಾಲ ನೀಡುತ್ತಿದ್ದವು. ಐಹೊಳೆ ಐನೋರ್ವರ್ ಎಂಬ ಪ್ರತಿಷ್ಠಿತ ಸಂಸ್ಥೆಯು ದಕ್ಷಿಣ ಭಾರತದ ಐಹೊಳೆಯಲ್ಲಿತ್ತು. ಈ ಸಂಘವು ಜನಸಾಮಾನ್ಯರಿಂದ ಹಿಡಿದು ರಾಜ ಮಹಾರಾಜರವರೆಗೆ ಸಾಲ ಕೊಡುವ ಸಂಸ್ಥೆಯಾಗಿದ್ದಿತು ಎಂದು ವಿದೇಶಿಯಾತ್ರಿಕ ಹೂಯೆನ್‌ತ್ಸಾಂಗ್[೩೪] ತಿಳಿಸಿದ್ದಾರೆ.

ಇವರು ಹೇಳುವ ಪ್ರಕಾರ "ರಾಷ್ಟ್ರವು ಸಂಪದ್ಭರಿತವಾಗಿದ್ದು ಉತ್ತಮ ಬೆಳೆಯನ್ನು ಬೆಳೆಯುತ್ತಿದ್ದರು. ರಾಜನು ಕೆರೆ ಕಾಲುವೆಗಳನ್ನು ಕಟ್ಟಿಸಿ ಕೃಷಿಗೆ ಪ್ರೋತ್ಸಾಹ ನೀಡುವುದರ ಜೊತೆಗೆ ಹಣಕಾಸಿನ ನೆರವನ್ನು ನೀಡುತ್ತಿದ್ದನು. ಇಲ್ಲಿನ ಜನಪದರು ಪ್ರಾಮಾಣಿಕರಾಗಿದ್ದು, ತಮಗೆ ಸಹಾಯ ಮಾಡಿದವರನ್ನು ಕೃತಜ್ಞತೆಯಿಂದ ನೆನೆಯುವುದು, ಕಷ್ಟದಲ್ಲಿರುವವರು ಸಹಾಯ ಕೇಳಿದರೆ ಕೂಡಲೇ ತಮ್ಮ ಸ್ಥಿತಿಗತಿಗಳನ್ನು ನೋಡದೆ ಸಹಾಯ ಮಾಡಲು ಮುಂದಾಗುವರು ಎಂದು ಪ್ರಶಂಸಿಸಿದ್ದಾರೆ. ಕಪ್ಪೆ ಅರಭಟ್ಟನ ಕನ್ನಡ ತ್ರಿಪದಿ ಶಾಸನವನ್ನು ಗಮನಿಸಿದರೆ ಇವರ ಹೇಳಿಕೆಯಲ್ಲಿ ಸತ್ಯಾಂಶವನ್ನು ಕಂಡುಕೊಳ್ಳಬಹುದು.

ರಾಷ್ಟ್ರಕೂಟರ ಕಾಲದಲ್ಲಿ ಕೃಷಿ ಚಟುವಟಿಕೆಗಳು ಪ್ರಮುಖವಾಗಿದ್ದು, ವಸ್ತುವಿನಿಮಯ ಪದ್ಧತಿಯ ಜೊತೆಗೆ ನಾಣ್ಯಗಳು, ವಿನಿಮಯದಲ್ಲಿ ಅಸ್ತಿತ್ವದಲ್ಲಿರುವುದು ಇತಿಹಾಸದಿಂದ[೩೫] ಕಂಡು ಬರುತ್ತದೆ. ಬಡ ಜನಪದರು ತಮಗೆ ಬೇಕಾದ ಹಣಕಾಸಿನ ನೆರವನ್ನು ಉಳ್ಳವರಿಂದ ಪಡೆಯುತ್ತಿದ್ದರು. ಬಡವರು ಉಳ್ಳವರಿಂದ ಸಾಲ ಪಡೆಯುವಾಗ ಯಾವುದಾದರೊಂದು ವಸ್ತುವನ್ನು ಅಡವಿಟ್ಟು ಸಾಲ ಪಡೆಯುತ್ತಿದ್ದರೆಂದು

ಬೈರವಾಡಗಿ ಶಾಸನ[೫೬] ತಿಳಿಸುತ್ತದೆ. ಉಳ್ಳವರೆಂದರೆ ವ್ಯಾಪಾರವನ್ನೇ ಮುಖ್ಯ ವೃತ್ತಿಯನ್ನಾಗಿಸಿಕೊಂಡವರು ಅವರುಗಳೆಂದರೆ ಬಣಜಿಗ, ಶೆಟ್ಟಿ, ಮುಮ್ಮರಿದಂಡ, ವ್ಯವಹಾರಿ, ವಡ್ಡ, ನಾನಾದೇಶಿ, ಉಭಯನಾನಾದೇಶಿ, ಅಯ್ಯನೋರ್ವರ್, ಇವರುಗಳು ತಮ್ಮ ವ್ಯಾಪಾರದ ಜೊತೆಗೆ ಗ್ರಾಮೀಣ ಬಡಜನರಿಗೆ ಬೇಕಾದ ಹಣಕಾಸಿನ ಮತ್ತು ಧಾನ್ಯದ ನೆರವನ್ನು ಕೊಟ್ಟು ಅದಕ್ಕೆ ಪ್ರತಿಯಾಗಿ ಬಡ್ಡಿಯನ್ನು ಪಡೆಯುತ್ತಿದ್ದರು.[೫೭] ಇವರೆ ಆ ಕಾಲದಲ್ಲಿ ಇಂದಿನ ಬ್ಯಾಂಕುಗಳಂತೆ ಕಾರ್ಯನಿರ್ವಹಿಸುತ್ತಿದ್ದರು.

ಜನಪದರು ನಾಣ್ಯಗಳ ಉಪಯೋಗವನ್ನು ಅರಿತುಕೊಂಡ ನಂತರದಲ್ಲಿ ಅವುಗಳನ್ನು ಸಂಗ್ರಹಿಸಿ ಮುಂದಿನ ದಿನಗಳ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಅಡಿಕೆಚೀಲ, ಬುಡ್ಡಿಚೀಲ, ಅಟ್ಟಣಿಗೆಯ ಸಂದುಗಳು, ಹೆಂಚಿನ ಸಂದುಗಳು ಮಡಕೆ, ಕುಡಿಕೆ, ಸಣ್ಣ ಪೆಟ್ಟಿಗೆ, ಕಂಚಿನ ತಂಬಿಗೆ, ಗೋಡೆಗಳ ಸಂದುಗಳು ಮುಂತಾದವುಗಳಲ್ಲಿ ಹಾಕಿ ಸಂಗ್ರಹಿಸುತ್ತಿದ್ದರು. “೧೦ ಸಾವಿರ ಹೊನ್ನು ತಿಪ್ಪೆಯಲ್ಲಿ ಹೂತಿಟ್ಟು”, “ಉಪ್ಪಿಲ್ಲದೆ ಉಂಡೆಲ್ಲೊ ಪ್ರಾಣಿ” ಎಂಬ ಎಷ್ಟೋ ಸಲ ಅವುಗಳನ್ನು ಬಳಸದೇ ಬಿಡುತ್ತಿದ್ದರು. ಪುರಂದರದಾಸರ ಕೀರ್ತನೆಯ ಉಲ್ಲೇಖದಂತೆ ಇಂದೂ ಗ್ರಾಮೀಣ ಪ್ರದೇಶದಲ್ಲಿ ಬುಡ್ಡಿಚೀಲ, ಅಡಿಕೆ, ಎಲೆ ಚೀಲಗಳನ್ನು ಬಳಸುವುದನ್ನು ಕಾಣಬಹುದು. ಇದಕ್ಕೆ ಮತ್ತೊಂದು ಉದಾಹರಣೆ ಎಂದರೆ ಚಿತ್ರದುರ್ಗದ ಚಂದ್ರವಳ್ಳಿಯಲ್ಲಿರುವ ಅಂಕಲಿ ಗವಿಮಠದಲ್ಲಿ ಹಣವನ್ನು ಸಂಗ್ರಹಿಸಲಿಕ್ಕೆ ಮಾಡಿದ ಕಲ್ಲಿನ ಸಂಗ್ರಹಗಾರವನ್ನು ಇಂದಿಗೂ ಕಾಣಬಹುದು.

ಜನಪದರು ತಮ್ಮ ಜೀವನ ನಿರ್ವಹಣೆಗೆ ಕೋಳಿ ಸಾಕುವುದು, ನೂಲುವುದು, ಚಾಪೆ ಹೆಣೆಯುವುದು, ಬಡಗಿತನ, ಕಮ್ಮಾರಿಕೆ, ಕುಂಬಾರಿಕೆ, ಚಮ್ಮಾರಿಕೆ, ಮಣಿಗಳನ್ನು ಪೋಣಿಸುವುದು, ಇನ್ನೂ ಮುಂತಾದ ಕಸಬುಗಳನ್ನು ಕಂಡುಕೊಂಡರು. ಈ ವೃತ್ತಿಗಳು ಮತ್ತು ಉಪವೃತ್ತಿಗಳು ಆರಂಭದಲ್ಲಿ ವೃತ್ತಿಗಳಾಗಿ ನಂತರದಲ್ಲಿ ವರ್ಗಗಳಾಗಿ ಬೆಳೆದವು. ಇವುಗಳಲ್ಲಿ ವಿನಿಮಯ ವೃತ್ತಿ, ಉತ್ಪಾದಕ ವೃತ್ತಿ, ವರ್ತಕರ ಸಂಘಗಳು ಅಸ್ತಿತ್ವದಲ್ಲಿದ್ದವು. ವರ್ತಕರ ವೃತ್ತಿಯು, ವ್ಯಾಪಾರ, ವ್ಯವಹಾರ/ಸಾಲ ಕೊಡುವ/ ಹಿಂದಿರುಗಿ ಪಡೆವ, ಅದಕ್ಕೆ ಪ್ರತಿಯಾಗಿ ಬಡ್ಡಿಯನ್ನು ಪಡೆಯುವ ವೃತ್ತಿಯಾಗಿ[೫೮] ಬೆಳೆದವು.

ಜನಪದರು ವಿನಿಮಯಕ್ಕೆ ನಾಣ್ಯಗಳನ್ನು ಕಂಡುಕೊಂಡ ನಂತರದಲ್ಲಿ ಧಾನ್ಯಗಳನ್ನು ಮಾಪನ ಮಾಡಲು ಕೊಳವೆ, ಗಿರಪಾವು, ಅರಪಾವು, ಚಟಾಕು, ಪಾವು, ಅಚ್ಚೇರು, ಸೇರು, ಗಿದ್ನ, ಅದ್ನ, ಸೋಲಿಗೆ, ಒಮ್ಮನ, ಇಮ್ಮನ, ಹರಣ, ಪಡಿ[೫೯] ಮುಂತಾದ ಮಾಪನಗಳನ್ನು ಹೊಂದಿದ್ದರು. ಹಾಗೆಯೇ ಭಾರವಾದ ವಸ್ತುಗಳನ್ನು ಮಾಪನ ಮಾಡಲು, ದಡ, ಮಣ, ವಜನ ಹಾಗೆಯೇ ಬಂಗಾರ ಮತ್ತು ಬೆಳ್ಳಿಯನ್ನು ತೂಕ ಮಾಡಲು ಗುಲಗಂಜಿ, ಮಾಸಿ, ಆಣೆ, ತೊಲ ಮುಂತಾದ ಮಾಪನಗಳನ್ನು[೬೦] ಹೊಂದಿದ್ದರು. ಹೀಗೆ ಆ ಕಾಲದಲ್ಲೇ ಜನಪದರು ತಮಗೆ ಅನುಕೂಲವಾಗುವ ಮಾಪನಗಳನ್ನು ಕಂಡುಕೊಂಡು ಜೀವನ ನಿರ್ವಹಿಸುತ್ತಿದ್ದರು. ಆ ಕಾಲದಲ್ಲಿ ಕಂಡುಕೊಂಡ ಈ ಮಾಪನಗಳ್ನು ಇಂದಿಗೂ ಜನಸಾಮಾನ್ಯರು ಬಳಸುವುದನ್ನು ಕಾಣಬಹುದು. ಹೊಲಗಳನ್ನು ಅಳೆಯುವಾಗ ನಾಲ್ಕು ಎಕರೆಗೆ ಒಂದು ಕೂರಿಗೆ ಎಂದು ಅಳೆಯುತ್ತಿದ್ದರು.

ಕ್ರಿ.ಶ. ೩೭೫ ರಿಂದ ಕ್ರಿ.ಶ. ೪೪೪ ಗೌಜ ಗ್ರಾಮದ ಶಾಸನಗಳು ಕರ್ನಾಟಕದಲ್ಲಿಯ ಅಗ್ರಹಾರಗಳ ಪ್ರಾಚೀನತೆಯನ್ನು ತಿಳಿಸುತ್ತವೆ. ಆ ಕಾಲದಲ್ಲಿ ಜನಪದರು ತಮ್ಮ ವಸ್ತುಗಳ ವಿನಿಮಯಕ್ಕೆ ಸಂತೆಯನ್ನು ನಡೆಸುತ್ತಿದ್ದರು. ಶುಭ ಸಂದರ್ಭದಲ್ಲಿ ನನ್ನಿ ಕಂಬ ಪ್ರತಿಷ್ಠಾಪಿಸಿ ಹೊಸ ಸಂತೆಯನ್ನು ಪ್ರಾರಂಭಿಸುತ್ತಿದ್ದರು. ನನ್ನಿ ಕಂಬವನ್ನು ಬಹುಶಃ ದೇವಾಲಯದ ಮುಂದೆ ನೆಟ್ಟಿದ್ದಾಗಿರಬೇಕು. ಆ ಕಂಬದ ಮುಂದೆ ಜನಪದರು ತಮ್ಮ ಸರಕನ್ನು ಇಳುಹಿ ಒಯ್ಯುತ್ತಿದ್ದರೆಂದು ದಾವಣಗೆರೆ ಜಿಲ್ಲೆಯ ಕುಂದವಾಡದ ಶಾಸನ[೬೧] ತಿಳಿಸುತ್ತದೆ. ಅನೇಕ ವರ್ತಕರು ಕೆಲವೊಂದು ವಸ್ತುಗಳನ್ನು ಒತ್ತೆಯಾಗಿಟ್ಟುಕೊಂಡು ಬಡ್ಡಿಗೋಸ್ಕರವಾಗಿ ಹಣವನ್ನು ಜನರಿಗೆ ಸಾಲವನ್ನಾಗಿ ಕೊಡುತ್ತಿದ್ದರೆಂದು ನಯಸೇನ[೬೨] ಹೇಳುತ್ತಾರೆ.

ಜನಪದರು ತಮ್ಮ ಮನೆಗೆ ಬೇಕಾದ ವಸ್ತುಗಳನ್ನು ತರಲು ಸಂತೆಗೆ ಹೋದಾಗಿನ ಸಂದರ್ಭವನ್ನು ಕುರಿತು ಹೀಗೆ ಹೇಳುತ್ತಾರೆ.

ಕೈ ಎತ್ತಲಾಗಿ ಹೋದಾವು?
ಸಂತೆಗೆ ಹೋದವು
ಸಂತೆಯಿಂದ ಏನು ತಂದೆ?
ಕಾರ, ಮಂಡಕ್ಕಿ ತಂದೆ
ಕಾರ ಮಂಡಕ್ಕಿ ಏನು ಮಾಡಿದೆ?
ಕದವಿನ ಹಿಂದೆ ಬಚ್ಚಿಟ್ಟುಕೊಂಡು ತಿಂದೆ
ಕದ ಏನು ಕೊಡ್ತು?
ಚಕ್ಕೆ ಕೊಡ್ತು
ಚಕ್ಕೆ ಏನು ಮಾಡಿದೆ?
ಒಲೆಗೆ ಹಾಕಿದೆ
ಒಲೆ ಏನು ಕೊಡ್ತು?
ಬೂದಿಕೊಡ್ತು
ಬೂದಿ ಏನು ಮಾಡಿದೆ?
ಹೊಲಕ್ಕೆ ಹಾಕಿದೆ
ಹೊಲ ಏನು ಕೊಡ್ತು
ಬೆಳೆ ಕೊಡ್ತು
ಬೆಳೆ ಏನು ಮಾಡಿದೆ
ಕಣಕ್ಕೆ ಹೇರಿದೆ

ಕಣ ಏನು ಕೊಡ್ತು?

ದವಸ, ಧಾನ್ಯ ಕೊಡ್ತು

ದವಸ, ಧಾನ್ಯ ಏನು ಮಾಡಿದೆ

ಅಡುಗೆಗೆ ಬಳಸಿಕೊಂಡೆ

ಅಂದರೆ ವಸ್ತು ವಿನಿಮಯ ಪದ್ಧತಿಯನ್ನು ಅನುಸರಿಸಿದ ಜನಪದರು ಹಾಡನ್ನು ಹುಟ್ಟು ಹಾಕಿದ್ದಾರೆ. ಇದು ಆ ಕಾಲದಲ್ಲಿನ ವಸ್ತುವಿನಿಮಯ ಪದ್ಧತಿಗೆ ಸಾಕ್ಷಿಯಾಗಿದೆ ಎನ್ನಬಹುದು.

ಜನಪದರ ಇನ್ನೊಂದು ಆಟವು ಅಳೆ ಗುಣಿಮಣಿ ಆಟ. ಇದನ್ನು ಗಮನಿಸಿದಾಗ ಆ ಕಾಲದಲ್ಲಿ ಒಬ್ಬರಿಗೊಬ್ಬರು ಪರಸ್ಪರ ಸಹಕಾರ ಮನೋಭಾವ, ಕಡಕೊಡುವ ಮತ್ತು ಪಡೆದುಕೊಳ್ಳುವುದರ ಮೂಲಕ ಜೀವನ ನಿರ್ವಹಿಸಿರುವುದನ್ನು 'ಅಳೆ ಗುಣಿಮಣಿ' ಆಟದಿಂದ ಕಾಣಬಹುದು. ಈ ಮಣಿ ಆಟದಲ್ಲಿ ಹುಣಸೆ ಬೀಜವನ್ನು ಬಳಸುತ್ತಾರೆ. ಆಟದಲ್ಲಿ ಒಬ್ಬರ ಮನೆಯಿಂದ ಇನ್ನೊಬ್ಬರ ಮನೆಗೆ ಕಾಳನ್ನು ಹಾಕುತ್ತಾ ಹೋಗುವುದನ್ನು ಕಾಣಬಹುದು. ಅಂದರೆ ಎಲ್ಲರೂ ಒಟ್ಟಾಗಿ ಹಣ ಮತ್ತು ಧಾನ್ಯದ ಕೊರತೆ ಬಂದಾಗ ಪರಸ್ಪರರು ಸೇರಿ ಜೀವನ ನಿರ್ವಹಿಸುತ್ತಿದ್ದರು ಎಂಬುದಕ್ಕೆ ಇದೊಂದು ನಿದರ್ಶನವಾಗಿದೆ.

ಶಾತವಾಹನರ ಮತ್ತು ಅವರ ನಂತರದ ಸಮಕಾಲೀನ ಕಾಲದಲ್ಲಿ ಅನೇಕ ರೋಮನ್ ನಾಣ್ಯಗಳು[೬೩] ಕರ್ನಾಟಕದಲ್ಲಿ ಸಿಕ್ಕಿವೆ. ಇದರಿಂದ ಆ ಕಾಲದಲ್ಲಿ ವ್ಯವಹಾರವು ದೇಶೀಯವಾಗಿರದೇ ಅಂತರರಾಷ್ಟ್ರೀಯ ಮಟ್ಟದಾಗಿತ್ತು. ಅಷ್ಟೇ ಅಲ್ಲದೆ ಆ ಕಾಲದ ಸಂಸ್ಕೃತಿಯು ಅತ್ಯುನ್ನತವಾಗಿತ್ತು ಎನ್ನಬಹುದು. ಇವರ ಕಾಲಾವಧಿಯಲ್ಲಿ ಅನೇಕ ಸಂಘಸಂಸ್ಥೆಗಳಿದ್ದು, ಅವು ದೇಶದ ಆರ್ಥಿಕ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಸಾರ್ವಜನಿಕರು ಧಾರ್ಮಿಕ ಸಂಸ್ಥೆಗಳಿಗೆ ಹಣ ಕೊಟ್ಟು ರಸೀದಿ ಪಡೆಯುತ್ತಿದ್ದರು. ದಾರ್ಮಿಕ ಸಂಸ್ಥೆಗಳು[೬೪] ಆ ಹಣವನ್ನು ಠೇವಣಿಯಾಗಿ ಸ್ವೀಕರಿಸಿ, ಆ ಹಣಕ್ಕೆ ಬಡ್ಡಿಯನ್ನು ಕೊಡುತ್ತಿದ್ದರು ಹಾಗೂ ಆ ಹಣವನ್ನು ಬೇರೆದತ್ತಿ ಕಾರ್ಯಗಳಿಗೆ ಬಳಸುತ್ತಿದ್ದರು (ಆ ಕಾಲದಲ್ಲೇ ಬ್ಯಾಂಕು ರೂಪದಲ್ಲಿ ಈ ದತ್ತಿಸಂಸ್ಥೆಗಳು ಕಾರ್ಯನಿರ್ವಹಿಸುತ್ತಿದ್ದವು). ಇವರು ಜನಪದರಿಗೆ ಬೇಕಾದ ಹಣಕಾಸಿನ ನೆರವನ್ನೊದಗಿಸುತ್ತಿದ್ದರು. ಇವರ ವ್ಯವಹಾರವು ಸಂಪೂರ್ಣವಾಗಿ ಪ್ರಾಮಾಣಿಕತೆ ಮತ್ತು ದಕ್ಷತೆಯನ್ನು ಮೈಗೂಡಿಸಿಕೊಂಡಿದ್ದವು. ರೋಮನ್ ಮತ್ತು ಈ ಸಾಮ್ರಾಜ್ಯದ ಮಧ್ಯೆ ೬ನೇ ಶತಮಾನದವರೆವಿಗೂ ವ್ಯಾಪಾರ ನಡೆಯುತ್ತಿತ್ತೆನ್ನಬಹುದು. ಇವರ ಕಾಲಾವಧಿಯಲ್ಲಿಯೇ ದವಸ ಮತ್ತು ಧಾನ್ಯಗಳ ಸಂಗ್ರಹಣೆಗೆ ವಿಶೇಷ ಕಣಜಗಳನ್ನು[೬೫] ಹೊಂದಿದ್ದರೆಂಬುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದು.

ಕ್ರಿ.ಶ. ೯೧೫ರ ಒಂದು ಶಾಸನ (CEI XI p. 224) ೨೦ ಕಟಿಂಜುಗಳ ಮೇಲಿನ ಬಡ್ಡಿ ೫ ಕಟಿಂಜುಗಳೆಂದರೆ ಪ್ರತಿಶತ ೨೫ ಎಂದು ತಿಳಿದು ಬರುತ್ತದೆ. ಇಲ್ಲಿ ಬಡ್ಡಿಯ ದರ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಿತ್ತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಇವರಿಗೆ ಪ್ರತಿಶತ ೨೪, ೩೬, ೪೮ ಮತ್ತು ೬೦ ಬಡ್ಡಿ ವಿಧಿಸಬೇಕು ಎಂದು ಮನು (-VII-41) ಮತ್ತು ಯಾಜ್ಞವಲ್ಕ್ಯ (೧೧-೩೭) ತಿಳಿಸಿದ್ದಾರೆ. ಸಾಲದ ಭದ್ರತೆ ಹೆಚ್ಚಾದಂತೆ ಅಸಲಿನ ಮೇಲಿನ ಬಡ್ಡಿಯು ಕಡಿಮೆ ಇತ್ತೆಂದು ತಿಳಿದು ಬರುತ್ತದೆ.

ಬಿಜ್ಜಳನ ಕಾಲದಲ್ಲಿ ೧೧೭೬ ಆರ್ಥಿಕ ಮಂತ್ರಿಗಳಾಗಿದ್ದವರು ಭಕ್ತಿ ಭಂಡಾರಿ ಬಸವಣ್ಣನವರು. ಇವರ ಕಾಲಾವಧಿಯಲ್ಲಿ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ರಾಂತಿಗಳಾದವು. ಇವರು ಸಮಾಜದಲ್ಲಿನ ಅಸಮಾನತೆಯನ್ನು ತೊಡೆದು ಹಾಕಲು ಪ್ರಯತ್ನಿಸಿದ ಮಹಾನ್ ವ್ಯಕ್ತಿಯಾಗಿದ್ದರು. ಇವರು ಸಮಾಜದಲ್ಲಿ ಉಳ್ಳವರು ಮತ್ತು ಬಡವರ ನಡುವಿನ ಅಂತರವನ್ನು ಕಂಡು, ಅದನ್ನು ತಡೆಗಟ್ಟಲು ಪ್ರಯತ್ನಿಸಿದರು. ಅವರ ವಚನಗಳು ಸಮಾಜದಲ್ಲಿನ ಸಾಲದ ವ್ಯವಸ್ಥೆಯನ್ನು ತಿಳಿಸುತ್ತದೆ. ಅವರು ವಿಡಂಬನಾತ್ಮಕವಾಗಿಯು ಕೆಲವು ವಿಷಯಗಳನ್ನು ಚರ್ಚಿಸಿದ್ದಾರೆ.

ಮಾರಿಕವ್ವೆನೊಂತು, ಕೊರಳಲ್ಲಿ ಕಟ್ಟಿಕೊಂಬರು
ಸಾಲ ಬಿಟ್ಟರೆ ಮಾರಿಕೊಂಬರಯ್ಯ
ಸಾಲ ಬಿಟ್ಟರೆ ಅವನೊತ್ತೆಯನ್ನಿಟ್ಟುಕೊಂಬರಯ್ಯ ||
ಮಾರುವೋಗನೊತ್ತವೋಗ
ನಮ್ಮ ಕೂಡಲಸಂಗಮದೇವ[೬೧]

ಹಾಗೆಯೇ ಅವರ ಇನ್ನೊಂದು ವಚನ

ಒಡವೆ ಭಂಡಾರ, ಕಡವರ ದ್ರವ್ಯವ
ಬಡ್ಡಿಯ ವ್ಯವಹಾರಕ್ಕೆ ಕೊಟ್ಟು
ಮನೆಯಗೊಂಟಿನಲಿ ಹೊಯ್ದುಕೊಂಡಿದ್ದೆನಾದರೆ
ಅದು ಅನರ್ಥವಲ್ಲ | ಅನರ್ಥವೆಂಬೆ ಕೂಡಲಸಂಗಮದೇವ ||[೬೨]

ಬಸವಣ್ಣನವರ ಕಾಲದಲ್ಲಿದ್ದ ಮತ್ತೊಬ್ಬ ಶಿವಶರಣ ಮಾಚರಸನಿಗೆ ಹಣದ ಅವಶ್ಯಕತೆಯು ಬಹಳ ಜರೂರಿತ್ತು. ಅವರಿದ್ದ ಕಾಲದಲ್ಲಿ ಅವರಿಗೆ ಹಣವನ್ನು ಯಾವುದೇ ಆಸ್ತಿ, ಒಡವೆ, ಮತ್ತಿತರ ವಸ್ತುಗಳನ್ನು ಅಡವಿಟ್ಟುಕೊಳ್ಳದೇ ಸಾಲ ಕೊಡುತ್ತಿರಲಿಲ್ಲ. ಆಗ ಅವರು ತಮ್ಮ ವೃತ್ತಿಯನ್ನೇ ಒತ್ತೆ ಇಟ್ಟು ತಮಗೆ ಬೇಕಾದ ಸಾಲವನ್ನು ಪಡೆದಿದ್ದರೆಂಬುದು ಇತಿಹಾಸದಿಂದ ತಿಳಿದುಬರುತ್ತದೆ. ಆ ಕಾಲದಲ್ಲಿ ಇದ್ದಂತಹ ಅಡವಿಟ್ಟುಕೊಳ್ಳುವ ಪದ್ಧತಿಯನ್ನೇ ಆಧುನಿಕ ಬ್ಯಾಂಕುಗಳು ಇಂದು ಅಳವಡಿಸಿಕೊಂಡಿವೆ.

ದೋರಸಮುದ್ರ ಅಥವಾ ದ್ವಾರಸಮುದ್ರ ಹೊಯ್ಸಳರ ಕಾಲಾವಧಿಯಲ್ಲಿ ಕೃಷಿಗೆ ಹೆಚ್ಚಿನ ಮಹತ್ವ ನೀಡಿ ಪ್ರೋತ್ಸಾಹಿಸುತ್ತಿದ್ದರು. ಜನಸಾಮಾನ್ಯರು ತಮ್ಮ ತಮ್ಮ ವೃತ್ತಿ ಸಂಘಗಳನ್ನು ಸ್ಥಾಪಿಸಿಕೊಂಡಿದ್ದವು. ಈ ಸಂಘಗಳು ದೇಶಿಯ ಮತ್ತು ಅಂತರ್‌ದೇಶಿಯ ವ್ಯಾಪಾರ ನಿರ್ವಹಿಸುವುದರ ಜೊತೆಗೆ ದೇಶಿಯರಿಗೆ ಸಾಲ ಸೌಲಭ್ಯದ ವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದರು.[೬೩]

ಹೊಯ್ಸಳರ ನಂತರ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದವರು ವಿಜಯನಗರದ ಅರಸರು. ಇವರ ಆಳ್ವಿಕೆಯಲ್ಲಿ ಕೃಷಿಯು ಮಹತ್ತರವಾದ ಸ್ಥಾನವನ್ನು ಪಡೆದಿತ್ತು. ಕೃಷಿಗೆ ಬೇಕಾದ ನೀರಾವರಿ ಸೌಲಭ್ಯವನ್ನು ರಾಜರೇ ಒದಗಿಸುತ್ತಿದ್ದರು. ಆದರೆ ಕೃಷಿಗೆ ಬೇಕಾದ ಹಣಕಾಸಿನ ನೆರವನ್ನು ಶ್ರೇಣಿಗಳ ಮೂಲಕ

ಪಡೆಯಬೇಕಾಗುತ್ತಿತ್ತು. ಈ ಶ್ರೇಣಿಗಳು ತನ್ನ ಸದಸ್ಯರಿಗೆ ಮಾತ್ರ ಹಣಕಾಸಿನ ನೆರವನ್ನು ನೀಡುತ್ತಿದ್ದವು. ಶ್ರೇಣಿಗಳಲ್ಲಿ ಸ್ಥಳೀಯ ಗೌಡ, ಶ್ಯಾನುಭೋಗ ಮತ್ತು ಅದರ ಅಧ್ಯಕ್ಷರಿರುತ್ತಿದ್ದರು. ಇವರು ರೈತರಿಗೆ ಬೇಕಾದ ಸಾಲ ಸೌಲಭ್ಯವನ್ನು ಒದಗಿಸುತ್ತಿದ್ದರು. ಈ ಶ್ರೇಣಿಗಳು ಸರಕಾರಕ್ಕೆ ತೆರಿಗೆಯನ್ನು ಕಟ್ಟಬೇಕಾಗುತ್ತಿತ್ತು. ಅಂತಹ ಸಂದರ್ಭದಲ್ಲಿ ಪಟ್ಟಣಶೆಟ್ಟಿಯ ಅನುಮತಿ ಪಡೆದು ತೆರಿಗೆ ಬಾಬ್ತನ್ನು ದೇವಾಲಯದ ಜೀರ್ಣೋದ್ಧಾರಕ್ಕೆ ಬಳಸುತ್ತಿದ್ದರೆಂದು ಕುರುಗೋಡು ಶಾಸನದಿಂದ ತಿಳಿದುಬರುತ್ತದೆ. ಸಮಾಜದಲ್ಲಿನ ಎಲ್ಲಾ ವರ್ಗಗಳನ್ನು ಕುರಿತು 'ಬಾಲಬೂತಿ'[೬] ಎಂಬ ಕ್ರಮವಿತ್ತು. ಈ ಪದ್ಧತಿಯು ೧೯೭೫ರವರೆಗೆ ಕರ್ನಾಟಕದಲ್ಲಿ ಅಸ್ತಿತ್ವದಲ್ಲಿತ್ತು. ಇವರ ಕಾಲಾವಧಿಯಲ್ಲಿ ಎಲ್ಲಾ ವರ್ಗಗಳ ನಡುವೆ 'ಆಯಾ' ಪದ್ಧತಿಯು ಅಸ್ತಿತ್ವದಲ್ಲಿತ್ತು. ಸುಗ್ಗಿಯ ಕಾಲದಲ್ಲಿ ಆಯಗಾರರು ತಮ್ಮ ಪ್ರತಿಫಲವನ್ನು ಪಡೆಯುತ್ತಿದ್ದರು. ಇದಲ್ಲದೆ ಕಡ ಕೊಡುವ ಮತ್ತು ಕಡ ಹಿಂಪಡೆಯುವ ಪದ್ಧತಿ ಇತ್ತು.

ಸಾಮಾನ್ಯವಾಗಿ ಬಡರೈತರು ಆಷಾಢ ಕಾಲದಲ್ಲಿ ಧವಸ-ಧಾನ್ಯಗಳನ್ನು ಕಡವಾಗಿ ಪಡೆಯುತ್ತಿದ್ದರು. ಆದರೆ ಸುಗ್ಗಿಯ ಕಾಲದಲ್ಲಿ ಅವರು ಪಡೆದ ಧವಸ ಧಾನ್ಯದ ಒಂದೂವರೆ (೧½) ಪಟ್ಟು ಧಾನ್ಯವನ್ನು ವಾಪಾಸ್ಸು ಮಾಡಬೇಕಾಗಿತ್ತು. ಆಧುನಿಕ ಯುಗದಲ್ಲಿ ಚಿತ್ರದುರ್ಗ ಜಿಲ್ಲೆಯ ಹಲವಾರು ಗ್ರಾಮಗಳಲ್ಲಿ ಈ ಪದ್ಧತಿಯು ಜಾರಿಯಲ್ಲಿದೆ. ಇದಕ್ಕೆ 'ವಾತ ಪದ್ಧತಿ' ಎಂದು ಕರೆಯುತ್ತಾರೆ. ಇದೇ ಕಾಲದಲ್ಲಿ ಸಾಲ ಪಡೆದವನು ಸಾಲ ತೀರಿಸಲಾಗದಿದ್ದ ಪಕ್ಷದಲ್ಲಿ ಸಾಲ ಕೊಟ್ಟವನ ಆಸ್ತಿಯೆಂದು (ಗುಲಾಮಿ ಪದ್ಧತಿ) ತೀರ್ಮಾನಿಸಲಾಗುತ್ತಿತ್ತೆಂದು ನಿಕೊಲೊಕಂಟಿ ತಿಳಿಸಿದ್ದಾರೆ.

ವಿಜಯನಗರ ಸಾಮ್ರಾಜ್ಯದ ನಂತರ ಅಸ್ತಿತ್ವಕ್ಕೆ ಬಂದಂತಹ ಬಹುಮನಿ ಸಾಮ್ರಾಜ್ಯದಲ್ಲೂ ಕೂಡ ಇದೇ ಶ್ರೇಣಿಗಳು ತಮ್ಮ ಕಾರ್ಯನಿರ್ವಹಿಸುತ್ತಿದ್ದವು. ಶ್ರೇಣಿಗಳು ಜನಸಾಮಾನ್ಯರಿಗೆ ಬೇಕಾದ ಸಾಲ ಸೌಲಭ್ಯವನ್ನು ಒದಗಿಸುತ್ತಿದ್ದರು ಮತ್ತು ಬಡ್ಡಿಯ ದರಗಳ ಮೇಲೆ ಇವರೇ ಹತೋಟಿಯನ್ನಿಟ್ಟು ಕೊಂಡಿದ್ದರು.

### ೨.೫. ದೇಶಿ ಬ್ಯಾಂಕರರು

ಜನಪದರು ತಮ್ಮ ಸಾಲದ ಅವಶ್ಯಕತೆಯನ್ನು ಈಡೇರಿಸಿಕೊಳ್ಳಲು ತಮ್ಮ ನಂಬಿಕೆಯನ್ನೇ ಪ್ರಧಾನವಾಗಿಟ್ಟುಕೊಂಡಿದ್ದರು. ಮಾತಿನ ಮೂಲಕವಾಗಿ ತಮಗೆ ಬೇಕಾದ ಸಾಲವನ್ನು ಪಡೆಯುತ್ತಿದ್ದರು. ತಾವು ಮಾತು ತಪ್ಪಿದರೆ ನಿನ್ನ ನಾಲಿಗೆಯೇನು ಎಕ್ಕಡವೇ? ಎಂಬ ಪ್ರಶ್ನೆಯನ್ನು ಜನಪದರು ಕೇಳುತ್ತಿದ್ದರು. ಮಾತು ತಪ್ಪಿದರೆ ತಮಗೆ ಉಳಿಗಾಲವಿಲ್ಲವೆನ್ನುವಂತಹ ಸನ್ನಿವೇಶ ನಿರ್ಮಾಣವಾಗಿತ್ತು. ಸಾಲ ಪಡೆದಾತ ಮಾತು ತಪ್ಪಿ ನಡೆದ ಸಂದರ್ಭಗಳಲ್ಲಿ ಮುಂದೆ ಸಾಲವನ್ನು ಪಡೆಯುವಾಗ ಅವರು ಯಾವುದಾದರೊಂದು ವಸ್ತುವನ್ನು ಅಡವಿಟ್ಟು, ಸಾಲ ಪಡೆಯುತ್ತಿದ್ದರೆಂಬುದನ್ನು ಬೈರವಾಡಗಿ[೭೦] ಶಾಸನ ತಿಳಿಸುತ್ತದೆ. ಐಹೊಳೆ ಐನೂರ್ವರ್[೭೧] ಇದು ೫೦೦ ಸದಸ್ಯರುಳ್ಳ ವರ್ತಕ ಸಂಘವಾಗಿತ್ತು. ದೇಶದಾದ್ಯಂತಹ ತಮ್ಮ ಶಾಖೆಗಳನ್ನು ಹೊಂದಿದ್ದರೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ಬಹುಮನಿ ಸಾಮ್ರಾಜ್ಯದ ನಂತರ ಅಸ್ತಿತ್ವಕ್ಕೆ ಬಂದ ಸಾಮ್ರಾಜ್ಯಶಾಹಿಗಳ ಅವಧಿಯಲ್ಲಿ ಜನಪದರಿಗೆ ಬೇಕಾದ ಹಣಕಾಸಿನ ಸೌಲಭ್ಯವನ್ನು ಪಡೆದುಕೊಳ್ಳಲಿಕ್ಕೆ, ಒಂದು ಬೇಸಾಯಗಾರರ ಸಂಘ[೨೨]ವಿದ್ದಿತು. ಈ ಸಂಘವು ಆಧುನಿಕ ಬ್ಯಾಂಕುಗಳಂತೆ ಲೇವಾದೇವಿ ವ್ಯವಹಾರವನ್ನು ನಿರ್ವಹಿಸುತ್ತಿದ್ದವು. ಲೇವಾದೇವಿಯಿಂದ ಬಂದಂತಹ ಬಡ್ಡಿ ಹಣವನ್ನು ದಾನ ಕಾರ್ಯಗಳಿಗೆ ಉಪಯೋಗಿಸುತ್ತಿದ್ದರು. ಮೂಲ ಧನವನ್ನು ವರ್ತಕ ಹಾಗೂ ಇತರರಿಗೆ ಸಾಲ ಕೊಡುವ ಮೂಲಕ ವ್ಯಾಪಾರಕ್ಕೆ ಬಂಡವಾಳವನ್ನು ಒದಗಿಸುವ ಸಂಸ್ಥೆಗಳಂತೆ ಕಾರ್ಯನಿರ್ವಹಿಸುತ್ತಿದ್ದ ಅಂಶವನ್ನು ಇತಿಹಾಸದಿಂದ ಕಂಡುಕೊಳ್ಳಬಹುದು.

೧೬ನೇ ಶತಮಾನದಲ್ಲಿದ್ದ ಕವಿ ಸರ್ವಜ್ಞರು ತಮ್ಮ ತ್ರಿಪದಿಗಳಲ್ಲಿ ಸಾಲದ ಬಗ್ಗೆ ಹೇಳಿದ್ದಾರೆ.

"ಸಾಲವನು ಕೊಂಬಾಗ ಹಾಲೋಗರುಂಬಂತೆ,

ಸಾಲಿಗನು ಬಂದು ಕೇಳುವಾಗ

ಕಿಬ್ಬದಿಯ ಕೀಲು ಮುರಿದಂತೆ ಕಾಣ ಸರ್ವಜ್ಞ"[೨೩]

ಸಾಲವೆಂಬುದು ಜನಪದರಿಗೆ ಅತ್ಯವಶ್ಯಕವಾಗಿದೆ. ಆದರೆ ಅದು ಅವರಿಗೆ ನೆರವಾಗಬೇಕೇ ಹೊರತು ಶೂಲವಾಗಬಾರದು ಎಂದಿದ್ದಾರೆ.

೧೮ನೇ ಶತಮಾನದಲ್ಲಿ ಟಿಪ್ಪುಸುಲ್ತಾನನ ಆಳ್ವಿಕೆಯಲ್ಲಿ ಕೃಷಿಕರಿಗೆ, ನೇವಾರರಿಗೆ, ಸಣ್ಣ ಉದ್ದಿಮೆದಾರರಿಗೆ, ಬ್ಯಾಂಕುಗಳಿಂದ, ಸರಕಾರದಿಂದ ಸಾಲವನ್ನು ನೀಡಲಾಗುತ್ತಿತ್ತು. ನೇವಾರರಿಗೆ ಆಗಾಗ ಸ್ಥಳೀಯ ವರ್ತಕರು ಮುಂಗಡ ನೀಡುತ್ತಿದ್ದರು. ಇವರು ನೇವಾರರನ್ನು ಯಾವಾಗಲೂ ಸಾಲದಲ್ಲೇ ಇರುವಂತೆ ನೋಡಿಕೊಳ್ಳುತ್ತಿದ್ದರು. ನೇವಾರರು ಎಲ್ಲಿಯವರೆವಿಗೂ ಸಾಲ ತೀರಿಸಲು ಸಾಧ್ಯವಾಗುವುದಿಲ್ಲವೋ ಅಲ್ಲಿಯವರೆಗೆ ಬೇರೊಬ್ಬರಿಂದ ಸಾಲ ಪಡೆಯುವಂತಿಲ್ಲ. ಅಕಸ್ಮಾತ್ ಬೇರೊಬ್ಬರೊಡನೆ ವ್ಯಾಪಾರ ಮಾಡಿದರೆ ಹಿಂದಿನ ಒಡೆಯನ ಸಾಲ ಮರುಪಾವತಿ ಮಾಡಬೇಕು. ಹೀಗೆ ನೇವಾರರು ಮತ್ತು ಕೃಷಿಕರು ಸಾಲದ ಬಲೆಯಲ್ಲಿ ಬಿದ್ದಿದ್ದರು ಎಂದು ಬುಚನನ್ ತಿಳಿಸಿದ್ದಾರೆ.[೨೪]

೧೭೯೨ರಲ್ಲಿ ಮೂರನೆ ಮೈಸೂರು - ಆಂಗ್ಲ ಯುದ್ಧದಲ್ಲಿ ಟಿಪ್ಪುಸುಲ್ತಾನ ಸೋತ ನಂತರ ಶ್ರೀರಂಗಪಟ್ಟಣ ಒಪ್ಪಂದ ಮಾಡಿಕೊಂಡನು. ಅದರಲ್ಲಿ ಪ್ರಮುಖವಾಗಿರುವುದೇನೆಂದರೆ ವಿಜೇತರಿಗೆ ತನ್ನ ಅರ್ಧ ರಾಜ್ಯವನ್ನು ನೀಡಬೇಕು, ಹಾಗೂ ಮೂರು ೩ ಲಕ್ಷ ಫೌಂಡ್‌ಗಳನ್ನು ಮೂರು ಕಂತುಗಳಲ್ಲಿ ನೀಡಲು ಒಪ್ಪಿಕೊಂಡನು. ಯುದ್ಧದಲ್ಲಿ ಟಿಪ್ಪುಸುಲ್ತಾನ್ ಸೋತ ನಂತರ ಯುದ್ಧದ ವೆಚ್ಚವನ್ನು ಪೂರ್ಣವಾಗಿ ನೀಡುವವರೆಗೆ ಸುಲ್ತಾನ ತನ್ನ ಇಬ್ಬರು ಮಕ್ಕಳನ್ನು[೨೫] ಬ್ರಿಟೀಷರಲ್ಲಿ ಒತ್ತೆ ಇಡಬೇಕಾಯ್ತು. ಅಂದರೆ ರಾಜನಾಗಿದ್ದ, ಟಿಪ್ಪುಸುಲ್ತಾನ ಹಣಕಾಸಿನ ಕೊರತೆ ಬಂದಾಗ ತನ್ನ ಮಕ್ಕಳನ್ನು ಒತ್ತೆ ಇಟ್ಟು ಸಾಲ ತೀರಿಸಲು ಪ್ರಯತ್ನಿಸಿದ್ದಾರೆಂಬುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದು.

ಜನಪದರಿಗೆ ಭೂಮಿಯೇ ಸಂಪತ್ತಿನ ಮೂಲವಾದುದರಿಂದ ಅವರ ಆರ್ಥಿಕ ಪರಿಸ್ಥಿತಿಯು ಕೃಷಿಯನ್ನವಲಂಬಿಸಿತ್ತು. ಜನಪದರ ಸಮಸ್ತ ದುಡಿಮೆ, ಉತ್ಪಾದನೆ, ಅಭಿವೃದ್ಧಿ ಮುಂತಾದವುಗಳು ಆತ ಹೊಂದಿರುವ ಭೂ ಮಾಲೀಕತ್ವನ್ನು ಅವಲಂಬಿಸಿವೆ. ಮಧ್ಯಕಾಲೀನ ಯುಗದಲ್ಲಿ ಭೂಮಾಲೀಕತ್ವವು ಗೌರವದ ಸಂಕೇತವಾಗಿತ್ತು.[೬]

ದೇಶಿಯ ಹಣದ ವ್ಯವಹಾರ ಸಂಸ್ಥೆಗಳಲ್ಲಿ ಇತಿಹಾಸ ಪ್ರಸಿದ್ಧ ಪಡೆದ ಸಂಸ್ಥೆಯೆಂದರೆ ಜಗತ್‌ಸೇತ್ ಸಂಸ್ಥೆ. ಇದರ ವ್ಯಾಪಾರ/ವ್ಯವಹಾರ ಬ್ಯಾಂಕ್ ಆಫ್ ಇಂಗ್ಲೆಂಡ್‌ನಂತೆ ೧೭೭೭ರಲ್ಲಿ ವ್ಯಾಪಕವಾಗಿತ್ತು. ಈ ಸಂಸ್ಥೆಯನ್ನು ಸ್ಥಾಪಿಸಿದ ವ್ಯಕ್ತಿ ಹಿರಾನಂದಶಾಹು. ಇವರ ಮಗ ಮಣಿಕ್ ಚಂದ್ ಪ್ರಸಿದ್ಧ ಬ್ಯಾಂಕರನಾಗಿದ್ದನು. ಇವನು ಪರೊಕ್‌ಸಿಯಾರ ದಂಗೆಯನ್ನು ಅಡಗಿಸಲು ದೆಹಲಿ ಚಕ್ರವರ್ತಿಗೆ ಒಂದು ಕೋಟಿ ರೂಪಾಯಿಗಳನ್ನು ಸಾಲವಾಗಿ ನೀಡಿದ್ದರು ಎಂಬುದನ್ನು ಇತಿಹಾಸದಿಂದ ಕಂಡುಕೊಳ್ಳಬಹುದು. ದಕ್ಷಿಣ ಭಾರತದಲ್ಲಿ ಪ್ರಸಿದ್ಧವಾದ ಬ್ಯಾಂಕಿಂಗ್ ಸಂಸ್ಥೆಯೆಂದರೆ ಬುಕುಂಟಿ ಕಾಶಿದಾಸನದು. ಇವನು ಕರ್ನಾಟಕದ ನವಾಬರಿಗೆ ಹಣಕಾಸಿನ ನೆರವನ್ನು ನೀಡಿದ್ದರು. ೧೭೬೦ರಲ್ಲಿ ಮರಾಠ ರಾಜ್ಯದಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಬ್ಯಾಂಕುಗಳಿದ್ದವೆಂದು ಇತಿಹಾಸದಿಂದ ತಿಳಿದು ಬರುತ್ತದೆ.

ಸ್ವದೇಶಿ ಜನ್ಯವಾದ ಬ್ಯಾಂಕಿಂಗ್ ಉದ್ಯಮ ರಾಷ್ಟ್ರದಲ್ಲಿ ಆರಂಭವಾದುದು ೧೮ನೇ ಶತಮಾನದ ಉತ್ತರಾರ್ಧದಲ್ಲಿ. ಬನಾರಸ್‌ನಲ್ಲಿ ಗೋಪಾಲ್‌ದಾಸ್‌ಶಾಹು ಮತ್ತು ಅವರ ಮಗ ಮೋಹನದಾಸ್. ಇವರ ಸಂಸ್ಥೆಯು ಆ ಕಾಲದಲ್ಲಿ ತುಂಬಾ ಪ್ರಸಿದ್ಧಿ ಪಡೆದಿತ್ತು. ದೇಶದಾದ್ಯಂತ ಶಾಖಾ ಕಚೇರಿಗಳನ್ನು ಹೊಂದಿ ತಮ್ಮ ಕಾರ್ಯವನ್ನ ನಿರ್ವಹಿಸುತ್ತಿದ್ದರು. ಈ ಸಂಸ್ಥೆಗಳಲ್ಲಿ ಜನಪದರಿಂದ, ರಾಜನವರೆಗೆ ಸಮಾಜದ ಎಲ್ಲಾ ವರ್ಗದ[೭] ಜನರು ತಮ್ಮ ಹಣವನ್ನು ಈ ಸಂಘದಲ್ಲಿ ತೊಡಗಿಸುತ್ತಿದ್ದರು ಮತ್ತು ಪಡೆಯುತ್ತಿದ್ದರು. ಸಾರ್ವಜನಿಕರ ಹಣವನ್ನು ಸಮರ್ಥವಾಗಿ ಬಳಸಿಕೊಂಡ ಕಾರಣಕ್ಕಾಗಿ ಜನಸಾಮಾನ್ಯರ ವಿಶ್ವಾಸ ಪಡೆದಿದ್ದವು.

ಜನಪದರಿಗೆ ಬೇಕಾದ ಆಹಾರ ಪದಾರ್ಥಗಳ ಸಾಲ ಮತ್ತು ಹಣಕಾಸಿನ ನೆರವನ್ನು ಗ್ರಾಮೀಣ ಪ್ರದೇಶದಲ್ಲಿದ್ದ ಜಮೀನ್ದಾರರು ಒದಗಿಸುತ್ತಿದ್ದರು. ಇವರು ಬಡ ರೈತರಿಗೆ, ಕೃಷಿ ಕಾರ್ಮಿಕರಿಗೆ, ಕೂಲಿ ಕಾರ್ಮಿಕರಿಗೆ, ಬಡಗಿ, ಕಮ್ಮಾರ, ಚಮ್ಮಾರ, ನೇವಾರ ಇನ್ನಿತರ ಕಸಬುಗಳನ್ನೊಳಗೊಂಡವರಿಗೆ ಹಣಕಾಸು ಹಾಗೂ ಆಹಾರ ಪದಾರ್ಥಗಳ ಕೊರತೆ ಬಂದ ಸಂದರ್ಭಗಳಲ್ಲಿ ನೆರವನ್ನು ಒದಗಿಸುತ್ತಿದ್ದರು. ಇವರೇ ಮುಂದೆ ಗ್ರಾಮೀಣ ಲೇವಾ-ದೇವಿಗಾರರಾಗಿ ಕಾರ್ಯ ನಿರ್ವಹಿಸತೊಡಗಿದರು. ಇವರು ವಿಧಿಸುವ ಬಡ್ಡಿಯ ದರವು ಸಹಜವಾಗಿ ಅಧಿಕವಾಗಿರುತ್ತಿತ್ತು.

ಜನಪದರು ತಮ್ಮಲ್ಲಿರುವ ಅಧಿಕ ಹಣವನ್ನು ಭದ್ರತೆಗೋಸ್ಕರವಾಗಿ ಲೇವಾ-ದೇವಿಗಾರರ ಹತ್ತಿರ ಇಡುತ್ತಿದ್ದರು. ಕಾಗದ ಪತ್ರ ಬಂದ ನಂತರದಲ್ಲಿ ತಮ್ಮಲ್ಲಿರುವ ಹಣವನ್ನು ಲೇವಾ-ದೇವಿಗಾರರ ಹತ್ತಿರ ಕೊಟ್ಟ ಬದಲಾಗಿ ರಸೀದಿ ಪಡೆಯುವ ಪದ್ಧತಿಯು ಅಸ್ತಿತ್ವಕ್ಕೆ ಬಂದಿತು. ಜನಪದರು ಹಣವನ್ನು ಮರಳಿ

ಯಾವಾಗ ಬೇಕಾದರೂ ಪಡೆಯಬಹುದಾಗಿತ್ತು. ಹೀಗೆ ಗ್ರಾಮಿಣ ಜನಪದರು ವ್ಯವಹಾರವು ಲೇವಾ-ದೇವಿಗಾರರೊಡನೆ ನಿರಂತರವಾಗಿತ್ತು.

ಲೇವಾ-ದೇವಿಗಾರರು ಜನಪದರಿಗೆ ಸಾಲ-ನೀಡುವಾಗ ಕುಟುಂಬಗಳ ಚಾರಿತ್ರಿಕ ಹಿನ್ನೆಲೆಯೊಂದಿಗೆ ಬಡರೈತ, ಕೂಲಿ ಕಾರ್ಮಿಕರಿಗೆ ಇನ್ನುಳಿದ ಕಸಬುದಾರರಿಗೆ ಅವರ ಕಷ್ಟ ಕಾಲದಲ್ಲಿ ಯಾವುದೇ ವೇಳೆಯಲ್ಲಿ ಆಧಾರಗಳಿಲ್ಲದೆಯೂ ಸಾಲದ ವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದರು. ಆದ್ದರಿಂದಲೇ ಜನಪದರು ಇವರನ್ನು ತಮ್ಮ ಮರ್ಯಾದೆಯನ್ನು ರಕ್ಷಿಸುವ ದೇವರುಗಳೆಂದು ಕರೆಯುತ್ತಿದ್ದರು.

ಲೇವಾ-ದೇವಿಗಾರರು ವಿಧಿಸುವ ಬಡ್ಡಿಯ ದರಗಳು[೨೮] ಸಂದರ್ಭಕ್ಕನುಗುಣವಾಗಿರುತ್ತಿದ್ದವು. ಇವರು ಉತ್ಪಾದಕ ಚಟುವಟಿಕೆಗಿಂತ ಅನುತ್ಪಾದಕ ಚಟುವಟಿಕೆಗಳಿಗೆ ಹೆಚ್ಚಾಗಿ ಸಾಲವನ್ನು ನೀಡುತ್ತಿದ್ದರು. ಸಾಲ ನೀಡುವಾಗ ಜಮೀನುದಾರನೊಬ್ಬನನ್ನು ಗೊತ್ತುಪಡಿಸಿಕೊಳ್ಳುತ್ತಿದ್ದರು. ಅಕಸ್ಮಾತ್ ಸಾಲ ಪಡೆದವನು, ಸಾಲ ತೀರಿಸದೆ ಮರಣ ಹೊಂದಿದರೆ ಅಂತಹ ಸಂದರ್ಭದಲ್ಲಿ ಜಮೀನುದಾರನು ಆ ಸಾಲದ ಹೊಣೆಯನ್ನು ಹೊತ್ತುಕೊಳ್ಳಬೇಕು.

ಸಂತ ಶಿಶುನಾಳ ಶರೀಪರು ಸಹ ಸಾಲದ ಬಲೆಗೆ ಬಿದ್ದ ಜನಸಾಮಾನ್ಯರನ್ನು ಕುರಿತು ತಮ್ಮ ತತ್ವಪದಗಳಲ್ಲಿ ಸಾಲ ಮತ್ತು ಬಡ್ಡಿಯನ್ನು ಕುರಿತು ಹೀಗೆ ಹೇಳಿದ್ದಾರೆ.

ಅಸಲು ಬಡ್ಡಿಯ ನುಂಗಿ,  
ಬಡ್ಡಿ ಹೆಬ್ಬೆರಳನು ನುಂಗಿ  
ಹೆಂಡತಿ ಕೊರಳಿನ ತಾಳಿಯನು ಸರಾಯಿ ನುಂಗಿತ್ತಾ  
ಸಾಲ ಪತ್ರವ ನುಂಗಿ  
ಪತ್ರ ಹೆಬ್ಬೆಟ್ಟು ನುಂಗಿ  
ಹೆಬ್ಬೆಟ್ಟು ಒತ್ತಿದವನ ಚಟ್ಟವಾನುಂಗಿತ್ತಾ

ಸಾಲ ಕೊಡುವಾಗ ರೈತರ ಜಮೀನು, ಇನ್ನಿತರೆ ವಸ್ತುಗಳನ್ನು ಅಡವಿಟ್ಟುಕೊಂಡು ಸಾಲ ನೀಡುತ್ತಿದ್ದರು. ಎಷ್ಟೋ ಜನ ಬಡರೈತರು ಸಾಲ ತೀರಿಸಲಾಗದೆ ತಮ್ಮ ಜಮೀನನ್ನು ಲೇವಾ-ದೇವಿಗಾರರಿಗೆ ಒಪ್ಪಿಸಿ, ಅವರಲ್ಲಿ ತಾವೇ ಕೃಷಿ ಕಾರ್ಮಿಕರಾಗಿದ್ದಾರೆ. ಒಟ್ಟಿನಲ್ಲಿ ಲೇವಾದೇವಿಗಾರರು ಇವರನ್ನು ಸಾಲದ ಶೂಲಕ್ಕೆ ತಳ್ಳಿ ಶೋಷಣೆಗೆ ನಡೆಸುತ್ತಿದ್ದರು ಎನ್ನಬಹುದು.

ದೇಶಿಯ ಬ್ಯಾಂಕರರಿಗೂ ಮತ್ತು ಹಳ್ಳಿಯ ಸಾಹುಕಾರರಿಗೂ ವ್ಯತ್ಯಾಸವಿದೆ. ಹಳ್ಳಿಯ ಸಾಹುಕಾರರು ಕೇವಲ ಸಾಲ ಕೊಡುವ ವ್ಯವಹಾರವನ್ನು ಮಾತ್ರ ಮಾಡುತ್ತಾರೆ. ಜನರಿಂದ ಠೇವಣಿ ಸ್ವೀಕರಿಸುವುದಿಲ್ಲ. ಇವರು ಕೃಷಿ ಮತ್ತು ಅನುಭೋಗದ ಉದ್ದೇಶಗಳಿಗಾಗಿ ಸಾಲ ಕೊಡುತ್ತಾರೆ. ಕೆಲವು ಸಂದರ್ಭಗಳಲ್ಲಿ ವಸ್ತುಗಳನ್ನು ಅಡವಿಟ್ಟುಕೊಂಡು ಇನ್ನೂ ಕೆಲವು ಸಂದರ್ಭಗಳಲ್ಲಿ ಅಡವನ್ನಿಟ್ಟುಕೊಳ್ಳದೇ ಸಾಲ ಕೊಡುವುದರಿಂದ ಬಡ್ಡಿಯ ದರವು ಹೆಚ್ಚು ಇರುತ್ತದೆ.

ದೇಶಿಯ ಬ್ಯಾಂಕರರು ಜನರಿಂದ ಠೇವಣಿ ಸ್ವೀಕರಿಸುತ್ತಿದ್ದಾರೆ. ವಾಣಿಜ್ಯ ಮತ್ತು ಸಣ್ಣ ಉದ್ಯಮಗಳಿಗೆ ಸಾಲ ಒದಗಿಸುತ್ತಾರೆ. ಇವರು ಬೆಲೆಯುಳ್ಳ ವಸ್ತುಗಳನ್ನು ಅಡವು ಇಟ್ಟುಕೊಂಡು ಸಾಲ ಕೊಡುತ್ತಾರೆ. ಅವರ ವ್ಯವಹಾರವು ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿದ್ದು, ಹಳ್ಳಿಗಳಲ್ಲಿ ಸಣ್ಣ ಪ್ರಮಾಣದಲ್ಲಿ ಪಟ್ಟಣ/ನಗರ ಪ್ರದೇಶಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ವ್ಯವಹಾರ ಮಾಡುತ್ತಾರೆ. ದೇಶದಲ್ಲಿ ಎರಡು ರೀತಿಯ ಬ್ಯಾಂಕರರು ಇದ್ದಾರೆ. ಕೆಲವರು ಬ್ಯಾಂಕಿಂಗ್ ವ್ಯವಹಾರವನ್ನು ಮಾತ್ರ ಮಾಡುವವರಾಗಿದ್ದಾರೆ. ಇನ್ನೂ ಕೆಲವರು ಬ್ಯಾಂಕಿಂಗ್ ವ್ಯವಹಾರದೊಂದಿಗೆ ವ್ಯಾಪಾರವನ್ನು ಮಾಡುವವರಾಗಿದ್ದಾರೆ.

ಈ ಲೇವಾ-ದೇವಿಗಾರರು ಸಾಲವನ್ನು ನೀಡುವುದರ ಜೊತೆಗೆ ಜನಪದರ ಠೇವಣಿಗಳನ್ನು ಸ್ವೀಕರಿಸುತ್ತಿದ್ದರು. ಜನಪದರು ಠೇವಣಿಗಳನ್ನು ಬೇಡಿದಾಗ ಹಿಂತಿರುಗಿಸುತ್ತಿದ್ದರು. ಅನೇಕ ದೇಶಿಯ ಬ್ಯಾಂಕರರು ತಮ್ಮ ಹಣಕಾಸು ವ್ಯವಹಾರದೊಂದಿಗೆ ವ್ಯಾಪಾರವನ್ನು ಮಾಡುತ್ತಾರೆ. ದಿನನಿತ್ಯ ಬಳಕೆ ಮಾಡುವ ಸಾಮಾನುಗಳ ಅಂಗಡಿಯನಿಟ್ಟಿರುತ್ತಾರೆ. ಅಲ್ಲದೆ ಅವರು ಸ್ಥಳೀಯ ರೈತರಿಂದ ದವಸ-ಧಾನ್ಯಗಳನ್ನು ಖರೀದಿ ಮಾಡಿ ನಗರಗಳಿಗೆ ಕಳುಹಿಸುತ್ತಾರೆ. ಈ ಪದ್ಧತಿಯನ್ನು ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು.

**೨.೬. ದೇಶಿ ಬ್ಯಾಂಕರರ ದೋಷಗಳು**

೧. ದೇಶಿಯ ಬ್ಯಾಂಕರರು/ಸಾಹುಕಾರರು ತಮ್ಮ ವ್ಯವಹಾರವನ್ನು ವಂಶಪಾರಂಪರ್ಯವಾಗಿ ಮಾಡುತ್ತಾ ಬಂದಿದ್ದು ತುಂಬಾ ಹಳೆಯ ಸಂಪ್ರದಾಯಗಳನ್ನೇ ಅನುಸರಿಸುತ್ತಾರೆ. ಇವರು ಉತ್ಪಾದಕ ಚಟುವಟಿಕೆಗಳಿಗಿಂತ ಅನುತ್ಪಾದಕ ಚಟುವಟಿಕೆಗಳಿಗಾಗಿ ಸಾಲ ಒದಗಿಸುತ್ತಾರೆ. ಇದರಿಂದಾಗಿ ರೈತರು, ಸಣ್ಣ ವ್ಯಾಪಾರಸ್ಥರು ಕುಶಲ ಕೆಲಸಗಾರರು ಇವರಿಂದ ಪಡೆದ ಸಾಲವನ್ನು ಹಿಂದಿರುಗಿಸದೆ ಸಾಲದ ಭಾರದಿಂದ ಬಳಲುತ್ತಾರೆ.

೨. ಇವರು ತಮ್ಮ ಲೆಕ್ಕಪತ್ರಗಳನ್ನು ತಮ್ಮ ಪ್ರಾದೇಶಿಕ ಭಾಷೆಯಲ್ಲಿಯೇ ಬರೆಯುವುದರಿಂದ ಇತರರಿಗೆ ಅದು ತಿಳಿಯುವುದಿಲ್ಲ. ತಮ್ಮ ಲೆಕ್ಕಪತ್ರಗಳನ್ನು ಸರಿಯಾಗಿ ಇಟ್ಟಿರುವುದಿಲ್ಲ. ಅನೇಕ ಸಂದರ್ಭಗಳಲ್ಲಿ ಅವರು ಅಪ್ರಾಮಾಣಿಕ ವಿಧಾನಗಳನ್ನು ಅನುಸರಿಸಿ ಸಾಲಗಾರರಗೆ ಮೋಸ ಮಾಡುವುದುಂಟು. ಅವರು ಹಣ ಕೊಟ್ಟವರಿಗೆ ಪಾವತಿ ಕೊಡದೇ ಇರುವುದುಂಟು. ಸಾಲ ಕೊಟ್ಟ ಹಣಕ್ಕಿಂತಲೂ ಹೆಚ್ಚು ಹಣವನ್ನು ಲೆಕ್ಕದಲ್ಲಿ ಬರೆಯುವುದುಂಟು. ಸಾಲಗಳ ಮೇಲೆ ಅವರು ತೆಗೆದುಕೊಳ್ಳುವ ಬಡ್ಡಿ ದರವೂ ಸಹ ಹೆಚ್ಚಾಗಿದ್ದು[೬], ಸಣ್ಣ ಸಾಲಗಾರರಿಗೆ ತುಂಬಾ ಹಾನಿಯಾಗುತ್ತದೆ.

**ಪರಿಹಾರ**

ದೇಶೀಯ ಬ್ಯಾಂಕರರು ಬದಲಾಗುತ್ತಿರುವ ಸನ್ನಿವೇಶಕ್ಕೆ ತಕ್ಕಂತೆ ಹೊಂದಿಕೊಳ್ಳುವುದು ಅವಶ್ಯ. ಅವರು ತಮ್ಮ ಲೆಕ್ಕಪತ್ರಗಳನ್ನು ಸರಿಯಾಗಿಟ್ಟು ಅರ್ಹರಾದ ಲೆಕ್ಕತಪಾಸಿಗರಿಂದ ಅವುಗಳನ್ನು ತಪಾಸು

ಮಾಡಿಸಬೇಕು. ಅವರು ತಮ್ಮ ಠೇವಣಿಯ ವ್ಯವಹಾರವನ್ನು ಹೆಚ್ಚಿಸಬೇಕು. ತಮ್ಮ ಬ್ಯಾಂಕಿನ ಜೊತೆಗೆ ವ್ಯಾಪಾರವನ್ನು ಕೂಡಿಸದೇ ಪ್ರತ್ಯೇಕಿಸಬೇಕು. ಅವರು ಅನುಭೋಗದ ಉದ್ದೇಶಗಳಿಗೆ ಸಾಲವನ್ನು ಒದಗಿಸಬಾರದು. ಇವರು ರಿಸರ್ವ್ ಬ್ಯಾಂಕಿನ ನಿರ್ದೇಶನ ಮತ್ತು ನಿಯಂತ್ರಣಗೊಳಪಟ್ಟು ಕಾರ್ಯ ನಿರ್ವಹಿಸಬೇಕು. ದೇಶಿ ಬ್ಯಾಂಕ್‌ರರನ್ನು ಆಧುನಿಕ ಬ್ಯಾಂಕಿಂಗ್ ಪದ್ಧತಿಯೊಂದಿಗೆ ಸಮಗ್ರಗೊಳಿಸುವುದರಿಂದ ದೇಶಿ ಬ್ಯಾಂಕರರಿಗೆ ಆಧುನಿಕ ವಾಣಿಜ್ಯ ಬ್ಯಾಂಕುಗಳಂತೆ ವ್ಯವಹಾರ ನಡೆಸಲು ಸಾಧ್ಯವಾಗುತ್ತದೆ.

ನಮ್ಮ ದೇಶದ ಆರ್ಥಿಕ ಜೀವನದಲ್ಲಿ ದೇಶಿ ಬ್ಯಾಂಕರರು ಒಳ್ಳೆ ಮಹತ್ವದ ಪಾತ್ರ ನಿರ್ವಹಿಸುತ್ತಿದ್ದಾರೆ. ಆಧುನಿಕ ಬ್ಯಾಂಕಿಂಗ್ ಸೌಲಭ್ಯಗಳು ದೇಶದ ಎಲ್ಲಾ ಭಾಗಗಳಲ್ಲಿ ಕಂಡು ಬರುತ್ತಿಲ್ಲ. ದೇಶದ ಕೆಲವೊಂದು ದೂರದ ಹಳ್ಳಿಗಳಲ್ಲಿ ಇಂದಿಗೂ ಆಧುನಿಕ ಬ್ಯಾಂಕುಗಳ ಸೌಲಭ್ಯ ಇನ್ನೂ ಸಿಕ್ಕುತ್ತಿಲ್ಲ. ಇವರು ಸಾಲಕ್ಕಾಗಿ ಅಲ್ಲಿಯ ದೇಶಿಯ ಬ್ಯಾಂಕರರನ್ನೇ ಅವಲಂಬಿಸಬೇಕಾಗಿದೆ.

೧೯೨೯-೩೪ರ ಅವಧಿಯಲ್ಲಿ ಭಾರತದ ಹಣಕಾಸಿನ ಮಂತ್ರಿಯಾಗಿದ್ದ "ಸರ ಜಾರ್ಜ್ ಸೊಸ್ಟೆರ್" ಎಂಬುವವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ. "ನಮ್ಮ ದೇಶದ ವ್ಯಾಪಾರ ಮತ್ತು ಉದ್ದಿಮೆಗೆ ಬೇಕಾಗುವ ಒಟ್ಟು ಸಾಲದ ೯೦% ರಷ್ಟನ್ನು ದೇಶಿ ಬ್ಯಾಂಕರರೇ ಒದಗಿಸುತ್ತಾರೆ. ದೇಶದ ಎಲ್ಲ ಭಾಗಗಳಲ್ಲಿಯೂ ಆಧುನಿಕ ಬ್ಯಾಂಕಿಂಗ್ ಪದ್ಧತಿ ಬೆಳೆದು ಬರಬೇಕಾದರೆ ಇನ್ನೂ ಅನೇಕ ವರ್ಷಗಳು ಬೇಕಾಗುತ್ತವೆ. ಆದ್ದರಿಂದ ಮುಂಬರುವ ಅನೇಕ ವರ್ಷಗಳವರೆಗೆ ಭಾರತೀಯರ ಆರ್ಥಿಕ ಜೀವನದಲ್ಲಿ ದೇಶಿ ಬ್ಯಾಂಕರರು ಅತ್ಯಾವಶ್ಯಕ ವರ್ಗದವರಾಗಿ ಉಳಿಯುತ್ತಾರೆ." ಇಂದು ಭಾರತದಲ್ಲಿ ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಸಾಕಷ್ಟು ಪ್ರಗತಿ ಸಾಧಿಸಿದ್ದರೂ ಕೂಡ ಅವರ ಅಭಿಪ್ರಾಯವು ಈಗಲೂ ನಿಜವೆಂದು ಕಂಡು ಬರುತ್ತದೆ.

ಬ್ಯಾಂಕು ಎಂದರೇನು? ಎಂಬ ಪ್ರಶ್ನೆಗೆ ಆಗಿನ ಕಾಲದಲ್ಲಿ ದೇಶಿಯ ಬ್ಯಾಂಕರರು ಜನಪದರಿಂದ ಠೇವಣಿ ಸ್ವೀಕರಿಸಿ ಜನಪದರಿಗೆ ಸಾಲವನ್ನೊದಗಿಸುತ್ತಿದ್ದರು. ಇವರುಗಳು ಮಾರುಕಟ್ಟೆಯಲ್ಲಿ ಬೆಂಚು ಹಾಕಿಕೊಂಡು ಅದರ ಮೇಲೆ ಕುಳಿತು ವ್ಯವಹಾರ ಮಾಡುತ್ತಿದ್ದರಿಂದ ಬ್ಯಾಂಕು ಎಂಬ ಹೆಸರು ಬಂತೆಂದು ಹೇಳುತ್ತಾರೆ.

ಇಂಗ್ಲೆಂಡಿನಲ್ಲಿ ಅಕ್ಕಸಾಲಿಗರು ಕೈಗೊಂಡ ಹಣದ ಲೇವಾದೇವಿ ವ್ಯವಹಾರಗಳಲ್ಲಿ ಇಂದಿನ ಬ್ಯಾಂಕು ಉಗಮ ಪದ್ಧತಿಯನ್ನು ಕಾಣಬಹುದು. ವ್ಯಾಪಾರಸ್ಥರು ತಮ್ಮಲ್ಲಿ ಅಧಿಕವಾಗಿದ್ದ ಹಣವನ್ನು ಸುರಕ್ಷಿತವಾಗಿಡಲು ಅಕ್ಕಸಾಲಿಗರಿಗೆ ಒಪ್ಪಿಸುತ್ತಿದ್ದರು.[೬] ಆಗ ಅಕ್ಕಸಾಲಿಗರು ಠೇವಣಿ ಇಟ್ಟ ವ್ಯಾಪಾರಸ್ಥರಿಗೆ ಅವರಿಟ್ಟ ಠೇವಣಿಯ ಮೌಲ್ಯದಷ್ಟು ರಸೀದಿಯನ್ನು ಕೊಡುತ್ತಿದ್ದರು. ಈ ರಸೀದಿಗಳಿಗೆ ಅಕ್ಕಸಾಲಿಗಾರ ಪಾವತಿ ಚೀಟಿಗಳೆಂದು ಕರೆಯುತ್ತಿದ್ದರು. ಈ ಪಾವತಿ ಚೀಟಿಗಳನ್ನು ಹೊಂದಿದವರಿಗೆ ಠೇವಣಿ ಹಣ ವಾಪಸ್ಸು ಪಡೆಯಲು ಹಕ್ಕು ಇತ್ತು. ಬೇಡಿದಾಗ ಹಣವನ್ನು ಹಿಂತಿರುಗಿಸುವ ಹೊಣೆ ಅಕ್ಕಸಾಲಿಗರದ್ದಾಗಿತ್ತು.

ಅವರ ಚೀಟಿಗಳು ಭರವಸೆಯ ಸಂಕೇತಗಳಾಗಿದ್ದವು. ಈ ಪ್ರಕಾರ ಹಣದ ಲೇವಾದೇವಿ ವ್ಯವಹಾರ ಮಾಡುವಾಗ ಅವರಿಗೆ ಹೊಸ ಅನುಭವದ ಅರಿವಾಯಿತು. ಎಲ್ಲಾ ಠೇವಣಿದಾರರು ಒಂದೇ ವೇಳೆಗೆ ತಾವಿಟ್ಟ ಹಣವನ್ನು ವಾಪಸ್ಸು ಕೇಳಲು ಬರುವುದಿಲ್ಲವೆಂಬ ವಿಶ್ವಾಸ ಅವರಿಗಾಯಿತು. ಆದ್ದರಿಂದ ಅವರು ಠೇವಣಿ ಹಣವನ್ನು ತಮ್ಮ ಬಳಿ ಹಾಗೆ ಇಟ್ಟುಕೊಳ್ಳುವ ಬದಲು ಅಗತ್ಯವಿದ್ದವರಿಗೆ ಸಾಲ ಕೊಟ್ಟು ಬಡ್ಡಿಯನ್ನು ಸಂಪಾದಿಸಲು ಆರಂಭಿಸಿದರು. ರಾಜರು, ಸರದಾರರು, ವರ್ತಕರು ಮತ್ತು ಉತ್ಪಾದಕರಿಗೆ ಠೇವಣಿ ಹಣದೊಳಗಿಂದ ಸಾಲವನ್ನು ನೀಡಲು ಆರಂಭಿಸಿದರು. ಹೀಗೆ ಭದ್ರತೆಗಾಗಿ ಇಟ್ಟ ಠೇವಣಿ ರೂಪದಲ್ಲಿಯ ಹಣವು ಸಾಲ ಕೊಡುವ ವ್ಯವಹಾರಕ್ಕಾಗಿ ಬಳಸಲ್ಪಡುವ ಸಾಧನವಾಯಿತು. ಹೀಗೆ ಮುಂದುವರೆದ ಸಂಸ್ಥೆಯೇ ಬ್ಯಾಂಕಾಗಿರಬಹುದು.

ಕ್ರಮೇಣ ಸ್ವತಂತ್ರ ಬ್ಯಾಂಕಿಂಗ್ ಸಂಸ್ಥೆಗಳು ವಾಣಿಜ್ಯ ವ್ಯವಹಾರಗಳಿಗೆ ಸಾಲ ನೀಡಲು ಪ್ರಪಂಚದಲ್ಲಿ ಅಸ್ತಿತ್ವಕ್ಕೆ ಬಂದವು. ೧೬೯೪ರಲ್ಲಿ ಮೂರನೆಯ ವಿಲಿಯಂ ದೊರೆಗೆ ಸಾಲವನ್ನು ಕೊಡುವುದಕ್ಕಾಗಿ ವಿಶೇಷ ಅನುಮತಿ ಪತ್ರದ ಮೂಲಕ 'ಬ್ಯಾಂಕ್ ಆಫ್ ಇಂಗ್ಲೆಂಡ್[೮೧]' ಸ್ಥಾಪಿಸಲ್ಪಟ್ಟಿತು. ಕ್ರಮೇಣ ಅಕ್ಕಸಾಲಿಗರಲ್ಲಿ ಜನತೆಯ ವಿಶ್ವಾಸ ಕಡಿಮೆಯಾಯಿತು. ಲಂಡನ್ ನಗರದ ಸುತ್ತಮುತ್ತ ಪ್ರತ್ಯೇಕ ಬ್ಯಾಂಕುಗಳು ಸ್ಥಾಪಿಸಲ್ಪಟ್ಟವು. ಆಧುನಿಕ ಅರ್ಥಶಾಸ್ತ್ರಜ್ಞರು ಬ್ಯಾಂಕುಗಳ ಬಗ್ಗೆ ತಮ್ಮದೇ ಆದ ವ್ಯಾಖ್ಯಾನ ನೀಡಿದ್ದಾರೆ. ಸೇಯರ್ಸ್‌ರವರ ಪ್ರಕಾರ "ಬ್ಯಾಂಕಿನ ಕೆಲಸ ಕೇವಲ ಹಣದ ಸರಬರಾಜು ಮಾಡುವುದಲ್ಲ. ಅಂದರೆ ಹಣದ ಉತ್ಪಾದನೆ ಮಾಡುವುದು ಅದರ ಕೆಲಸವಾಗಿದೆ" ಎಂದಿದ್ದಾರೆ. "ಬ್ಯಾಂಕ್ ಸಾಲ ರೂಪದಲ್ಲಿ ಹಣವನ್ನು ಸೃಷ್ಟಿಸುವ ಒಂದು ಕಾರ್ಖಾನೆ. ತನ್ನ ಮತ್ತು ಇತರರ ಸಾಲ-ಸೋಲಗಳಲ್ಲಿ ವ್ಯವಹರಿಸುವ ಸಂಸ್ಥೆಯೇ ಬ್ಯಾಂಕು"[೮೨] ಎಂದು ಕ್ರೋಥರ್ ತಿಳಿಸಿದ್ದಾರೆ. ಒಟ್ಟಿನಲ್ಲಿ ಬ್ಯಾಂಕ್ ಎಂದರೆ ಜನಸಾಮಾನ್ಯರಿಂದ ಠೇವಣಿ ಸ್ವೀಕರಿಸಿ ಜನಸಾಮಾನ್ಯರಿಗೆ ಹಣದ ರೂಪದ ಸಾಲವನ್ನೊದಗಿಸುವ ಸಂಸ್ಥೆಯೇ ಬ್ಯಾಂಕ್ ಎನ್ನಬಹುದು.

### ೩.೭. ಆಧುನಿಕ ಬ್ಯಾಂಕಿಂಗ್ ವ್ಯವಹಾರದ ಬೆಳವಣಿಗೆ

ದೇಶದಲ್ಲಿ ಪ್ರಪ್ರಥಮ ಬಾರಿಗೆ ೧೭೭೦ರಲ್ಲಿ ಕಲ್ಕತ್ತಾ ಮತ್ತು ಬಾಂಬೆ ಈ ಎರಡು ಪ್ರದೇಶಗಳಲ್ಲಿ 'ಬ್ಯಾಂಕ್ ಆಫ್ ಹಿಂದೂಸ್ತಾನ್' ಆರಂಭಿಸಲಾಯಿತು. ಆಧುನಿಕ ಬ್ಯಾಂಕಿಂಗ್ ವ್ಯವಸ್ಥೆಯು ೧೯ನೇ ಶತಮಾನದಲ್ಲಿ ಪ್ರಾರಂಭವಾಯಿತು. ದಿ ಬ್ಯಾಂಕ್ ಆಫ್ ಬೆಂಗಾಲ್ (೧೮೦೬) ದಿ ಬ್ಯಾಂಕ್ ಆಫ್ ಬಾಂಬೆ (೧೮೪೦) ದಿ ಬ್ಯಾಂಕ್ ಆಫ್ ಮದ್ರಾಸ್ (೧೮೪೧) ಎಂಬ ಬ್ಯಾಂಕುಗಳನ್ನು ಸರ್ಕಾರದ ಪಾಲುದಾರಿಕೆಯೊಂದಿಗೆ ಸ್ಥಾಪಿಸಲಾಯಿತು. ಇವುಗಳಿಗೆ 'ಪ್ರೆಸಿಡೆನ್ಸಿ' ಬ್ಯಾಂಕುಗಳೆಂದು ಕರೆಯಲಾಯಿತು. ಅವುಗಳಿಗೆ ತಮ್ಮ ಕ್ಷೇತ್ರದಲ್ಲಿ ನೋಟುಗಳನ್ನು ಮುದ್ರಿಸಿ ಚಲಾವಣೆಗೆ ತರುವ ಅಧಿಕಾರವನ್ನು ನೀಡಲಾಯಿತು. ಜಂಟಿ ವಲಯದ ಪ್ರಪ್ರಥಮ ಬ್ಯಾಂಕಾಗಿ 'ಔದ್ ವಾಣಿಜ್ಯ ಬ್ಯಾಂಕ್' (೧೮೮೧)ನ್ನು ಸ್ಥಾಪಿಸಲಾಯಿತು. ಅನಂತರ ಇದೇ ರೀತಿಯಲ್ಲಿ ೧೮೯೪ರಲ್ಲಿ 'ಪಂಜಾಬ್ ನ್ಯಾಶನಲ್ ಬ್ಯಾಂಕ್'

ಮತ್ತು ಇಂಡಿಯನ್ ಪೀಪಲ್ಸ್ ಬ್ಯಾಂಕು ೧೯೦೧ರಲ್ಲಿ ಸ್ಥಾಪಿಸಲ್ಪಟ್ಟವು. ವಾಣಿಜ್ಯ ಬ್ಯಾಂಕುಗಳು ತಮ್ಮ ಅಧಿಕ ಪ್ರಮಾಣದ ಪತ್ತಿನ ಸೌಲಭ್ಯವನ್ನು ಬ್ರಿಟಿಷರ ಕೈಗಾರಿಕೆಗಳಿಗೆ ಬೇಕಾದ ಕಚ್ಚಾ ಸರಕುಗಳನ್ನು ಕೊಳ್ಳುವುದಕ್ಕೆ ಮತ್ತು ಅವರ ವ್ಯಾಪಾರಕ್ಕೆ ಪ್ರೋತ್ಸಾಹ ನೀಡುತ್ತಾ ಬಂದವು. ೧೯೦೫ರಲ್ಲಿ ಸ್ವದೇಶಿ ಚಳುವಳಿಯಿಂದ ದೇಶಿಯರು ಪ್ರೇರಿತರಾಗಿ ಹೊಸ ಬ್ಯಾಂಕುಗಳ ಸ್ಥಾಪನೆಗೆ ತೊಡಗಿದರು. ೧೯೧೩ರಲ್ಲಿ ಕರ್ನಾಟಕದಲ್ಲಿ ಮೈಸೂರು ಅರಸರಿಂದ ಮೈಸೂರು ಬ್ಯಾಂಕನ್ನು ಸ್ಥಾಪಿಸಲಾಯಿತು.

೧೯೨೧ರಲ್ಲಿ ಬ್ಯಾಂಕ್ ಆಫ್ ಬೆಂಗಾಲ್, ಬಾಂಬೆ ಮತ್ತು ಮದ್ರಾಸ್ ಈ ಮೂರು ಬ್ಯಾಂಕುಗಳನ್ನು ಒಂದುಗೂಡಿಸಿ "ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾ ಲಿಮಿಟೆಡ್" ಎಂಬ ಬ್ಯಾಂಕನ್ನು ಸ್ಥಾಪಿಸಲಾಯಿತು. ಈ ಬ್ಯಾಂಕು ಭಾರತೀಯ ರಿಸರ್ವ ಬ್ಯಾಂಕು ಸ್ಥಾಪನೆಯಾಗುವವರೆಗೆ ನೋಟುಗಳನ್ನು ಮುದ್ರಿಸಿ ಚಲಾವಣೆಗೆ ತರುವುದು, ಬ್ಯಾಂಕುಗಳ ಬ್ಯಾಂಕಾಗಿ, ಸರ್ಕಾರದ ಬ್ಯಾಂಕಾಗಿ ತನ್ನ ಕಾರ್ಯನಿರ್ವಹಿಸಿತು.

೧೯೨೬ರಲ್ಲಿ ನೇಮಕಗೊಂಡ 'ಹಿಲ್ಟನ್‌ಯಂಗ್ ಆಯೋಗವು' ಶಾಸನಬದ್ಧವಾದ ಕೇಂದ್ರ ಬ್ಯಾಂಕನ್ನು ಸ್ಥಾಪಿಸಬೇಕೆಂದು ಸಲಹೆ ಮಾಡಿತು. ಅವರ ಸಲಹೆಗೆ ಅನುಗುಣವಾಗಿ ೧೯೩೪ರಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಕಾಯ್ದೆಯನ್ನು ಜಾರಿಗೆ ತಂದು ೧೯೩೫ ಏಪ್ರಿಲ್ ೧ ರಂದು ಭಾರತದಲ್ಲಿ 'ರಿಸರ್ವ್ ಬ್ಯಾಂಕ್' ಅಸ್ತಿತ್ವಕ್ಕೆ ಬಂದಿತು. ೧೯೧೩ ರಿಂದ ೧೯೪೭ರವರೆವಿಗೂ ಭಾರತದಲ್ಲಿ ಬ್ಯಾಂಕುಗಳ ಬೆಳವಣಿಗೆಯು ಏರಿಳಿತದೊಂದಿಗೆ ಮುಂದುವರೆಯಿತು. ೧೯೪೯ರಲ್ಲಿ ಬ್ಯಾಂಕಿಂಗ್ ನಿಯಂತ್ರಣ ಕಾಯ್ದೆಯನ್ನು ಪಾಸು ಮಾಡಿ, ಅದರಲ್ಲಿ ಠೇವಣಿದಾರರ ಹಿತರಕ್ಷಣೆಯನ್ನೂ ಕಾಯ್ದುಕೊಳ್ಳಲಾಯಿತು.

ದೇಶದಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಾಣಿಜ್ಯ ಬ್ಯಾಂಕುಗಳನ್ನು ಮುಖ್ಯವಾಗಿ ಶೆಡ್ಯೂಲ್ಡ ಮತ್ತು ನಾನ್ ಶೆಡ್ಯೂಲ್ಡ ಬ್ಯಾಂಕುಗಳೆಂದು ವಿಂಗಡಿಸಲಾಯಿತು. ಪಾವತಿ ಬಂಡವಾಳ ಮತ್ತು ಮೀಸಲು ನಿಧಿ ಒಟ್ಟು ನಿಧಿ ಒಟ್ಟುಗೂಡಿ ೫ ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಇದ್ದರೆ ಅಂತಹ ಬ್ಯಾಂಕುಗಳನ್ನು ಶೆಡ್ಯೂಲ್ಡ ಬ್ಯಾಂಕುಗಳೆಂದು ಕರೆಯಲಾಯಿತು. ಇವು ತಮ್ಮ ಮುದ್ದತಿ ಠೇವಣಿ-ಚಾಲ್ತಿ ಠೇವಣಿಯ ಒಟ್ಟು ಮೊತ್ತದ ಪ್ರತಿಶತ ಹಣವನ್ನು ರಿಸರ್ವ್ ಬ್ಯಾಂಕಿನಲ್ಲಿಡಬೇಕಾಗುತ್ತದೆ. ಈ ಬ್ಯಾಂಕುಗಳು ತಮ್ಮ ಅಧಿಕೃತ ಸಾಲ ಪತ್ರಗಳನ್ನು ರಿಸರ್ವ ಬ್ಯಾಂಕಿನಲ್ಲಿಟ್ಟು ಸಾಲ ಪಡೆಯಬಹುದು. ರಿಸರ್ವ ಬ್ಯಾಂಕು ಕೇಳುವ ಎಲ್ಲಾ ಅಂಕಿ-ಅಂಶಗಳ ವರದಿಯನ್ನು ಕಾಲಕಾಲಕ್ಕೆ ಒಪ್ಪಿಸಬೇಕಾಗುತ್ತದೆ. ನಾನ್ ಶೆಡ್ಯೂಲ್ಡ್ ಬ್ಯಾಂಕುಗಳ ಬಂಡವಾಳ ಮತ್ತು ಮೀಸಲು ನಿಧಿ ೫ ಲಕ್ಷ ಮೊತ್ತಕ್ಕಿಂತ ಕಡಿಮೆ ಇರುತ್ತದೆ. ಇವು ಸ್ಥಳೀಯ ವ್ಯಾಪಾರಸ್ಥರಿಗೆ ಮತ್ತು ಉದ್ದಿಮೆದಾರರಿಗೆ ಸಾಲ ಒದಗಿಸುತ್ತವೆ. ಇವು ಕೂಡ ರಿಸರ್ವ ಬ್ಯಾಂಕಿನೊಂದಿಗೆ ಸಂಬಂಧವನ್ನು ಹೊಂದಿರುತ್ತವೆ. ೧೯೫೧ರಲ್ಲಿ ೯೨ ಶೆಡ್ಯೂಲ್ಡ್ ಬ್ಯಾಂಕುಗಳಿದ್ದು, ೪೭೪ ನಾನ್ ಶೆಡ್ಯೂಲ್ಡ್ ಬ್ಯಾಂಕುಗಳಿದ್ದವು. ಅವು ಕ್ರಮವಾಗಿ ೨೬೪೭ ಮತ್ತು ೧೫೦೪ ಶಾಖ ಕಚೇರಿಗಳನ್ನು ಹೊಂದಿದ್ದವು. ೧೯೬೯ ಜೂನ್ ವೇಳೆಗೆ ೭೩ ಶೆಡ್ಯೂಲ್ಡ್ ಬ್ಯಾಂಕುಗಳು, ೧೬ ನಾನ್ ಶೆಡ್ಯೂಲ್ಡ್ ಬ್ಯಾಂಕುಗಳಿದ್ದವು.

೧೯೯೯ರಲ್ಲಿ ೩೦೨ ಶೆಡ್ಯೂಲ್ಡ್ ಮತ್ತು ೧ ನಾನ್ ಶೆಡ್ಯೂಲ್ಡ್ ಬ್ಯಾಂಕುಗಳಿದ್ದವು. ೨೦೦೭ ಜೂನ್ ಹೊತ್ತಿಗೆ ೩೦೨ ಶೆಡ್ಯೂಲ್ಡ ಬ್ಯಾಂಕುಗಳಿದ್ದು ೭೧,೭೮೧ ಶಾಖೆಗಳನ್ನು ದೇಶದಾದ್ಯಂತ ಕಾರ್ಯನಿರ್ವಹಿಸುತ್ತಿವೆ ಎಂಬುದನ್ನು ಪಟ್ಟಿ ೧ರಲ್ಲಿ ಕಾಣಬಹುದು.

ಪಟ್ಟಿ ಸಂಖ್ಯೆ ೧

೧೯೫೧ ರಿಂದ ೨೦೦೭ವರೆಗಿನ

ಶೆಡ್ಯೂಲ್ಡ್ ಮತ್ತು ನಾನ್ ಶೆಡ್ಯೂಲ್ಡ್ ಬ್ಯಾಂಕುಗಳು ಮತ್ತು ಅದರ ಶಾಖೆಗಳು

| | ಜೂನ್ ೧೯೫೧ | ಜೂನ್ ೧೯೬೯ | ಜೂನ್ ೧೯೯೯ | ಜೂನ್ ೨೦೦೭ |
|---|---|---|---|---|
| **I.** ಬ್ಯಾಂಕುಗಳ ಸಂಖ್ಯೆ | | | | |
| ೧. ಶೆಡ್ಯೂಲ್ಡ್ ಬ್ಯಾಂಕುಗಳು | ೯೨ | ೭೩ | ೩೦೨ | ೩೦೨ |
| ೨. ನಾನ್ ಶೆಡ್ಯೂಲ್ಡ್ ಬ್ಯಾಂಕುಗಳು | ೪೭೪ | NA | ೧೬ | NA |
| **II.** ಶಾಖಾ ಕಛೇರಿಗಳ ಸಂಖ್ಯೆ | | | | |
| ೧. ಶೆಡ್ಯೂಲ್ಡ್ ಬ್ಯಾಂಕುಗಳು | ೨೬೪೭ | ೮೨೬೨ | ೬೫,೧೧೮ | ೭೧,೭೮೧ |
| ೨. ನಾನ್ ಶೆಡ್ಯೂಲ್ಡ್ ಬ್ಯಾಂಕುಗಳು | ೧೫೦೪ | NA | NA | ೦೪ |

ಆಧಾರ - R.B.I ಸ್ಟಾಟಸ್ಟಿಕಲ್ ಟೇಬಲ್ಸ್ ರಿಲೇಟಿಂಗ್, ಟು ಬ್ಯಾಂಕ್ಸ್ ಇನ್ ಇಂಡಿಯಾ, ೧೯೬೪, ಪುಟ-೧ ಇಂಡಿಯಾ ೨೦೦೦, ಮತ್ತು ೨೦೦೮ ರಿಪೋರ್ಟ್ ಆನ್ ದಿ ಟ್ರೆಂಡ್ಸ್ ಅಂಡ್ ಪ್ರೊಗ್ರೆಸ್ ಆಫ್ ಬ್ಯಾಕಿಂಗ್ ಇನ್ ಇಂಡಿಯಾ ೨೦೦೬-೦೭ R.B.I ಪುಟ ೨೯೨.

ಪಟ್ಟಿ ಸಂಖ್ಯೆ ೨ ಅಂಕಿ ಅಂಶಗಳನ್ನು ಪರಿಶೀಲಿಸಿದಾಗ ಕೃಷಿ ವಲಯಕ್ಕೆ ನೀಡಿರುವ ಪತ್ತಿನ ಪ್ರಮಾಣ ೧೯೫೧ರಲ್ಲಿ ೫.೮ ಇದ್ದುದು ೧೯೬೯ರ ವೇಳೆಗೆ ಪ್ರತಿಶತ ೦.೩ಂಕ್ಕೆ ಇಳಿದಿದ್ದಿತು. ಆದರೆ ಸರ್ಕಾರ ಮತ್ತು ಆರ್.ಬಿ.ಐ.ನ ಪರಿಶ್ರಮದಿಂದ ಪರಿಸ್ಥಿತಿ ಬದಲಾವಣೆಗೊಂಡು ೨೦೦೪ರ ಮಾರ್ಚ್ ಹೊತ್ತಿಗೆ ಶೇಕಡಾ ೩೪ಕ್ಕೆ ಏರಿತು. ಆದರೆ ವಾಣಿಜ್ಯ ವ್ಯಾಪಾರ ವಲಯಗಳಿಗೆ ೧೯೫೧ ರಿಂದ ೧೯೬೭ರ ವರೆಗಿನ ಅಂಕಿ ಅಂಶಗಳನ್ನು ಪರಿಶೀಲಿಸಿದಾಗ ಕೈಗಾರಿಕೆಗಳಿಗೆ ನೀಡಿರುವ ಪತ್ತಿನ ಪ್ರಮಾಣ ಅಧಿಕವಾಗುತ್ತಾ ಬಂದಿದೆ.

ಆದರೆ ವಾಣಿಜ್ಯ ಕ್ಷೇತ್ರಕ್ಕೆ ನೀಡಿರುವ ಪತ್ತಿನ ಪ್ರಮಾಣ ೧೯೫೧ಕ್ಕೆ ಹೋಲಿಸಿದಾಗ ೧೯೯೬ರಲ್ಲಿ ಇದು ಕಡಿಮೆಯಾಗಿರುವುದು ಕಂಡು ಬರುತ್ತದೆ.

ಭಾರತೀಯ ರಿಸರ್ವ್ ಬ್ಯಾಂಕ್ ತನ್ನ ಚಿಕ್ಕ ಬ್ಯಾಂಕುಗಳನ್ನು ದೊಡ್ಡ ಬ್ಯಾಂಕುಗಳೊಂದಿಗೆ ವಿಲೀನಗೊಳಿಸುವ ನಿರ್ಧಾರ ತೆಗೆದುಕೊಂಡಿತು. ಇದರ ಜೊತೆಗೆ ಗ್ರಾಮೀಣ ಪ್ರದೇಶಗಳಿಗೆ ಬ್ಯಾಂಕಿಂಗ್ ಸೇವೆಯನ್ನು ವಿಸ್ತರಿಸುವ ಆಲೋಚನೆ ಮಾಡಿತು. ಈ ಕಾರ್ಯಕ್ರಮದಡಿಯಲ್ಲಿ ಪ್ರಥಮ ಹಂತದಲ್ಲಿ

೧೯೫೬ರಲ್ಲಿ 'ಇಂಪೀರಿಯಲ್ ಬ್ಯಾಂಕ ಆಫ್ ಇಂಡಿಯಾ'ವನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎಂದು ಪುನರ್‌ನಾಮಕರಣಗೊಂಡಿತು. ಸರ್ಕಾರ ಈ ಬ್ಯಾಂಕಿಗೆ ೫ ವರ್ಷಗಳ ಅವದಿಯಲ್ಲಿ ೪೦೦ ಗ್ರಾಮೀಣ ಶಾಖೆಗಳನ್ನು ತೆರೆಯಲು ಕಾಯ್ದೆಬದ್ಧ ಒತ್ತಡ ಹೇರಿತು.[೮೩] ಇದರ ಜೊತೆಗೆ ಎಂಟು ಸ್ಟೇಟ್ ಅಸೋಸಿಯೇಟ್ ಬ್ಯಾಂಕುಗಳನ್ನು ೧೯೫೬-೬೦ರಲ್ಲಿ SBIದ ಸಹವರ್ತಿ ಬ್ಯಾಂಕುಗಳೆಂದು ಪರಿಗಣಿಸಲಾಯಿತು. SBI ಮತ್ತು ಅದರ ಸಹವರ್ತಿ ಬ್ಯಾಂಕುಗಳು ೧೯೬೭ರ ವೇಳೆಗೆ ೧೪೩೪ ಗ್ರಾಮೀಣ ಮತ್ತು ಅರೆಗ್ರಾಮೀಣ ಶಾಖೆಗಳನ್ನು ಆರಂಭಿಸಿದವು. ಈ ಶಾಖ ವಿಸ್ತರಣಾ ನೀತಿಯಲ್ಲಿ ಗ್ರಾಮೀಣ ಭಾಗಗಳಿಗೆ ಹೆಚ್ಚು ಒತ್ತನ್ನು ನೀಡಿದೆ. ೧೯೫೫ ರಿಂದ ೬೭ರ ಕಾಲಾವಧಿಯಲ್ಲಿ ಒಟ್ಟಾರೆ ೨೩೬೯ ಹೊಸಶಾಖೆಗಳನ್ನು ಪ್ರಾರಂಭಿಸಲಾಯಿತು. ಅವುಗಳಲ್ಲಿ ೫೦೭ ಶಾಖೆಗಳು, ಶಾಖಾರಹಿತ ಪ್ರದೇಶದಲ್ಲಿ ಸ್ಥಾಪನೆಯಾದವು. ಇದು ಪ್ರತಿ ೨೧.೪[೮೪]ರಷ್ಟು ಆಗಿದೆ. ಇನ್ನುಳಿದ ಶಾಖೆಗಳನ್ನು ಪಟ್ಟಣ ಮತ್ತು ಮಹಾ ನಗರಗಳಲ್ಲಿ ಪ್ರಾರಂಭಿಸಲಾಯಿತು. ಗ್ರಾಮೀಣ ಮತ್ತು ಅರೆಗ್ರಾಮೀಣ ಪ್ರದೇಶದಲ್ಲಿನ ವಾಣಿಜ್ಯ ಬ್ಯಾಂಕುಗಳಲ್ಲಿ ಸಂಗ್ರಹಿಸಿದ ಠೇವಣಿಯನ್ನು ಪಟ್ಟಣ ಪ್ರದೇಶದ ಕೈಗಾರಿಕೆ ಮತ್ತು ವ್ಯಾಪಾರಕ್ಕೆ ಸಾಲವನ್ನು ನೀಡುತ್ತಿದ್ದವು. ಆದರೆ ಕೃಷಿಗೆ ನೀಡಿರುವ ಪತ್ತಿನ ಪ್ರಮಾಣ ಅತ್ಯಲ್ಪದ್ದಾಗಿತ್ತು.[೮೫]

**ಪಟ್ಟಿ ಸಂಖ್ಯೆ ೨**

**ಶೆಡ್ಯೂಲ್ಡ್ ವಾಣಿಜ್ಯ ಬ್ಯಾಂಕುಗಳು**

**ಕೃಷಿ ಕೈಗಾರಿಕೆ ವಾಣಿಜ್ಯ ಚಟುವಟಿಕೆಗಳಿಗೆ ಒದಗಿಸಿದ ಪತ್ತಿನ ಪ್ರಮಾಣ**

**ಕೋಟಿ ರೂಪಾಯಿಗಳಲ್ಲಿ**

| ವಲಯಗಳು | ೧೯೫೧ | ೧೯೬೧ | ೧೯೮೧ | ೧೯೯೬ | ೨೦೦೭ |
|---|---|---|---|---|---|
| ಕೃಷಿ | ೨.೪೩ | ೫.೪೮ | ೩೭೮೩ | ೨೬೩೫೧ | ೭೬೯೨೫ |
| | (೫.೮) | (೦.೪೦) | (೨೦.೯) | (೩೭.೯) | (೪೨.೭) |
| ಕೈಗಾರಿಕೆ | ೭.೪೪ | ೬೬೩.೭೭ | ೯೯೮೩ | ೨೯೪೮೨ | ..... |
| | (೧೭.೭೭) | (೫೩.೫೧) | (೫೫.೧೪) | (೪೨.೩) | |
| ವಾಣಿಜ್ಯ | ೧೭.೩೬ | ೩೭೩.೨೭ | ೨೦೦೦ | ೧೩೭೫೧ | ...... |
| | (೪೧.೪೭) | (೩೦.೧೦) | (೧೧.೦೫) | (೧೯.೮) | |
| ಇತರೆ | ೧೪.೬೩ | ೧೯೬.೫೯ | ೨೩೩೭ | ೨೦.೭೪೧ | .... |
| ಒಟ್ಟು | ೪೧.೮೬ | ೧೨೩೯.೧೧ | ೧೮೧೦೩ | ೬೯೬೦೯ | |
| | (೧೦೦) | (೧೦೦) | (೧೦೦) | (೧೦೦) | |

ಆಧಾರ - ೧. ಗೌರ್ನಮೆಂಟ್ ಆಫ್ ಇಂಡಿಯಾ, ೧೯೯೯, ಡಿವಿಷನ್ ಆಫ್ ಮಿನಿಷ್ಟ್ರಿ ಆಫ್ ಇನ್‌ಫಾರ್ಮೇಶನ್ ಬ್ರಾಡ್‌ಕಾಸ್ಟಿಂಗ್, ನ್ಯೂಡೆಲ್ಲಿ, ೧೯೯೯, ಪುಟ-೨೬೩.

೨. ಆರ್.ಬಿ.ಐ. ಸ್ಟಾಟಿಸ್ಟಿಕಲ್ ಟೇಬಲ್ ರಿಲೇಟಿಂಗ್ ಟು ಬ್ಯಾಂಕು ಇನ್ ಇಂಡಿಯಾ, ೧೯೭೦, ಪುಟ-೭೮, ೧೯೮೧, ೧೯೯೫, ೨೦೦೭, ಪುಟ-೨೮.

೩. ಆರ್.ಬಿ.ಐ.-ರಿಪೋರ್ಟ್ ಆನ್ ಟ್ರೆಂಡ್ಸ್‌ಆ್ಯಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೨೦೦೬-೦೭, ೨೦೦೭-೦೮, ಪುಟ-೨೯೨

ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕರಣದ ಪೂರ್ವದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಈ ಬ್ಯಾಂಕುಗಳ ಶಾಖಾ ವಿಸ್ತರಣೆಯ ಕಾರ್ಯ ಮಂದಗತಿಯಲ್ಲಿತ್ತು. ಆದರೆ ೧೯೭೫ರ ನಂತರದಲ್ಲಿ ಗ್ರಾಮೀಣ ಪ್ರದೇಶದ ವಾಣಿಜ್ಯ ಬ್ಯಾಂಕುಗಳ ಶಾಖೆಗಳ ಪ್ರಮಾಣ ಅಧಿಕವಾಯಿತು. ಕಾರಣವೆಂದರೆ ಭಾರತ ಸರ್ಕಾರ ಸೆಪ್ಟೆಂಬರ್ ೧೯೭೫ರಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸುಗ್ರೀವಾಜ್ಞೆಯನ್ನು ಜಾರಿಗೆ ತಂದಿತು. ಇದರ ಉದ್ದೇಶವೆಂದರೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಸೇವೆಯನ್ನು ಮತ್ತು ಪತ್ತನ್ನು ಗ್ರಾಮೀಣ ಜನತೆಗೆ ಮುಟ್ಟಿಸುವ ಮಹತ್ವಾಕಾಂಕ್ಷೆಯನ್ನು ಈ ಸುಗ್ರಿವಾಜ್ಞೆ ಹೊಂದಿತ್ತು. ಅದೇ ಸಂದರ್ಭದಲ್ಲಿ ಆರ್.ಬಿ.ಐ. ಶಾಖೆಗಳನ್ನು ತೆರೆಯುವ ರಾಜ್ ಕಮಿಟಿ[೮] ಶಿಫಾರಸ್ಸುಗಳನ್ನು ಒಪ್ಪಿಕೊಂಡಿತು. ಈ ಸಮಿತಿಯ ಶಿಫಾರಸ್ಸಿನಂತೆ ೪=೧-೧[೮] ಪ್ರಮಾಣದಲ್ಲಿ ಎಂದರೆ ನಾಲ್ಕು ಶಾಖೆಗಳನ್ನು ಗ್ರಾಮೀಣ ಪ್ರದೇಶದಲ್ಲಿ ಆರಂಭಿಸಿದರೆ ತಲಾ ಒಂದೊಂದು ಶಾಖೆಗಳನ್ನು ಅರೆಪಟ್ಟಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ಶಾಖೆಗಳನ್ನು ತೆರೆಯಲಿಕ್ಕೆ ಅನುಮತಿ ನೀಡುವ ನೀತಿಯನ್ನು ರಿಸರ್ವ್‌ಬ್ಯಾಂಕು ಜಾರಿಗೆ ತಂದಿತು. ಇದೇ ನೀತಿಯನ್ನು ಎಲ್ಲಾ ಸಾರ್ವಜನಿಕ ಬ್ಯಾಂಕುಗಳ ಮೇಲೆ ಶಾಖೆ ವಿಸ್ತರಣೆಯನ್ನು ಅನುಸರಿಸಬೇಕೆಂದಿತು. ಇದರಿಂದಾಗಿ ೧೯೬೯ರ ಜೂನ್ ವೇಳೆಗೆ ೮೨೬೨ ಶಾಖೆಗಳಲ್ಲಿ ೧೮೩೨ ಶಾಖೆಗಳನ್ನು ಗ್ರಾಮೀಣ ಪ್ರದೇಶದಲ್ಲಿ ಪ್ರಾರಂಭಿಸಲಾಯಿತು. ಹಾಗೆಯೇ ಫೆಬ್ರವರಿ ೧೯೯೯ರ ವೇಳೆಗೆ ೬೪,೯೮೦ ಶಾಖೆಗಳಲ್ಲಿ ೩೨,೮೩೦ ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಹಾಗೆಯೇ ೨೦೦೭ ಜೂನ್ ಕೊನೆಯ ಹೊತ್ತಿಗೆ ೭೧,೭೮೧ ಶಾಖೆಗಳಲ್ಲಿ ೩೦,೬೩೩ ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಿದ್ದವು. ಆದರೆ ಗ್ರಾಮೀಣ ಶಾಖೆಗಳ ಪ್ರತಿಶತ ೪೨.೭ ಪ್ರಮಾಣವು ಇಳಿಮುಖವಾಗಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು.

**ಪಟ್ಟಿ ಸಂಖ್ಯೆ ೩**

೧೯೫೧ ರಿಂದ ೨೦೦೭ರವರೆಗಿನ ಗ್ರಾಮೀಣ ಪ್ರದೇಶದಲ್ಲಿನ ವಾಣಿಜ್ಯ ಬ್ಯಾಂಕುಗಳ ಶಾಖೆಗಳು

| ವರ್ಷಗಳು | ಶಾಖೆಗಳ ಸಂಖ್ಯೆ | ಮೊದಲಿಗಿಂತ ಹೆಚ್ಚಾಗಿರುವ ಶಾಖೆಗಳ ಸಂಖ್ಯೆ | | ಗ್ರಾಮೀಣ ಪ್ರದೇಶಗಳಲ್ಲಿನ ಶಾಖೆಗಳ ಪ್ರತಿಶತ ಪ್ರಮಾಣ |
|---|---|---|---|---|
| | | ಒಟ್ಟು | ಗ್ರಾಮ ಪ್ರದೇಶಗಳಲ್ಲಿ | |
| ೧೯೫೧ | ೨೬೪೭ | ..... | ... | ..... |
| ೧೯೬೯ | ೮೨೬೨ | .... | ೧೮೩೨ | ೨೨.೪ |
| ೧೯೯೯ | ೬೪,೯೮೦ | ೨೬೧೩ | ೩೨,೮೩೦ | ೫೧ |
| ೨೦೦೪ | ೬೬,೬೪೦ | ೧೬೬೦ | ೩೨,೨೭೦ | ೪೮ |
| ೨೦೦೭ | ೭೧,೭೮೧ | ೫೧೪೧ | ೩೦,೬೩೩ | ೪೨.೭ |
| ೨೦೦೮ | ೭೬,೫೧೮ | ೪೮೦೦ | ೩೧,೧೨೭ | ೪೦.೭ |

**ಆಧಾರ** - ಆರ್.ಬಿ.ಐ. ರಿಪೋರ್ಟ್ ಆನ್ ಟ್ರೆಂಡ್ಸ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೧೯೮೦, ೧೯೯೯, ೨೦೦೦-೨೦೦೭, ಪುಟ-೩೬೨, ಪುಟ-೧೦೧, (ಪುಟ-೮೪-೮೫) (ಪುಟ-೯೯) ಎಕಾನಮಿಕ ಸರ್ವೆ, ೧೯೯೯-೨೦೦೦

ಪಟ್ಟಿ ಸಂಖ್ಯೆ ನಾಲ್ಕರಲ್ಲಿ ಗ್ರಾಮೀಣ, ಅರೆಪಟ್ಟಣ ಮತ್ತು ಮಹಾನಗರ ಪ್ರದೇಶಗಳಲ್ಲಿ ೧೯೬೯ ರಿಂದ ೨೦೦೩ರ ವೇಳೆಗೆ ಆರಂಭಿಸಿದ ವಾಣಿಜ್ಯ ಬ್ಯಾಂಕಿನ ಶಾಖೆಗಳನ್ನು ಕೊಡಲಾಗಿದೆ. ೧೯೬೯ ರಿಂದ ೧೯೯೫ರವರೆಗೆ ಗ್ರಾಮೀಣ ಪ್ರದೇಶದಲ್ಲಿ ತೆರೆದಂತಹ ಶಾಖೆಗಳ ಪ್ರಮಾಣ ಹೆಚ್ಚಾಗುತ್ತಾ ಬಂದಿರುತ್ತದೆ. ಆದರೆ ೨೦೦೭ನೇ ಇಸ್ವಿಯ ಹೊತ್ತಿಗೆ ಗ್ರಾಮೀಣ ಶಾಖೆಗಳ ಪ್ರಮಾಣ ಇಳಿಮುಖವಾಗಿರುವುದನ್ನು ಕಾಣಬಹುದು. ಅದೇ ರೀತಿ ಪಟ್ಟಣ ಮತ್ತು ಅರೆಪಟ್ಟಣ ಪ್ರದೇಶಗಳಲ್ಲಿ ಸ್ಥಾಪಿಸಿದ ಶಾಖೆಗಳ ಪ್ರಮಾಣ ಅಧಿಕವಾಗಿರುವುದನ್ನು ಕಾಣಬಹುದು.

**ಪಟ್ಟಿ ಸಂಖ್ಯೆ ೪**

**ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳ ೧೯೬೯ ರಿಂದ ೨೦೦೭ರವರೆಗೆ**

**ವಿವಿಧ ಪ್ರದೇಶದಲ್ಲಿ ತೆರೆದ ಶಾಖೆಗಳು**

| ಪ್ರದೇಶಗಳು | ೧೯೬೯ | ೧೯೮೫ | ೧೯೯೮ | ೨೦೦೫ | ೨೦೦೫ ಜೂನ್ |
|---|---|---|---|---|---|
| ಗ್ರಾಮೀಣ | ೧೮೩೩ | ೨೮,೭೮೨ | ೩೨,೯೧೮ | ೩೨,೦೯೫ | ೩೧,೧೨೭ |
| | (೨೨.೪) | (೫೭.೫) | (೪೯.೭) | (೪೬.೯೬) | (೪೦.೭) |
| ಅರೆಪಟ್ಟಣ | ೩೩೪೨ | ೧೦,೪೬೦ | ೧೪,೧೭೮ | ೧೫,೩೯೬ | ೧೭,೮೫೮ |
| | (೪೦.೧) | (೧೯.೫) | (೨೧.೪) | (೨೨.೫೨) | (೨೩.೩) |
| ಪಟ್ಟಣ | ೧೫೮೪ | ೭೫೪೨ | ೧೦,೪೩೬ | ೧೧,೫೦೪ | ೧೪,೪೯೭ |
| | (೧೭.೫) | (೧೨.೫) | (೧೫.೭) | (೧೬.೮೩) | (೧೮.೯) |
| ಮಹಾನಗರ ಪಾಲಿಕೆ | ೧೫೦೩ | ೫೧೯೪ | ೮,೬೦೫ | ೯೩೪೪ | ೧೩,೦೩೬ |
| | (೨೦) | (೧೦.೫) | (೧೩) | (೧೩.೬೭) | (೧೭.೦) |
| ಒಟ್ಟು | ೮೨೬೨ | ೫೧,೯೨೬ | ೬೬,೧೩೭ | ೬೮,೩೩೯ | ೭೬,೫೧೮ |
| | (೧೦೦) | (೧೦೦) | (೧೦೦) | (೧೦೦) | (೧೦೦) |

**ಆಧಾರ** - ಆರ್.ಬಿ.ಐ. ಬ್ಯಾಂಕಿಂಗ್ ಸ್ಟ್ಯಾಟಸ್ಟಿಕ್ಸ್ ವ್ಯಾಲ್ಯೂಂ-೨೭ ಮಾರ್ಚ್ ೯೮, ಬಾಂಬೆ, ಪುಟ-೧. ಆರ್.ಬಿ.ಐ. ರಿಪೋರ್ಟ್ ಆನ್ ಕರೆನ್ಸಿ ಅಂಡ್ ಫೈನಾನ್ಸ್ ೧೯೯೦-೯೧, ವ್ಯಾಲೂಂ-೨, ಪುಟ-೬೨ ಆರ್.ಬಿ.ಐ. ರಿಪೋರ್ಟ್ ಆನ್ ಟ್ರೆಂಡ್ಸ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೨೦೦೬-೦೭, ಪುಟ-೩೬೨, ೨೦೦೭-೦೮

ಮಹಾನಗರ ಪಾಲಿಕೆ ಪ್ರದೇಶದಲ್ಲಿ ಆರಂಭದಲ್ಲಿ ಹೆಚ್ಚಾಗಿ ನಂತರ ಇಳಿಮುಖವಾಗಿ ೨೦೦೭ರ ಜೂನ್ ಹೊತ್ತಿಗೆ ಪುನಃ ಅಧಿಕವಾಗಿರುವುದನ್ನು ಕಾಣಬಹುದು. ಒಟ್ಟಾರೆ ಗ್ರಾಮೀಣ ಪ್ರದೇಶದಲ್ಲಿನ ಶಾಖೆಯ ಪ್ರಮಾಣವು ಅಧಿಕವಾಗಿರುವುದಕ್ಕೆ ಭಾರತ ಸರ್ಕಾರ, ಆರ್.ಬಿ.ಐ. ಮತ್ತು ವಾಣಿಜ್ಯ ಬ್ಯಾಂಕುಗಳ ಸತತ ಪ್ರಯತ್ನದ ಫಲವಾಗಿದೆ ಎಂದು ಹೇಳಬಹುದು.

### ೨.೮. ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಪತ್ತು

ವಾಣಿಜ್ಯ ಬ್ಯಾಂಕುಗಳು ೨೦ನೇ ಶತಮಾನದ ಆರಂಭದಲ್ಲಿ ಅರೆಪಟ್ಟಣ ಪ್ರದೇಶಗಳಲ್ಲಿ ಶಾಖೆಗಳನ್ನು ತೆರೆದು ಠೇವು ಮತ್ತು ಪತ್ತನ್ನು ಒದಗಿಸುತ್ತಾ ಬಂದವು. ಇವುಗಳ ಮುಖ್ಯ ಉದ್ದೇಶವೆಂದರೆ ತಮ್ಮ ಬ್ಯಾಂಕುಗಳ ಲಾಭದ ಪ್ರಮಾಣವನ್ನು ಹೆಚ್ಚಿಸುವುದಾಗಿತ್ತು. ಲಾಭದ ಪ್ರಮಾಣ ಹೆಚ್ಚಿಸುವುದಕ್ಕಾಗಿ ಬ್ಯಾಂಕುಗಳು ಬೃಹತ್ ಉದ್ದಿಮೆದಾರರಿಗೆ, ಬಲಶಾಲಿಯಾದ ವ್ಯಾಪಾರಸ್ಥರಿಗೆ ಪತ್ತನ್ನು ಒದಗಿಸುತ್ತಾ ಬಂದವು. ಈ ಬ್ಯಾಂಕುಗಳಿಗೆ ಗ್ರಾಮೀಣ ಪ್ರದೇಶವು ತಮ್ಮ ಲಾಭಕ್ಕೆ ಆಕರ್ಷಣೆಯಿಲ್ಲದ ಪ್ರದೇಶವೆಂದು ನಿರ್ಧರಿಸಿದವು. ಈ ರೀತಿ ಪಟ್ಟಣ ಆಧಾರಿತ ವಿಚಾರ ಬ್ಯಾಂಕರರ ಮನಸ್ಸಿನಲ್ಲಿ ಬೆಳೆಯುತ್ತಾ ಬಂದ ಪ್ರಯುಕ್ತ ರಾಷ್ಟ್ರದಲ್ಲಿ ಗ್ರಾಮೀಣ ಪತ್ತಿನ ಸಮಸ್ಯೆ ಉದ್ಭವವಾಯಿತು. ಇದರಿಂದ ಗ್ರಾಮೀಣ ಭಾಗದ ಜನಪದರು ಬ್ಯಾಂಕ್ ಸೇವೆಯಿಂದ ವಂಚಿತರಾದರು. ಇದಕ್ಕೆ ಆ ಭಾಗದ ಜನಪದರಿಗೆ ಪರ್ಯಾಯ ಪತ್ತನ್ನು ಖಾಸಗಿ ವಲಯದ ಸಂಸ್ಥೆಗಳಾದ ಸಾಹುಕಾರರು, ಜಮೀನ್ದಾರರು, ವ್ಯಾಪಾರಸ್ಥರು, ಕಮಿಷನ್ ಏಜೆಂಟರುಗಳು, ದಲ್ಲಾಳಿಗಳು, ಸ್ನೇಹಿತರು, ಬಂಧುಗಳು ಇನ್ನೂ ಮುಂತಾದವರು ಒದಗಿಸುತ್ತಾ ಬಂದರು.

೧೯೫೦ರ ಗ್ರಾಮೀಣ ಬ್ಯಾಂಕ್ ವಿಚಾರಣಾ ಸಮಿತಿ ವರದಿ ಪ್ರಕಾರ ಒಟ್ಟಾರೆ ಗ್ರಾಮೀಣ ಜನಪದರ ಪತ್ತಿನ ಬೇಡಿಕೆಯನ್ನು ಖಾಸಗಿ ಪ್ರತಿನಿಧಿಗಳಾದ ಸಾಲ ಕೊಡುವ ಸಾಹುಕಾರರು ಒದಗಿಸುತ್ತಿದ್ದರು. ಈ ಪ್ರಮಾಣವನ್ನು ಕಡಿಮೆ ಮಾಡಬೇಕಾದರೆ ಪರ್ಯಾಯ ಹಣಕಾಸಿನ ಸಂಸ್ಥೆಯನ್ನು ಅದರಲ್ಲೂ ಗ್ರಾಮೀಣ ಭಾಗದ ಕೃಷಿಕರಿಗೆ ಅಧಿಕ ಪತ್ತನ್ನು ಒದಗಿಸಲು ಪರ್ಯಾಯ ಹಣಕಾಸಿನ ಸಂಸ್ಥೆಯ ಅವಶ್ಯಕತೆ ಇರುವುದನ್ನು ಸಮಿತಿ ಸರ್ಕಾರಕ್ಕೆ ಮನವರಿಕೆ ಮಾಡಿಕೊಟ್ಟಿತು. ಈ ಸಮಸ್ಯೆ ನಿವಾರಣೆಗೆ "ಬ್ಯಾಂಕಿಂಗ್ ವಿಚಾರಣ ಸಮಿತಿ", ಚಲಿಸುವ ಬ್ಯಾಂಕನ್ನು'[೮೮] (Mobile Banks) ಗ್ರಾಮೀಣ ಪ್ರದೇಶದಲ್ಲಿ ತೆರೆಯುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿತ್ತು. ಈ ಶಿಫಾರಸ್ಸಿನ ಪ್ರಕಾರ ಭಾರತ ಸರ್ಕಾರವಾಗಲಿ, ಭಾರತದ ರಿಸರ್ವ ಬ್ಯಾಂಕ್ ಆಗಲಿ ಚಲಿಸುವ ಬ್ಯಾಂಕನ್ನು ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿಸಿ ಗ್ರಾಮೀಣ ಜನಪದರ ಪತ್ತಿನ ಬೇಡಿಕೆಯನ್ನು ಈಡೇರಿಸುವಂತಹ ಪ್ರಯತ್ನ ಮಾಡಲಿಲ್ಲ.

ಸಾಲ ನೀಡುವ ವೃತ್ತಿಯಲ್ಲಿ ನಿರತರಾಗಿರುವ ಜಮೀನ್ದಾರರು, ವ್ಯಾಪಾರಿಗಳು ಕಮಿಷನ್ ಏಜೆಂಟರುಗಳು ಗ್ರಾಮೀಣ ಜನಪದರ ಮತ್ತು ಕೃಷಿ ಮಾರುಕಟ್ಟೆಗಳ ನಡುವಿನ ಮಧ್ಯವರ್ತಿಗಳಾಗಿ ಕೆಲಸ ನಿರ್ವಹಿಸುತ್ತಿದ್ದರು. ಖಾಸಗಿ ಮಧ್ಯವರ್ತಿಗಳು ಮತ್ತು ಏಜೆಂಟರುಗಳು ಗ್ರಾಮೀಣ ರೈತರಿಗೆ ಕೃಷಿ ಚಟುವಟಿಕೆಗಳ ಆರಂಭದಿಂದ ಸುಗ್ಗಿಯ ಕಾಲದವರೆಗೆ ಸಾಲ ಒದಗಿಸುತ್ತಿದ್ದರು. ಸುಗ್ಗಿಯ ಕಾಲದಲ್ಲಿ ಅವರಿಂದ ಮಾರುಕಟ್ಟೆ ಬೆಲೆಗಿಂತ ಕಡಿಮೆ ಬೆಲೆಗೆ ಕೃಷಿಕರ ಸರಕನ್ನು ಖರೀದಿಸುತ್ತಿದ್ದರು. ಕೃಷಿ ಹುಟ್ಟುವಳಿಯಿಂದ ಬಂದಂತಹ ಒಟ್ಟು ಆದಾಯದಲ್ಲಿ ಈ ಖಾಸಗಿ ಸಂಸ್ಥೆಗಳು ನೀಡಿದಂತಹ ಸಾಲ ಮತ್ತು ಬಡ್ಡಿಯನ್ನು ಕಡಿತ ಮಾಡಿ, ಹಣ ಉಳಿದರೆ ಮಾತ್ರ ರೈತರಿಗೆ ನೀಡುತ್ತಿದ್ದರು. ಉಳಿಯದಿದ್ದರೆ ಸಾಲದ ರಖಂ ಅನ್ನು ಮುಂದಿನ ವರ್ಷಕ್ಕೆ ಮಂದೂಡುವಂತಹ ಪರಿಪಾಠವನ್ನು ಹಾಕಿಕೊಂಡಿದ್ದರು. ಈ

ರೀತಿಯ ಪತ್ತಿನ ಕ್ರಿಯೆಯಿಂದ ಖಾಸಗಿ ಸಂಸ್ಥೆಗಳು ರೈತರನ್ನು ಶೋಷಿಸುತ್ತಿದ್ದವು. ಹಾಗೆಯೇ ಅತ್ಯಧಿಕ ಬಡ್ಡಿಯನ್ನು ರೈತರ ಪತ್ತಿನ ಮೇಲೆ ವಿಧಿಸುತ್ತಿದ್ದರು. ೧೯೩೧ರಲ್ಲಿ ಅಸ್ತಿತ್ವದಲ್ಲಿದ್ದ "ಜಾಯಿಂಟ ಸ್ಟಾಕ್ ಬ್ಯಾಂಕು', 'ಇಂಪೀರಿಯಲ್ ಬ್ಯಾಂಕ್' ಗ್ರಾಮೀಣ ಕೃಷಿಕರಿಗೆ ಅತ್ಯಲ್ಪ ಪ್ರಮಾಣದಲ್ಲಿ ಪತ್ತನ್ನು ಒದಗಿಸಿದ್ದವು ಎಂದು ಕೇಂದ್ರ ಬ್ಯಾಂಕು ವಿಚಾರಣಾ ಸಮಿತಿ ಅಭಿಪ್ರಾಯಪಟ್ಟಿತು. ಈ ಬ್ಯಾಂಕುಗಳು ಕೃಷಿಕರಿಗೆ ನೇರವಾಗಿ ಸಾಲವನ್ನೊದಗಿಸದೇ, ವ್ಯಾಪಾರಿಗಳಿಗೆ ಸಾಲವನ್ನು ಕೊಡುತ್ತಿದ್ದವು. ಇದರಿಂದಾಗಿ ಗ್ರಾಮೀಣ ಪತ್ತಿನ ಸಮಸ್ಯೆ ಉಲ್ಬಣಿಸಿದವು.[೯] ಗ್ರಾಮೀಣ ಬ್ಯಾಂಕುಗಳ ವಿಚಾರಣ ಸಮಿತಿ (೧೯೫೦) ವರದಿಯಲ್ಲಿ ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಪತ್ತನ್ನು ಜನಪದರಿಗೆ ವಿಸ್ತರಿಸುವಲ್ಲಿ ಯಾವುದೇ ಪ್ರಮುಖ ಪಾತ್ರ ನಿರ್ವಹಿಸುತ್ತಿಲ್ಲ. ಅವುಗಳ ವಿಸ್ತರಣೆಯಿಂದ ಗ್ರಾಮೀಣ ಪ್ರದೇಶದ ಠೇವಣಿಯನ್ನು ಪಟ್ಟಣ ಪ್ರದೇಶದ ಹೂಡಿಕೆಗೆ ವರ್ಗಾಹಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ಆದಕಾರಣ ವಾಣಿಜ್ಯ ಬ್ಯಾಂಕುಗಳು ಕೃಷಿ ಚಟುವಟಿಕೆಗಳಿಗೆ ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲವನ್ನಾಗಲಿ ನೀಡಲಿಲ್ಲ. ಬದಲಾಗಿ ಕೃಷಿ ಚಟುವಟಿಕೆಗಳಿಗೆ ಬೇಕಾದಂತಹ ಸಾಲವನ್ನು ಕೃಷಿ ಉತ್ಪನ್ನ ಸಮಿತಿ ವತಿಯಿಂದ ನೇರವಾಗಿ ಇಲ್ಲವೆ ಪರೋಕ್ಷವಾಗಿ ವ್ಯಾಪಾರಿಗಳಿಂದ ಒದಗಿಸುತ್ತಾ[೧೦] ಬಂದವು. ಗ್ರಾಮೀಣ ಪತ್ತನ್ನು ಕುರಿತು ಭಾರತದ ರಿಸರ್ವ್ ಬ್ಯಾಂಕು, ಸಹಕಾರಿ ಕ್ಷೇತ್ರದ ಧುರೀಣರನ್ನು, ಆರ್ಥಿಕ ತಜ್ಞರನ್ನು, ರಾಜ್ಯ ಸಹಕಾರಿ ಸಂಘಗಳ ರಿಜಿಸ್ಟ್ರಾರ್‌ಗಳ ಸಮ್ಮೇಳವನ್ನು ನಡೆಯಿಸಿತು.[೧೧]

ಸಮ್ಮೇಳನವು ಗ್ರಾಮೀಣ ಪತ್ತಿನ ಸಮೀಕ್ಷೆ ನಡೆಸುವಂತೆ ರಿಸರ್ವ್ ಬ್ಯಾಂಕ್‌ಗೆ ಶಿಫಾರಸ್ಸು ಮಾಡಿತು. ಬ್ಯಾಂಕು ಈ ಸಮಿತಿಯ ಶಿಫಾರಸ್ಸುಗಳನ್ನು ಅಂಗೀಕರಿಸಿ ಅಖಿಲ ಭಾರತ ಗ್ರಾಮೀಣ ಪತ್ತಿನ ಸಮಿತಿಯನ್ನು ಎ.ಡಿ. ಗೊರ್‌ವಾಲರ ಅಧ್ಯಕ್ಷತೆಯಲ್ಲಿ ೧೯೫೧ರ ಆಗಸ್ಟ್‌ನಲ್ಲಿ ನೇಮಿಸಿತು. ಸಮಿತಿ ಗ್ರಾಮೀಣ ಪತ್ತಿನ ಸಮಸ್ಯೆಗಳನ್ನು ಕೂಲಂಕುಶವಾಗಿ ಅಧ್ಯಯನ ನಡೆಯಿಸಿ ತನ್ನ ವರದಿಯನ್ನು ೧೯೫೪ರಲ್ಲಿ ಸಲ್ಲಿಸಿತು. ವರದಿಯ ಶಿಫಾರಸ್ಸುಗಳೆಂದರೆ,

೧. ಸಹಕಾರಿ ಪತ್ತಿನ ಸಂಸ್ಥೆಗಳನ್ನು ಪುನಃರಚಿಸಿ, ಪತ್ತನ್ನು ಉತ್ಪಾದನೆ ಮತ್ತು ಮಾರುಕಟ್ಟೆ ಚಟುವಟಿಕೆಗಳ ನಡುವೆ ಸಮನ್ವಯ ಸಾಧಿಸುವುದು.

೨. ಭಾರತದ ಇಂಪೀರಿಯಲ್ ಬ್ಯಾಂಕನ್ನು ಭಾರತದ ಸ್ಟೇಟ್ ಬ್ಯಾಂಕನ್ನಾಗಿ ಪರಿವರ್ತಿಸಿ ಗ್ರಾಮೀಣ ಪತ್ತಿನ ಪದ್ಧತಿಯನ್ನು ಪುನರ್ ರಚಿಸುವುದು.

೩. ರಾಷ್ಟ್ರೀಯ ಕೃಷಿ ಪತ್ತಿನ ನಿಧಿಯನ್ನು ಸ್ಥಾಪಿಸುವುದು ಮತ್ತು ರಾಷ್ಟ್ರೀಯ ಪತ್ತಿನ ಸ್ಥಿರತೆಯನ್ನು ಸ್ಥಾಪಿಸಿ ಸಹಕಾರಿ ಹಣಕಾಸಿನ ಸಂಸ್ಥೆಗಳ ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸುವುದು.

೪. ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ಮತ್ತು ಸಂಗ್ರಹಣ ಮಂಡಳಿಯನ್ನು ರಚಿಸುವುದು. ಭಾರತೀಯ ರಿಸರ್ವ್ ಬ್ಯಾಂಕು ಈ ಶಿಫಾರಸ್ಸುಗಳನ್ನು ಅಂಗೀಕರಿಸಿ ಕ್ರಮಕ್ಕೈಗೊಂಡಿತು.

ಸಮೀಕ್ಷಾ ಸಮಿತಿ ತನ್ನ ವರದಿಯಲ್ಲಿ ಸಾಂಸ್ಥಿಕ ಪತ್ತನ್ನು ನೀಡುವಂತಹ ಸಂಸ್ಥೆಗಳಿಂದ ಸರಕಾರ, ಸಹಕಾರ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು ೧೯೫೧-೫೨ರಲ್ಲಿ ಕೇವಲ ಪ್ರತಿಶತ ೭.೧ರಷ್ಟು ಪತ್ತನ್ನು ಗ್ರಾಮೀಣ ಜನಪದರಿಗೆ ಒದಗಿಸಿದ್ದವು, ಆದರೆ ಸಾಂಸ್ಥಿಕೇತರ ಪತ್ತಿನ ಸಂಸ್ಥೆಗಳಾದ ವೃತ್ತಿನಿರತ ಮತ್ತು ಕೃಷಿ ಹಣಕಾಸಿನ ಲೇವಾದೇವಿಗಾರರು ಸಂಬಂಧಿಗಳು ಸ್ನೇಹಿತರು, ವ್ಯಾಪಾರಿಗಳು, ಶ್ರೀಮಂತ ರೈತರು, ಕಮಿಷನ್ ಏಜೆಂಟ್ಸ್ ಇನ್ನು ಮುಂತಾದವರು ಪ್ರತಿಶತ ೯೨.೯ರಷ್ಟು ಪತ್ತನ್ನು ಗ್ರಾಮೀಣ ಜನಪದರಿಗೆ ನೀಡಿದೆ ಎಂದು ವರದಿ ತಿಳಿಸಿದೆ.

ಅಖಿಲ ಭಾರತ ಗ್ರಾಮೀಣ ಸಾಲ ಮತ್ತು ಹೂಟೆಯ ಸಮೀಕ್ಷೆ ತನ್ನ ವರದಿಯಲ್ಲಿ ಈ ಎರಡು ಸಂಸ್ಥೆಗಳಿಂದ ಗ್ರಾಮೀಣ ಪತ್ತಿನ ಪಾಲು ೧೯೬೧-೬೨ರವರೆಗೆ ಅನುಕ್ರಮವಾಗಿ ಪ್ರತಿಶತ ೧೬.೮ ಮತ್ತು ೮೩.೨ ರಷ್ಟು ಇತ್ತೆಂದು ವರದಿ ಮಾಡಿದೆ. ಇನ್ನೂ ಮುಂದುವರೆದು ಹೇಳುತ್ತಾ ೧೯೭೧-೭೨ರ ಅಖಿಲ ಭಾರತ ಸಾಲ ಮತ್ತು ಹೂಟೆ ಸಮೀಕ್ಷಾ ವರದಿಯಲ್ಲಿ ಈ ಎರಡು ಸಂಸ್ಥೆಗಳ ಗ್ರಾಮೀಣ ಪತ್ತಿನ ಪಾಲು ಅನುಕ್ರಮವಾಗಿ ಪ್ರತಿಶತ ೨೯ ಮತ್ತು ಪ್ರತಿಶತ ೭೧ರಷ್ಟು ಇತ್ತೆಂದು ಸಮೀಕ್ಷಾ ವರದಿಗಳು ಅಭಿಪ್ರಾಯಪಟ್ಟಿವೆ. ಈ ಸಮೀಕ್ಷಾ ವರದಿಗಳು[3] ಗ್ರಾಮೀಣ ಜನಪದರಿಗೆ ಒದಗಿಸಿದ ಸಾಂಸ್ಥಿಕ ಪತ್ತಿನ ಪ್ರಮಾಣ ಸಾಂಸ್ಥಿಕೇತರ ಪತ್ತಿಗೆ ಹೋಲಿಸಿದಲ್ಲಿ ಬಹಳಷ್ಟು ಕನಿಷ್ಟ ಪ್ರಮಾಣದ್ದಾಗಿತ್ತು ಎಂದು ಅಂಕಿ-ಅಂಶಗಳು ತಿಳಿಸುತ್ತವೆ.

### ೨.೯. ಸಾಮಾಜಿಕ ನಿಯಂತ್ರಣ ಮತ್ತು ವಾಣಿಜ್ಯ ಬ್ಯಾಂಕಿನ ರಾಷ್ಟ್ರೀಕರಣ

ವಾಣಿಜ್ಯ ಬ್ಯಾಂಕುಗಳ ಒಡೆತನ ಮತ್ತು ನಿಯಂತ್ರಣವು ದೊಡ್ಡ ಉದ್ದಿಮೆಗಳ ಮತ್ತು ವ್ಯಾಪಾರಿಗಳ ಒಡೆತನದಲ್ಲಿದ್ದವು. ಇದರಿಂದಾಗಿ ಸಾರ್ವಜನಿಕ ಠೇವಣಿಯು ದುರುಪಯೋಗವಾಯಿತು. ಕೃಷಿ ಮತ್ತು ಸಣ್ಣ ಕೈಗಾರಿಕಾ ವಲಯಗಳಿಗೆ ಬ್ಯಾಂಕಿನ ಆಡಳಿತ ಮಂಡಳಿ ಯಾವುದೇ ಗಮನ ನೀಡಲಿಲ್ಲ.

೧೯೫೧-೬೧ರ ಎರಡನೇ ಪಂಚವಾರ್ಷಿಕ ಯೋಜನೆಯು ಕೆಲವು ಪ್ರಮುಖ ಉದ್ದೇಶಗಳನ್ನು ಹೊಂದಿತ್ತು. ಅವುಗಳಲ್ಲಿ ಸಮಾಜವಾದ ಸಮಾಜ ಸ್ಥಾಪನೆ. ಆದಾಯ ಮತ್ತು ಸಂಪತ್ತಿನ ಸಮನಾದ ಹಂಚಿಕೆ, ಸಾಮಾಜಿಕ ನ್ಯಾಯದೊಂದಿಗೆ ಆರ್ಥಿಕಾಭಿವೃದ್ಧಿ ಇತ್ಯಾದಿಗಳಾಗಿದ್ದವು. ಈ ಉದ್ದೇಶಗಳ ಈಡೇರಿಕೆಗೆ ಬ್ಯಾಂಕಿಂಗ್ ವಲಯದಲ್ಲಿ ಬದಲಾವಣೆ ತರುವುದು ಅವಶ್ಯವೆನಿಸಿತು. ಇವುಗಳ ಜೊತೆಗೆ ಜಿಲ್ಲಾ ತೀಕ್ಷ್ಣ ಕೃಷಿ ಅಭಿವೃದ್ಧಿ ಕಾರ್ಯಕ್ರಮ(IADP)ವನ್ನು ೧೯೬೦-೬೧ರಲ್ಲಿ ದೇಶದ ಆಯ್ದ ಏಳು ಜಿಲ್ಲೆಗಳಲ್ಲಿ ಅಳವಡಿಸಿಕೊಳ್ಳಲಾಯಿತು. ತರುವಾಯ ದೇಶದಾದ್ಯಂತ ಉಳಿದ ಜಿಲ್ಲೆಗಳಿಗೆ ಯೋಜನೆಯನ್ನು ವಿಸ್ತರಿಸಲಾಯಿತು. ಈ ಯೋಜನೆಯಡಿ ಅಧಿಕ ಭೂಮಿಯನ್ನು ಹೆಚ್ಚುವರಿ ಇಳುವರಿ ನೀಡುವ ಮಿಶ್ರತಳಿ ವ್ಯಾಪ್ತಿಗೆ ತಂದು ಕೃಷಿ ಹುಟ್ಟುವಳಿಯನ್ನು ಹೆಚ್ಚಿಸುವ ಪ್ರಯತ್ನ ಮಾಡಲಾಯಿತು. ಈ ಎಲ್ಲಾ ಉದ್ದೇಶಗಳಿಂದ ಕೃಷಿ ವಲಯದಲ್ಲಿ ಹಸಿರು ಕ್ರಾಂತಿ ತಂತ್ರ ಪ್ರಸ್ತಾಪವಾಯಿತು. ಸರ್ಕಾರದಿಂದ ಉತ್ತಮ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಒದಗಿಸುವ ನಿರ್ಧಾರ ಹೊರಬಿದ್ದಿತು. ಈ ಎಲ್ಲಾ

ಅವಕಾಶಗಳನ್ನು ಬಡಕೃಷಿಕರಿಗೆ ಮುಟ್ಟಿಸುವಂತಹ ಕಾರ್ಯ ಚಟುವಟಿಕೆಗಳ ಬಗ್ಗೆ ಸರ್ಕಾರ ಚಿಂತಿಸಿತು. ಕೃಷಿ ವಲಯದಲ್ಲಿ ಕೊಳವೆ ಬಾವಿ ನಿರ್ಮಿಸುವುದು, ಗೊಬ್ಬರ, ಬೀಜ ಒದಗಿಸುವುದು ಅತ್ಯಾವಶ್ಯಕವೆನಿಸಿತು. ಈ ಎಲ್ಲಾ ಕಾರಣಗಳಿಂದಾಗಿ ದೇಶದಾದ್ಯಂತ ಸಾಂಸ್ಥಿಕ ಪತ್ತಿನ ಬೇಡಿಕೆ ಅಧಿಕವಾಗತೊಡಗಿದೆ. ಈ ಹಿನ್ನೆಲೆಯಲ್ಲಿ ಹೆಚ್ಚು ಬ್ಯಾಂಕು ಶಾಖೆಗಳನ್ನು ಮತ್ತು ಗ್ರಾಮೀಣ ಪತ್ತನ್ನು ಹೆಚ್ಚಿಸುವ ಬಗ್ಗೆ ಚಿಂತನೆ ನಡೆಯಿತು. ಏಕೆಂದರೆ ಕೃಷಿ ಮತ್ತು ಕೃಷಿ ಅವಲಂಬಿತ ಚಟುವಟಿಕೆಗಳಲ್ಲಿ ಸಣ್ಣ ಉದ್ಯಮದಲ್ಲಿ ನಿರತರಾಗಿರುವ ಜನರನ್ನು ಸಾಂಸ್ಥಿಕ ವಲಯ ಕಡೆಗಣಿಸಿತ್ತು. ಸರ್ಕಾರ ಈ ನಿಟ್ಟಿನಲ್ಲಿ ವಿಚಾರ ಮಾಡಿ ಖಾಸಗಿ ಒಡೆತನದಲ್ಲಿರುವ ಬ್ಯಾಂಕುಗಳು ಸಮರ್ಪಕವಾಗಿ ಪತ್ತನ್ನು ಈ ಕ್ಷೇತ್ರಗಳಿಗೆ ಹಂಚುವುದು ಸಾಧ್ಯವಿಲ್ಲ ಎನ್ನುವ ತೀರ್ಮಾನಕ್ಕೆ ಬಂದವು. ಈ ಹಿನ್ನೆಲೆಯಲ್ಲಿ ಸರ್ಕಾರ ೧೪ ಡಿಸೆಂಬರ್ ೧೯೬೭ ರಂದು 'ಸಾಮಾಜಿಕ ನಿಯಂತ್ರಣ' ನೀತಿಯನ್ನು 'ವಾಣಿಜ್ಯ ಬ್ಯಾಂಕುಗಳ' ಮೇಲೆ ಹೇರಿತು.

ವಾಣಿಜ್ಯ ಬ್ಯಾಂಕುಗಳನ್ನು ಸಾಮಾಜಿಕ ನಿಯಂತ್ರಣಕ್ಕೆ ಒಳಪಡಿಸಿದ ಮೇಲೆ ಬ್ಯಾಂಕುಗಳ ಸಾಲ ನೀಡುವ ನೀತಿಯನ್ನು 'ರಾಷ್ಟ್ರೀಯ ಪತ್ತಿನ ಮಂಡಳಿ' ನಿರ್ಧರಿಸಿತು. ಈ ಮಂಡಳಿಯ ಅಧ್ಯಕ್ಷತೆಯನ್ನು ಹಣಕಾಸಿನ ಸಚಿವರು ನಿರ್ವಹಿಸಿದರು. ಈ ಸಾಮಾಜಿಕ ನಿಯಂತ್ರಣದಡಿಯಲ್ಲಿ ವಾಣಿಜ್ಯ ಬ್ಯಾಂಕುಗಳು ಕೃಷಿಕರ ಮತ್ತು ಸಣ್ಣ ವ್ಯಾಪಾರಿಗಳ ಪತ್ತಿನ ಅವಶ್ಯಕತೆಗಳನ್ನು ಈಡೇರಿಸುವ ಜವಾಬ್ದಾರಿಯನ್ನು ಹೊತ್ತುಕೊಂಡವು. ಸಾಮಾಜಿಕ ನಿಯಂತ್ರಣವನ್ನು ಬ್ಯಾಂಕುಗಳ ಮೇಲೆ ವಿಧಿಸಿದ ನಂತರ ವಾಣಿಜ್ಯ ಬ್ಯಾಂಕಿನ ಗ್ರಾಮೀಣ ಪತ್ತಿನ ಧೋರಣೆಗಳಲ್ಲಿ ಬದಲಾವಣೆಯಾಗಲಿಲ್ಲ. ಹಲವಾರು ರಾಜಕೀಯ ಪಕ್ಷಗಳು ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸುವಂತೆ ಸರ್ಕಾರದ ಮೇಲೆ ಒತ್ತಡವನ್ನು ತಂದವು. ಏಕೆಂದರೆ ವಾಣಿಜ್ಯ ಬ್ಯಾಂಕುಗಳು ಹಲವಾರು ನ್ಯೂನ್ಯತೆಗಳನ್ನು ಹೊಂದಿದ್ದವು. ಅವುಗಳಲ್ಲಿ ಪ್ರಮುಖವಾದವು ಗಳೆಂದರೆ,

೧. ಬ್ಯಾಂಕುಗಳ ಒಡೆತನ ಮತ್ತು ನಿಯಂತ್ರಣ ಕೆಲವೇ ಖಾಸಗಿ ಜನರ ಕೈಯಲ್ಲಿದ್ದಿತು.

೨. ದೇಶದ ಸಂಪತ್ತು ಮತ್ತು ಆರ್ಥಿಕ ಶಕ್ತಿ ಕೆಲವೇ ಜನರ ಕೈಯಲ್ಲಿ ಕೇಂದ್ರಿಕೃತವಾಗಿದ್ದಿತು.

೩. ಗ್ರಾಮೀಣ ಭಾಗದಲ್ಲಿ ಉಳಿತಾಯಕ್ಕೆ ಪ್ರೋತ್ಸಾಹ ನೀಡಲಿಲ್ಲ.

೪. ಸಣ್ಣ ವ್ಯಾಪಾರಿಗಳಿಗೆ ಮತ್ತು ಕೃಷಿಕರಿಗೆ ಬ್ಯಾಂಕುಗಳು ಸಾಲ ಕೊಡುವುದರಿಂದ ಸಂಪೂರ್ಣವಾಗಿ ವಂಚಿಸಿದ್ದವು.

೫. ಬ್ಯಾಂಕುಗಳು ತಮಗೆ ಇಷ್ಟ ಇರುವ ಬೃಹತ್ ಪ್ರಮಾಣದ ಕಂಪನಿಗಳಿಗೆ ಪತ್ತಿನ ಸೌಲಭ್ಯವನ್ನು ವಿಸ್ತರಿಸಿದ್ದವು.

೬. ಬ್ಯಾಂಕುಗಳು ಕಪ್ಪು ಮಾರುಕಟ್ಟೆ, ಸಂಗ್ರಹಣೆಯಂತಹ ಸಮಾಜ ದ್ರೋಹ ಚಟುವಟಿಕೆಗಳಿಗೆ ಸಾಲ ನೀಡುತ್ತಿದ್ದವು.

೭. ಸಾಮಾಜಿಕ ನಿಯಂತ್ರಣ ಉದ್ದೇಶ ನಿರ್ವಹಿಸುವಲ್ಲಿ ಬ್ಯಾಂಕುಗಳು ವಿಫಲವಾದವು.[೯೪]

ವಾಣಿಜ್ಯ ಬ್ಯಾಂಕುಗಳ ಲೋಪ-ದೋಷಗಳನ್ನು ಗಮನದಲ್ಲಿಟ್ಟುಕೊಂಡು ಅಂದಿನ ಪ್ರಧಾನ ಮಂತ್ರಿಗಳು ಬ್ಯಾಂಕುಗಳ ರಾಷ್ಟ್ರೀಕರಣದ ಬಗ್ಗೆ ಆಲೋಚಿಸಿದರು. ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣದ ಉದ್ದೇಶಗಳೆಂದರೆ

೧. ಕೆಲವೇ ಕೈಗಾರಿಕೋದ್ಯಮಿಗಳ ಹಿಡಿತದಲ್ಲಿರುವ ವಾಣಿಜ್ಯ ಬ್ಯಾಂಕು ನಿಯಂತ್ರಣ ತಪ್ಪಿಸುವುದು.

೨. ನಿರ್ಲಕ್ಷಿತ ವಲಯಗಳಾದ ಕೃಷಿ, ಸಣ್ಣ ಕೈಗಾರಿಕೆ ಮತ್ತು ನಿರ್ಯಾತ ವಲಯಗಳಿಗೆ ಹೆಚ್ಚು ಪತ್ತನ್ನು ಒದಗಿಸುವುದು.

೩. ವಾಣಿಜ್ಯ ಬ್ಯಾಂಕುಗಳಲ್ಲಿ ವೃತ್ತಿನಿರತ ಆಡಳಿತ ಮಂಡಳಿ ನೇಮಿಸುವುದು.

೪. ದೇಶದಲ್ಲಿ ಹೊಸ ಉದ್ದಿಮೆದಾರರ ಉಗಮಕ್ಕೆ ಪ್ರೋತ್ಸಾಹ ನೀಡುವುದು.

೫. ಬ್ಯಾಂಕ್ ಉದ್ಯೋಗಿಗಳಿಗೆ ತರಬೇತಿ ಮತ್ತು ಸೇವಾ ಪರಿಸ್ಥಿತಿಯನ್ನು ಸುಧಾರಿಸುವುದು.[೯೫]

ಸಾಮಾಜಿಕ ನಿಯಂತ್ರಣ ವಿಧಿಸಿದ ಬೆನ್ನ ಹಿಂದೆಯೇ ಭಾರತ ಸರ್ಕಾರವು ೧೯ ಜುಲೈ ೧೯೬೯ ರಂದು ೫೦ ಕೋಟಿ ಠೇವಣಿ ಹಣವನ್ನು ಹೊಂದಿರುವಂತಹ ೧೪ ವಾಣಿಜ್ಯ ಬ್ಯಾಂಕುಗಳನ್ನು ಪ್ರಥಮ ಹಂತದಲ್ಲಿ ರಾಷ್ಟ್ರೀಕರಣಗೊಳಿಸಿತು. ಇದೇ ರೀತಿ ೨೦ ಏಪ್ರಿಲ್ ೧೯೮೦ ರಂದು ೬ ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ಎರಡನೆಯ ಹಂತವಾಗಿ ರಾಷ್ಟ್ರೀಕರಣಗೊಳಿಸಲಾಯಿತು. ಇದರಿಂದಾಗಿ ಸಾರ್ವಜನಿಕ ಬ್ಯಾಂಕುಗಳು ದೇಶದಾದ್ಯಂತ ಶೇಕಡ ೯೩ ರಷ್ಟು ಹಣಕಾಸಿನ ಸಂಪನ್ಮೂಲವನ್ನು ನಿಯಂತ್ರಿಸಿದವು.

ಬ್ಯಾಂಕುಗಳ ರಾಷ್ಟ್ರೀಕರಣವು ದೇಶದ ಗ್ರಾಮೀಣ ಪತ್ತಿನ ಪರಿಸ್ಥಿತಿ ಸುಧಾರಿಸಬಹುದೆಂದು ಸರ್ಕಾರ ಮತ್ತು ಆರ್.ಬಿ.ಐ. ತಿಳಿದುಕೊಂಡಿದ್ದವು.[೯೬] ಆದರೆ ವಾಸ್ತವವಾಗಿ ಪರಿಸ್ಥಿತಿಯಲ್ಲಿ ಯಾವುದೇ ಬದಲಾವಣೆ ಕಂಡು ಬರಲಿಲ್ಲ. ಆ ವರದಿಯಲ್ಲಿ ವಾಣಿಜ್ಯ ಬ್ಯಾಂಕುಗಳು ಒದಗಿಸಿದ ಒಟ್ಟಾರೆ ಪತ್ತಿನಲ್ಲಿ ದೊಡ್ಡ ರೈತರು ಎಂದರೆ ೧೦ ಎಕರೆಗಿಂತ ಹೆಚ್ಚು ಭೂಮಿ ಹೊಂದಿರುವವರು ಶೇಕಡ ೬೦.೮ರಷ್ಟು ಪತ್ತನ್ನು ಹೊಂದಿದ್ದರೆ ಸಣ್ಣ ರೈತರು ೨.೫ ಎಕರೆಗಿಂತ ಕಡಿಮೆ ಭೂಮಿ ಹೊಂದಿರುವವರು ಶೇಕಡಾ ೯.೪ ರಷ್ಟು ಪತ್ತನ್ನು ೧೯೭೮ರಲ್ಲಿ ಹೊಂದಿದ್ದರು ಎಂಬುದನ್ನು ಸಮೀಕ್ಷಾವರದಿ ತನ್ನ ಅಭಿಪ್ರಾಯದಲ್ಲಿ ವ್ಯಕ್ತಪಡಿಸಿದೆ. ಈ ವರದಿ ಇನ್ನು ಮುಂದುವರೆದು ಹೇಳುತ್ತಾ ದೊಡ್ಡ ರೈತರು, ಸಣ್ಣ ರೈತರ ಹೆಸರಿನಲ್ಲಿ ಬೇನಾಮಿ ವ್ಯವಹಾರವನ್ನು ನಡೆಸಿ ಬ್ಯಾಂಕಿನ ಪತ್ತಿನ ಸೌಲಭ್ಯವನ್ನು ಪಡೆದಿದ್ದವು. ಈ ರೀತಿಯ ವಂಚನೆಗಳು ಬ್ಯಾಂಕುಗಳ ರಾಷ್ಟ್ರೀಕರಣದ ನಂತರವೂ ಮುಂದುವರೆದಿರುವುದನ್ನು ಈ ಸಮೀಕ್ಷಾ ವರದಿ ಉಲ್ಲೇಖಿಸಿದೆ.[೯೭] ಭಾರತ ಸರ್ಕಾರದ ಸಾಮಾಜಿಕ ನಿಯಂತ್ರಣ ಮತ್ತು ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣದ ಉದ್ದೇಶಗಳು, ಬ್ಯಾಂಕುಗಳ ರಾಷ್ಟ್ರೀಕರಣದ ನಂತರವೂ ಈಡೇರಲಿಲ್ಲ. ಪುನಃ ಗ್ರಾಮೀಣ ಭಾಗದ ದುರ್ಬಲ ವರ್ಗದ ಜನಪದರು ಖಾಸಗಿ ಹಣಕಾಸಿನ ಏಜೆಂಟರ ಮನೆ ಬಾಗಿಲನ್ನು ಸಾಲಕ್ಕಾಗಿ ತಟ್ಟುವ ಪರಿಸ್ಥಿತಿ ಮುಂದುವರೆಯಿತು.

## ೨.೧೦. ಆದ್ಯತಾ ವಲಯ ಮತ್ತು ವಾಣಿಜ್ಯ ಬ್ಯಾಂಕುಗಳು

ರಾಷ್ಟ್ರೀಯ ಪತ್ತಿನ ಮಂಡಳಿ ೨೪ ಜುಲೈ ೧೯೬೮ ರಂದು ಸಭೆ ನಡೆಸಿ ವಾಣಿಜ್ಯ ಬ್ಯಾಂಕುಗಳು ಎರಡು ಆದ್ಯತಾ ವಲಯಗಳಾದ ಕೃಷಿ ಮತ್ತು ಸಣ್ಣ ಕೈಗಾರಿಕೆಗಳಿಗೆ ತ್ವರಿತವಾಗಿ ಪತ್ತನ್ನು ಒದಗಿಸುವ ನಿರ್ಧಾರವನ್ನು ಮಂಡಳಿ ಘೋಷಿಸಿತು. ಈ ಉದ್ದೇಶಕ್ಕಾಗಿ ಭಾರತದ ರಿಸರ್ವ್ ಬ್ಯಾಂಕು ಅಂಕಿ-ಅಂಶಗಳ ಅಧ್ಯಯನ ಗುಂಪನ್ನು ಮೇ ೧೯೭೧ ರಂದು ರಚಿಸಿತು. ಈ ಅಧ್ಯಯನ ಗುಂಪು ಆದ್ಯತಾ ವಲಯಕ್ಕೆ ಹೇಗೆ ಪತ್ತನ್ನು ಒದಗಿಸಬೇಕು ಎನ್ನುವುದರ ಬಗ್ಗೆ ಅಧ್ಯಯನ ನಡೆಸಿ ತನ್ನ ವರದಿಯನ್ನು ರಿಸರ್ವ ಬ್ಯಾಂಕ್‌ಗೆ ಸಲ್ಲಿಸಿತು. ಭಾರತೀಯ ರಿಸರ್ವ್ ಬ್ಯಾಂಕು ಈ ನಿಟ್ಟಿನಲ್ಲಿ ವಾಣಿಜ್ಯ ಬ್ಯಾಂಕುಗಳಿಗೆ ೧ನೇ ಫೆಬ್ರವರಿ ೧೯೭೨ ರಂದು ಸಾಮಾನ್ಯ ಮಾರ್ಗಸೂಚಿಯನ್ನು ನೀಡಿತು. ಈ ಮಾರ್ಗಸೂಚಿಯಲ್ಲಿ ಆದ್ಯತಾ ವಲಯದ ಬಗ್ಗೆ ಸ್ಪಷ್ಟವಾದ ಅಭಿಪ್ರಾಯವನ್ನು ಅದು ತಿಳಿಸಿತು. ಆದರೆ ಆದ್ಯತಾ ವಲಯಕ್ಕೆ ಪತ್ತಿನ ಮಿತಿಯನ್ನು ನಿಗಧಿಗೊಳಿಸಲಿಲ್ಲ. ಆದರೆ ಭಾರತೀಯ ರಿಸರ್ವ್ ಬ್ಯಾಂಕ್ ಹಾಗೂ ವಾಣಿಜ್ಯ ಬ್ಯಾಂಕುಗಳು ಆದ್ಯತಾ ವಲಯಕ್ಕಾಗಿ ಮಾರ್ಚ್ ೧೯೭೪ರ ವೇಳೆಗೆ ಪ್ರತಿಶತ ೩೩.೩೩ರಷ್ಟು ಪತ್ತನ್ನು ಒದಗಿಸಬೇಕೆಂದು ಸೂಚಿಸಿತು.[೯೮]

ರಿಸರ್ವ್ ಬ್ಯಾಂಕಿನ ಮೇಲಿನ ಮಾರ್ಗಸೂಚಿಯಲ್ಲಿ ಕೆಲವು ಲೋಪ-ದೋಷಗಳು ಕಂಡು ಬಂದವು. ಆದ್ದರಿಂದ ಭಾರತ ಸರ್ಕಾರ ವಾಣಿಜ್ಯ ಬ್ಯಾಂಕುಗಳ ಆದ್ಯತಾ ವಲಯದ ಸಾಲ ನೀಡಿಕೆ ಮತ್ತು ೨೦ ಅಂಶಗಳ ಆರ್ಥಿಕ ಕಾರ್ಯಕ್ರಮದಡಿಯಲ್ಲಿ ಒಂದು ಸ್ಥಾಯಿ ಸಮಿತಿಯನ್ನು ರಚಿಸಿತು. ಈ ಸ್ಥಾಯಿ ಸಮಿತಿಯು ಆದ್ಯತಾ ವಲಯದ ವ್ಯಾಖ್ಯಾನದಲ್ಲಿ ಕೆಲವು ಮಾರ್ಪಡುಗಳನ್ನು ಮಾಡಿತು. ಆದ್ಯತಾ ವಲಯಕ್ಕೆ ಎರಡು ಸಹ ವಲಯಗಳನ್ನು ಸೇರಿಸಿತು. ಆದ್ಯತಾ ವಲಯಗಳೆಂದರೆ ಕೃಷಿ ಮತ್ತು ಸಣ್ಣ ಕೈಗಾರಿಕೆಗಳ ಜೊತೆಗೆ, ಸಹ ವಲಯಗಳಲ್ಲಿ ಸಾಮಾಜಿಕವಾಗಿ ಹಿಂದುಳಿದಂತಹ ದುರ್ಬಲ ವರ್ಗದ ಜನರ ಗುಂಪನ್ನು ಸೇರಿಸಲಾಯಿತು. ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡ (SC/ST)ದ ಜನಪದರಿಗೆ ಹಣಕಾಸಿನ ಮಾರುಕಟ್ಟೆಯಲ್ಲಿ ಇರುವಂತಹ ಬ್ಯಾಂಕಿಂಗ್ ವ್ಯವಸ್ಥೆಯ ಪರಿಸ್ಥಿತಿಯಲ್ಲಿ ಸಾಲವನ್ನು ಪಡೆಯುವುದು ಸಾಧ್ಯವಿಲ್ಲ ಎಂಬುದನ್ನು ಮನಗಂಡಿತು.[೯೯]

ವಾಣಿಜ್ಯ ಬ್ಯಾಂಕುಗಳ ಹಿಂದಿನ ಪತ್ತಿನ ಅನುಭವವನ್ನು ಪರಿಶೀಲಿಸಿದ ಸ್ಥಾಯಿಸಮಿತಿ ಮಾರ್ಚ್ ೧೯೮೫ರ ವೇಳೆಗೆ ಬ್ಯಾಂಕುಗಳು ಆದ್ಯತಾ ವಲಯಕ್ಕೆ ನೀಡುವ ಪತ್ತಿನ ಪ್ರಮಾಣವನ್ನು ಪ್ರತಿಶತ ೪೦ರಷ್ಟು ನಿಗದಿಪಡಿಸಿತು. ಇದರಲ್ಲಿ ಕೃಷಿ ವಲಯಕ್ಕೆ ಒಟ್ಟಾರೆ ಸಾಲ ನೀಡಿಕೆಯ ಕನಿಷ್ಠ ಪ್ರತಿಶತ ೧೮ರಷ್ಟು ನೀಡಬೇಕು. ಸಹ ವಲಯದ ಸಣ್ಣ/ಅತಿಸಣ್ಣ ರೈತರು, ಕೃಷಿ ಅವಲಂಬಿತ ಚಟುವಟಿಕೆಗಳಲ್ಲಿ ತೊಡಗಿದ ದುರ್ಬಲ ವರ್ಗದ ಜನಪದರಿಗೆ ಪ್ರತಿಶತ ೫೦ರಷ್ಟು ನೇರ ಸಾಲವನ್ನು ನೀಡಬೇಕು. ಪ್ರತಿಶತ ೧೨.೫ರಷ್ಟು ಪತ್ತನ್ನು ಸಣ್ಣ ಕೈಗಾರಿಕೆಗಳಿಗೆ ನೀಡಬೇಕೆಂಬುದನ್ನು ಸ್ಥಾಯಿ ಸಮಿತಿ ನಿರ್ಧರಿಸಿತು.[೧೦೦]

ಪ್ರಧಾನ ಮಂತ್ರಿಗಳಾದ ದಿ. ಇಂದಿರಾ ಗಾಂಧಿಯವರು ದೇಶದ ತುರ್ತು ಪರಿಸ್ಥಿತಿಯಲ್ಲಿ (೧೯೭೫) ೨೦ ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತಂದರು. ಬದಲಾದ ದೇಶದ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗೆ ಅನುಗುಣವಾಗಿ ೧೯೮೨ರಲ್ಲಿ ೨೦ ಅಂಶಗಳ ಕಾರ್ಯಕ್ರಮವನ್ನು ಪರಿಷ್ಕರಿಸಿ ಹೊಸ ೨೦ ಅಂಶಗಳ ಕಾರ್ಯಕ್ರಮವನ್ನು ಜಾರಿಗೆ ತಂದರು. ೧೯೮೨ರಲ್ಲಿ ಹಣಕಾಸಿನ ಮಂತ್ರಿಗಳು ಆದ್ಯತಾ ವಲಯದಲ್ಲಿ ದುರ್ಬಲ ವರ್ಗದ ಜನಪದರಿಗೆ ೨೦ ಅಂಶಗಳ ಆರ್ಥಿಕ ಕಾರ್ಯಕ್ರಮದಡಿಯಲ್ಲಿ ಫಲಾನುಭವಿಗಳನ್ನು ಗುರುತಿಸುವುದಕ್ಕಾಗಿ ಸ್ಥಾಯಿ ಸಮಿತಿಯನ್ನು ರಚಿಸುವಂತೆ ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗೆ ಸಲಹೆ ನೀಡಿದರು. ಅದರಂತೆ ಆರ್.ಬಿ.ಐ. ಎ.ಘೋಷರ ಅಧ್ಯಕ್ಷತೆಯಲ್ಲಿ ಸ್ಥಾಯಿ ಸಮಿತಿಯನ್ನು ರಚಿಸಿತು. ಈ ಸಮಿತಿಯಲ್ಲಿ ಭಾರತ ಸರ್ಕಾರದ ಪ್ರತಿನಿಧಿ, ಸಾರ್ವಜನಿಕ ವಲಯದ ಬ್ಯಾಂಕುಗಳ ಪ್ರತಿನಿಧಿ, ಆರ್.ಬಿ.ಐ.ನ ಪ್ರತಿನಿಧಿ, ಎ.ಆರ್.ಡಿ.ಸಿ. ಮತ್ತು ಎ.ಎಫ್.ಸಿ.[೧೦೦] ಪ್ರತಿನಿಧಿಗಳನ್ನು ಸದಸ್ಯರನ್ನಾಗಿ ಸ್ಥಾಯಿ ಸಮಿತಿಯಲ್ಲಿ ನೇಮಿಸಿತು. ಈ ಸಮಿತಿ ಆದ್ಯತಾ ವಲಯದ ವ್ಯಾಖ್ಯಾನದ ಮರುಪರಿಶೀಲನೆ ಮಾಡಿತು. ಈ ಸಮಿತಿ ಕೃಷ್ಣಸ್ವಾಮಿ ಸಮಿತಿ ನೀಡಿದ ಆದ್ಯತಾ ವಲಯದ ವ್ಯಾಖ್ಯಾನವನ್ನು ಮರುಪರಿಶೀಲಿಸಿತು.[೧೦೧]

ಸ್ಥಾಯಿ ಸಮಿತಿ ಕೃಷ್ಣಸ್ವಾಮಿ ಸಮಿತಿ ನೀಡಿದ ಆದ್ಯತಾ ವಲಯದ ರಚನೆಯಲ್ಲಿ ಬದಲಾವಣೆ ಮಾಡುವ ಅವಶ್ಯಕತೆಯಿಲ್ಲ ಎನ್ನುವ ತೀರ್ಮಾನಕ್ಕೆ ಬಂದಿತು.[೧೦೨] ೬ನೇ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ (೧೯೮೦-೮೫) ಸಾಂಸ್ಥಿಕ ಪತ್ತಿನ ನೀತಿಯಲ್ಲಿ ಕೆಲವು ಉದ್ದೇಶಗಳನ್ನು ಇಟ್ಟುಕೊಂಡು ಇದರಡಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಕ್ಷೇತ್ರಕ್ಕೆ ಹೆಚ್ಚಿನ ಪತ್ತಿನ ಪ್ರಮಾಣವನ್ನು ನಿಗದಿಪಡಿಸಲಾಯಿತು. ಹೊಸ ೨೦ ಅಂಶಗಳ ಕಾರ್ಯಕ್ರಮದ ೧ ಮತ್ತು ೧೮ನೇ ಆರ್ಥಿಕ ಅಂಶಗಳು ಕೃಷಿ ಮತ್ತು ಸಣ್ಣ ಕೈಗಾರಿಕಾ ಕ್ಷೇತ್ರಕ್ಕೆ ಸಂಬಂಧಿಸಿದವು ಆಗಿದ್ದವು.[೧೦೩] ದುರ್ಬಲ ವರ್ಗದ ಜನಪದರಾದ ಪರಿಶಿಷ್ಟ ಜಾತಿ ಮತ್ತು ಪಂಗಡದ ಜನಪದರಿಗೆ ೨೦ ಅಂಶಗಳ ಆರ್ಥಿಕ ಯೋಜನೆಯಡಿ ಹೆಚ್ಚು ಪತ್ತಿನ ಸೌಲಭ್ಯವನ್ನು ನೀಡುವುದಕ್ಕಾಗಿ ಈ ಯೋಜನೆಯಡಿ ಸರ್ಕಾರ ಕ್ರಮವನ್ನು ಕೈಗೊಂಡಿತು. ೬ನೇ ಯೋಜನೆಯಡಿಯಲ್ಲಿ ಸಾರ್ವಜನಿಕ ವಲಯದ ಬ್ಯಾಂಕುಗಳು ಕ್ರಿಯಾತ್ಮಕವಾಗಿ ಬಡತನ ನಿರ್ಮೂಲನ ಕಾರ್ಯಕ್ರಮದಡಿಯಲ್ಲಿ ದುರ್ಬಲ ವರ್ಗದ ಜನಪದರಿಗೆ ಪತ್ತನ್ನು ಒದಗಿಸುವಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡವು.

ಪಟ್ಟಿಸಂಖ್ಯೆ ೫ರಲ್ಲಿ ಸಾರ್ವಜನಿಕ ವಲಯದ ಬ್ಯಾಂಕುಗಳು ಆದ್ಯತಾ ವಲಯಕ್ಕೆ ನೀಡಿದ ಪ್ರತಿಶತ ಪತ್ತಿನ ಪ್ರಮಾಣವನ್ನು ತೋರಿಸುತ್ತದೆ. ಆದ್ಯತಾ ವಲಯವು ಕೃಷಿ, ಸಣ್ಣ ಕೈಗಾರಿಕೆಗಳು ಮತ್ತು ಇತರ ವಲಯಗಳನ್ನು ಒಳಗೊಂಡಿದೆ. ಪಟ್ಟಿಯಲ್ಲಿ ತೋರಿಸಿರುವಂತೆ ಜೂನ್ ೧೯೬೯ರಲ್ಲಿ ಸಣ್ಣ ಕೈಗಾರಿಕಾ ವಲಯ ಕೃಷಿ ಮತ್ತು ಇತರೆ ವಲಯಕ್ಕಿಂತ ಹೆಚ್ಚಿನ ಪತ್ತಿನ ಸೌಲಭ್ಯ ಪಡೆದಿರುವುದನ್ನು ಪ್ರತಿಬಿಂಬಿಸುತ್ತದೆ. ಅದೇ ರೀತಿ ಒಟ್ಟಾರೆ ನೀಡಿದ ಪತ್ತಿನಲ್ಲಿ ಆದ್ಯತಾ ವಲಯ ಈ ವೇಳೆಗೆ ಪ್ರತಿಶತ ೧೪.೬ರಷ್ಟು ಪತ್ತಿನ ಸೌಲಭ್ಯವನ್ನು ಪಡೆದಿತ್ತು. ಇದು ಸರ್ಕಾರ ನಿಗದಿಪಡಿಸಿದ ಪ್ರತಿಶತ ೧೬ಕ್ಕಿಂತ

ಕಡಿಮೆ ಇರುವುದನ್ನು ಅಂಕಿ-ಅಂಶಗಳು ತಿಳಿಯಪಡಿಸುತ್ತವೆ. ಆದರೆ ಮಾರ್ಚ್ ೧೯೮೫ರ ವೇಳೆಗೆ ಸರ್ಕಾರ ಮತ್ತು ಆರ್.ಬಿ.ಐ. ಸತತ ಪ್ರಯತ್ನದಿಂದಾಗಿ ಈ ಪದ್ಧತಿಯಲ್ಲಿ ಬದಲಾವಣೆ ಕಂಡು ಬಂದಿರುವುದನ್ನು ಪಟ್ಟಿಯು ತಿಳಿಯಪಡಿಸುತ್ತದೆ.

ಪಟ್ಟಿಯ ಪ್ರಕಾರ ಮಾರ್ಚ್ ೧೯೮೫ರ ವೇಳೆಗೆ ಕೃಷಿ ವಲಯ, ಸಣ್ಣ ಕೈಗಾರಿಕೆ ಮತ್ತು ಇತರ ವಲಯಗಳಿಗೆ ಅಧಿಕ ಪ್ರಮಾಣದ ಪತ್ತಿನ ಸೌಲಭ್ಯವನ್ನು ಪಡೆದಿದ್ದಿತು. ಈ ವೇಳೆಗೆ ಸಾರ್ವಜನಿಕ ವಲಯದ ಬ್ಯಾಂಕುಗಳು ನೀಡಿದ ಒಟ್ಟಾರೆ ಪತ್ತಿನ ಪ್ರಮಾಣದಲ್ಲಿ ಆದ್ಯತಾ ವಲಯ ಪ್ರತಿಶತ ೩೯.೯ರಷ್ಟು ಪತ್ತಿನ ಪಾಲನ್ನು ಪಡೆದಿತ್ತು. ಅದೇ ರೀತಿ ಮಾರ್ಚ್ ೧೯೯೮ರ ವೇಳೆಗೆ ಆದ್ಯತಾ ವಲಯದ ಸಣ್ಣ ಕೈಗಾರಿಕೆಗಳು ಕೃಷಿ ಇತರ ವಲಯಗಳಿಗೆ ಪ್ರತಿಶತ ೪೨ರಷ್ಟು ಪತ್ತಿನ ಪಾಲನ್ನು ಪಡೆದುಕೊಂಡಿದ್ದಿತು. ೨೦೦೭ರ ಜೂನ್ ಕೊನೆಯ ವೇಳೆಗೆ ಆದ್ಯತಾ ವಲಯಕ್ಕೆ ಪ್ರತಿಶತ ೪೨.೭ರಷ್ಟು ಹಣಕಾಸಿನ ನೆರವನ್ನು ಪಡೆದಿರುವುದನ್ನು ಪಟ್ಟಿ ಸಂಖ್ಯೆ ೫ರಲ್ಲಿ ಕಾಣಬಹುದು.

**ಪಟ್ಟಿ ಸಂಖ್ಯೆ ೫**

**ಆದ್ಯತಾ ವಲಯಕ್ಕೆ ಸಾರ್ವಜನಿಕ ವಲಯದ ಬ್ಯಾಂಕುಗಳು ನೀಡಿದ ಪತ್ತು**

**ಕೋಟಿ ರೂಪಾಯಿಗಳಲ್ಲಿ**

| ಆದ್ಯತಾ ವಲಯ | ೧೯೬೯ | ೧೯೮೫ | ೧೯೯೮ | ೨೦೦೪ |
|---|---|---|---|---|
| ಕೃಷಿ ವಲಯ | ೧೬೨.೪೩ | ೭೬.೫೭ | ೩೪.೩೧೦ | ೯೦,೫೪೦ |
| | (೩೬.೬೨) | (೪೧.೫) | (೩೭.೫೭) | (೧೨%) |
| ಸಣ್ಣ ಕೈಗಾರಿಕೆಗಳು | ೨೫೧.೦೭ | ೬೬೦೮ | ೩೮.೧೧೦ | ೬೫,೮೫೦ |
| | (೫೬.೯೧) | (೩೫.೯೯) | (೪೧.೨೪) | (೮.೬%) |
| ಇತರೆ ಆದ್ಯತಾ ವಲಯ | ೨೭.೫೭ | ೪೧೪೨ | ೧೮.೮೮೦ | ೧,೦೭,೪೪೦ |
| | (೬.೨೫) | (೨೨.೫) | (೨೦.೬) | (೧೪%) |
| ಒಂದರಿಂದ ಮೂರು | ೪.೪೧ | ೧೮೪೦೭ | ೯೭.೩೦೦ | ೨,೬೩,೩೮೦ |
| | (೧೦೦) | (೧೦೦) | (೧೦೦) | (೧೦೦) |
| ಒಟ್ಟು ಮುಂಗಡಗಳು | ೩೦.೨೧ | ೪೬೧೫೩ | ೨೧೮.೨೨೦ | ೭,೬೪,೩೮೦ |
| ಪ್ರತಿಶತ | (೧೪.೬೨) | (೩೯.೯) | (೪೨) | (೩೪.೦) |

ಆಧಾರ - ೧. ಎಕಾನಾಮಿಕ್ ಸರ್ವೆ-ಗೌರ್ನಮೆಂಟ್ ಆಫ್ ಇಂಡಿಯಾ-೧೯೯೮, ೯೯, ೯೯, ೨೦೦೦, ಮಿನಿಸ್ಟ್ರಿ ಆಫ್ ಫೈನಾನ್ಸ್, ನ್ಯೂಡೆಲ್ಲಿ-ಪುಟ ೫-೬೦

೨. ರಿಪೋರ್ಟ್ ಆನ್ ಟ್ರೆಂಡ್ಸ್ ಅಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೨೦೦೬-೦೭, ಆರ್.ಬಿ.ಐ. ಪುಟ-೨೯೫.

## ೨.೧೧. ಗ್ರಾಮೀಣ ಪತ್ತಿನಲ್ಲಿ ಸಹಕಾರ ಸಂಸ್ಥೆಗಳು

ಸಹಕಾರ ಸಂಸ್ಥೆಗಳು ಹಲವು ವ್ಯಕ್ತಿಗಳು ಸ್ವ ಪ್ರೇರಣೆಯಿಂದ ಸ್ಥಾಪಿಸಿದ ಸಂಸ್ಥೆಗಳಾಗಿರುತ್ತವೆ. ಇವು ಸಾಮೂಹಿಕವಾದಂತಹ ಗುರಿಸಾಧನೆಯ ಧ್ಯೇಯವನ್ನಿಟ್ಟುಕೊಂಡಂತಹ ಸಂಸ್ಥೆಗಳಾಗಿರುತ್ತವೆ. ಸಹಕಾರ ತತ್ವವು "ಎಲ್ಲರಿಗಾಗಿ ಒಬ್ಬನು, ಒಬ್ಬರಿಗಾಗಿ ಎಲ್ಲರೂ" ಜೊತೆಗೆ ಸ್ವ ಸಹಾಯದ ಮೂಲಕ ಪರಸ್ಪರ ಸಹಾಯ ಎನ್ನುವ ತತ್ವಗಳ ಆಧಾರದ ಮೇಲೆ ನೆಲೆಗೊಂಡಿರುತ್ತವೆ. ಈ ಸಂಸ್ಥೆಗಳ ಮುಖ್ಯ ಉದ್ದೇಶವೆಂದರೆ ಸಮಾಜದ ಗರಿಷ್ಟ ಕ್ಷೇಮಾಭ್ಯುದಯವನ್ನು ಸಾಧಿಸುವ ಮಹತ್ವಾಂಕಾಂಕ್ಷೆಯನ್ನು ಹೊಂದಿರುತ್ತವೆ.

ಭಾರತದಲ್ಲಿ ಸಹಕಾರ ಆಂದೋಲನ ೧೯೦೪ರಲ್ಲಿ ಸಹಕಾರಿ ಸಂಘಗಳ ಕಾಯ್ದೆಯೊಂದಿಗೆ ಪ್ರಾರಂಭವಾಯಿತು. ಈ ಕಾಯ್ದೆಯಡಿ ಸ್ಥಾಪನೆಗೊಂಡ ಸಹಕಾರಿ ಸಂಸ್ಥೆಗಳ ಮುಖ್ಯ ಉದ್ದೇಶವೆಂದರೆ ಮಿತವ್ಯಯಕ್ಕೆ ಉತ್ತೇಜನ ಸ್ವಸಹಾಯ ಮತ್ತು ಕೃಷಿಕರ ನಡುವೆ ಸಹಕಾರ, ಕುಶಲ ಕರ್ಮಿಗಳ ಮತ್ತು ಸೀಮಿತ ಆದಾಯವನ್ನು ಹೊಂದಿರುವಂತಹ ಜನರಲ್ಲಿ ಸ್ವ ಸಹಾಯದ ಮನೋವೃತ್ತಿಯನ್ನು ಬೆಳೆಸುವುದಾಗಿತ್ತು. ೧೯೦೪ರ ಸಹಕಾರ ಕಾಯ್ದೆಯಡಿ ಸ್ಥಾಪನೆಯಾದ ಸಹಕಾರಿ ಸಂಸ್ಥೆಗಳನ್ನು ಗ್ರಾಮೀಣ ಮತ್ತು ನಗರ ಸಂಸ್ಥೆಗಳೆಂದು ವಿಭಜಿಸಲಾಗಿತ್ತು. ಗ್ರಾಮೀಣ ಸಹಕಾರಿ ಸಂಸ್ಥೆಗಳು ಅಪರಿಮಿತ ಹೊಣೆಗಾರಿಕೆ ತತ್ವದ ಮೇಲೆ ಕೆಲಸ ಮಾಡಬೇಕಾಗಿದ್ದರೆ, ನಗರ ಪ್ರದೇಶದ ಸಹಕಾರಿ ಸಂಸ್ಥೆಗಳಿಗೆ ಇದು ಐಚ್ಛಿಕವಾಗಿತ್ತು. ೧೯೦೪ರ ಸಹಕಾರಿ ಸಂಸ್ಥೆಯ ಶಾಸನದಲ್ಲಿನ ನ್ಯೂನ್ಯತೆಯನ್ನು ಸರಪಡಿಸುವುದಕ್ಕೋಸ್ಕರ ೧೯೧೨ರಲ್ಲಿ ಸಮಗ್ರ ತಳಹದಿಯ ಮೇಲೆ ಸಹಕಾರಿ ಸಂಸ್ಥೆಗಳ ಹೊಸ ಶಾಸನವನ್ನು ಸರ್ಕಾರ ಜಾರಿಗೆ ತಂದಿತು.[೧೦೫]

ಸಹಕಾರಿ ಸಂಸ್ಥೆಗಳ ವಲಯದಲ್ಲಿ ೨೦ನೇ ಶತಮಾನದ ಮಧ್ಯದ ವೇಳೆಗೆ ಮೂರು ಪ್ರಮುಖ ಬೆಳವಣಿಗೆಗಳು ಕಂಡುಬಂದವು. ೧೯೩೫ರಲ್ಲಿ ಭಾರತದ ರಿಸರ್ವ್‌ಬ್ಯಾಂಕು ಸ್ಥಾಪನೆಯಾಗಿ ಅದರಲ್ಲಿ ಕೃಷಿ ವಿಭಾಗದ ಪತ್ತಿನ ಸಮಸ್ಯೆಗಳ ಅಧ್ಯಯನಕ್ಕಾಗಿ ಪ್ರತ್ಯೇಕವಾದಂತಹ ವಿಭಾಗವನ್ನು ತೆರೆಯಲಾಯಿತು. ೧೯೩೬ರಲ್ಲಿ ಅಖಿಲ ಭಾರತ ರಿಜಿಸ್ಟ್ರಾರ್‌ಗಳ ಸಮ್ಮೇಳನ ನಡೆಯಿತು. ಈ ಸಮ್ಮೇಳನದಲ್ಲಿ ದೇಶದಾದ್ಯಂತ ಸಹಕಾರಿ ಸಂಸ್ಥೆಗಳ ತಜ್ಞರು ಸೇರಿ ಧೀರ್ಘಕಾಲಾವಧಿ ಪತ್ತಿನ ಅವಶ್ಯಕತೆಯ ಬಗ್ಗೆ ಚರ್ಚಿಸಿ, ಇದಕ್ಕೆ ಪರಿಹಾರವಾಗಿ ಜಮೀನು ಅಡಮಾನದ ಬ್ಯಾಂಕನ್ನು ಸ್ಥಾಪಿಸುವ ಚಿಂತನೆಯನ್ನು ಸಮ್ಮೇಳನದಲ್ಲಿ ಮಾಡಲಾಯಿತು. ಸಮ್ಮೇಳನದಲ್ಲಿ ಪ್ರಾಥಮಿಕ ಸಹಕಾರಿ ಸಂಸ್ಥೆಗಳು ಬಹುಮುಖಿ ಉದ್ದೇಶಗಳ ಮೇಲೆ ಕಾರ್ಯನಿರ್ವಹಿಸುವುದಕ್ಕೆ ಅನುಕೂಲವಾಗುವಂತೆ ಅವುಗಳ ಕಾರ್ಯಾಚರಣೆಯಲ್ಲಿ ಬದಲಾವಣೆ ತರಬೇಕು ಎಂಬುದನ್ನು ಸಮ್ಮೇಳನ ನಿರ್ಧರಿಸಿತು. ಅಂದಿನಿಂದ ಸಹಕಾರಿ ವಲಯ ಸಮಾರೋಪಾದಿಯಲ್ಲಿ ದೇಶದಾದ್ಯಂತ ಕಾರ್ಯಚಟುವಟಿಕೆಯಲ್ಲಿ ತೊಡಗಿದವು.

ಸಹಕಾರಿ ಸಂಸ್ಥೆಗಳನ್ನು ಎರಡು ರೀತಿಯಲ್ಲಿ ವಿಭಾಗಿಸುತ್ತೇವೆ. ಮೊದಲನೆಯದಾಗಿ 'ಅಲ್ಪ ಮತ್ತು ಮದ್ಯಮಾವಧಿ' ಸಾಲ ನೀಡುವ ಸಂಸ್ಥೆಗಳು ಎರಡನೆಯದಾಗಿ 'ದೀರ್ಘಾವದಿ' ಸಾಲ ನೀಡುವ ಸಂಸ್ಥೆಗಳು. ಅಲ್ಪ ಮತ್ತು ಮದ್ಯಮಾವಧಿ ಸಾಲ ನೀಡುವ ಸಂಸ್ಥೆಗಳು ಮೂರು ಹಂತದಲ್ಲಿ ಕಾರ್ಯನಿರ್ವಹಿಸುತ್ತವೆ.

೧. ಪ್ರಾಥಮಿಕ ಸಹಕಾರಿ ಪತ್ತಿನ ಸಂಘಗಳು ಗ್ರಾಮೀಣ ಮಟ್ಟದಲ್ಲಿ ಕೆಲಸ ನಿರ್ವಹಿಸುತ್ತವೆ.

೨. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಜಿಲ್ಲಾ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತವೆ.

೩. ರಾಜ್ಯ ಸಹಕಾರಿ ಬ್ಯಾಂಕುಗಳು ರಾಜ್ಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತವೆ.

'ದೀರ್ಘಕಾಲ' ಸಾಲ ನೀಡುವ ಸಹಕಾರಿ ಸಂಸ್ಥೆಗಳನ್ನು ಎರಡು ಭಾಗಗಳನ್ನಾಗಿ ವಿಂಗಡಿಸುತ್ತೇವೆ.

೧. ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಅಥವಾ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು (P.L.D) ತಾಲೂಕು ಮಟ್ಟದ ಬ್ಯಾಂಕುಗಳಾಗಿ ಸೇವೆಸಲ್ಲಿಸುತ್ತವೆ.

೨. ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಅಥವಾ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು ರಾಜ್ಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತವೆ.

ಮೇಲಿನ ಎರಡೂ ಪ್ರಕಾರದ ಸಂಸ್ಥೆಗಳಲ್ಲದೆ ಪತ್ತಿನೇತರ ಸಹಕಾರಿ ಸಂಸ್ಥೆಗಳು ಸಹ ದೇಶದಾದ್ಯಂತ ಕಾರ್ಯನಿರ್ವಹಿಸುತ್ತಿವೆ. ಅಂತಹ ಸಂಸ್ಥೆಗಳೆಂದರೆ ಸಂಸ್ಕರಣೆ, ಉದ್ದಿಮೆ, ಮಾರುಕಟ್ಟೆ ಮತ್ತು ಗೃಹನಿರ್ಮಾಣ ಸಂಸ್ಥೆಗಳಾಗಿದ್ದು, ಇವುಗಳು ಕುಶಲಕರ್ಮಿಗಳ ಮತ್ತು ಸಣ್ಣ ಉದ್ದಿಮೆದಾರರ ಆಶೋತ್ತರಗಳನ್ನು ಈಡೇರಿಸುವಂತಹ ಸಂಸ್ಥೆಗಳಾಗಿವೆ. ಈ ಸಂಸ್ಥೆಗಳು ಗ್ರಾಮೀಣ ಭಾಗದಲ್ಲಿ ಕಾರ್ಯನಿರ್ವಹಿಸುತ್ತಿದ್ದರೂ ಅವುಗಳು ನಗರ ಪ್ರದೇಶಗಳಲ್ಲಿ ಹೆಚ್ಚು ಪ್ರಸಿದ್ಧಿ ಪಡೆದಿವೆ.

ಮೂರು ಹಂತದ ಅಲ್ಪ ಮತ್ತು ಮಧ್ಯಮಾವಧಿ ಸಹಕಾರಿ ಸಂಸ್ಥೆಗಳು ಮತ್ತು ಎರಡು ಹಂತದ ದೀರ್ಘಕಾಲಾವಧಿ ಸಹಕಾರಿ ಸಂಸ್ಥೆಗಳ ಕಾರ್ಯಾಚರಣೆಯನ್ನು ನೋಡೋಣ.

**ಮೂರು ಹಂತದ ಅಲ್ಪ ಮತ್ತು ಮಧ್ಯಮಾವಧಿ ಸಹಕಾರಿ ಸಂಘಗಳು**

**೧. ಪ್ರಾಥಮಿಕ ಕೃಷಿ ಪತ್ತಿನ ಸಂಬಂಧಗಳು (PACS)**

ಈ ಸಂಘಗಳು ಕೆಳಹಂತದ ಸಹಕಾರಿ ಸಂಸ್ಥೆಗಳಾಗಿದ್ದು, ಇವುಗಳು ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ ಕಾರ್ಯನಿರ್ವಹಿಸುತ್ತಿವೆ. ಈ ಸಂಘಗಳು ಕೆಲ ಗ್ರಾಮಗಳನ್ನು ಅಥವಾ ಹಲವು ಸಣ್ಣ ಗ್ರಾಮಗಳ ಗುಂಪನ್ನು ತನ್ನ ಕಾರ್ಯಾಚರಣೆ ವ್ಯಾಪ್ತಿಯಲ್ಲಿ ಸೇರಿಸಿಕೊಂಡು ಸ್ಥಳೀಯ ಜನಪದರ ಏಳಿಗೆಗೋಸ್ಕರ ಕಾರ್ಯನಿರ್ವಹಿಸುವ ಸಂಸ್ಥೆಯಾಗಿದೆ. ಈ ಸಂಘಗಳ ಪ್ರಮುಖ ಕಾರ್ಯಗಳೆಂದರೆ ಗ್ರಾಮೀಣ ಜನರ ಪತ್ತಿನ ಅವಶ್ಯಕತೆಯನ್ನು ಈಡೇರಿಸುವುದು, ಅವರ ಠೇವಣಿಯನ್ನು ಉತ್ತೇಜಿಸುವುದು ಮತ್ತು ನೀಡಿದ ಪತ್ತಿನ ಹಣವನ್ನು ಅದೇ ಉದ್ದೇಶಕ್ಕೆ ಉಪಯೋಗವಾಗುವುದರ ಬಗ್ಗೆ ಮೇಲ್ವಿಚಾರಣೆ

ಮಾಡುವುದು ಆಗಿರುತ್ತದೆ. ಇವು ಪ್ರಾಥಮಿಕ ಹಂತದ ಸಂಸ್ಥೆಗಳಾಗಿರುವುದರಿಂದ, ರೈತರ ಜೊತೆ ನೇರ ಸಂಪರ್ಕ ಹೊಂದಿರುತ್ತವೆ. ಇವು ಕೃಷಿಕರಿಗೆ ಸಾಲ ನೀಡಿರುವುದಲ್ಲದೆ ನೀಡಿದ ಸಾಲವನ್ನು ಮರುವಸೂಲಿ ಮಾಡುವ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ.

ದುರಾದೃಷ್ಟವಶಾತ್ ಈ ಸಹಕಾರಿ ಸಂಸ್ಥೆಗಳು ತಮ್ಮ ಪ್ರಮುಖ ಕೆಲಸವಾದಂತಹ ಠೇವಣಿ ಸಂಗ್ರಹಿಸುವಲ್ಲಿ ವಿಫಲವಾದವು. ಇದಕ್ಕೆ ಹಲವಾರು ಕಾರಣಗಳಿವೆ. ಉದಾಹರಣೆಗೆ ವಾಣಿಜ್ಯ ಬ್ಯಾಂಕುಗಳು ಆಕರ್ಷಣೀಯ ರೀತಿಯಲ್ಲಿ ಠೇವಣಿಯ ಮೇಲೆ ಬಡ್ಡಿ ಧರವನ್ನು ನೀಡಲು ನಿರ್ಧರಿಸಿದವು. ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣದ ನಂತರ ಠೇವಣಿದಾರರ ವಿಮಾಸೇವೆಯನ್ನು ವಿಸ್ತರಿಸಿದ್ದರಿಂದ ದೊಡ್ಡ ಪ್ರಮಾಣದ ಠೇವಣಿದಾರರು ಯಾವುದೇ ಗಂಡಾಂತರಗಳನ್ನು ಅನುಭವಿಸದೇ ವಾಣಿಜ್ಯ ಬ್ಯಾಂಕುಗಳಲ್ಲಿ ಠೇವಣಿಯನ್ನಿಡಲು ಆರಂಭಿಸಿದರು. ಇದಕ್ಕೆ ವ್ಯತಿರಿಕ್ತವಾಗಿ ಪ್ರಾಥಮಿಕ ಸಹಕಾರಿ ಸಂಘಗಳಲ್ಲಿ ಮುದ್ದತಿ ಠೇವಣಿ ಕಾಲ ಮುಗಿದ ನಂತರವೂ ಠೇವಣಿದಾರನಿಗೆ ಹಣದ ಮರುಪಾವತಿಯನ್ನು ಮಾಡಲು ಸಾಧ್ಯವಾಗಲಿಲ್ಲ. ಆದ್ದರಿಂದ ಪ್ರಾಥಮಿಕ ಸಹಕಾರಿ ಸಂಘಗಳ ಠೇವಣಿಯ ಅಭಿವೃದ್ಧಿಯು ಗ್ರಾಮೀಣ ಭಾಗದಲ್ಲಿ ಸಾಧ್ಯವಾಗಲಿಲ್ಲ.[೧೦೬]

## ಪ್ರಾಥಮಿಕ ಸಹಕಾರಿ ಸಂಘಗಳ ಪ್ರಗತಿ

ಈ ಸಂಘಗಳ ಪ್ರಗತಿಯನ್ನು, ಅವುಗಳ ಹೊಂದಿರುವ ಸಂಖ್ಯೆ, ಸದಸ್ಯತ್ವದ ಕೃಷಿಕರ ಸಂಖ್ಯೆ, ಕಾರ್ಯಗತ ಬಂಡವಾಳಸಾಲ ಮತ್ತು ಠೇವಣಿಗಳ ಜೊತೆಗೆ ಪ್ರತಿಶತ ಬಾಕಿ ವಿವರಣೆಯನ್ನು ಪಟ್ಟಿ ೬ರ ಮೂಲಕ ತಿಳಿದುಕೊಳ್ಳಬಹುದು.



ಪಟ್ಟಿ ೬

ಪ್ರಾಥಮಿಕ ಸಹಕಾರಿ ಸಂಘಗಳ ಪ್ರಗತಿ

| ಕ್ರ.ಸಂ. | ವಿವರಗಳು | ೧೯೭೨-೭೩ | ೧೯೯೪-೯೫ | ೨೦೦೬-೦೭ |
|---|---|---|---|---|
| ೦೧. | ಸಹಕಾರಿ ಸಂಘಗಳ ಸಂಖ್ಯೆ | ೧,೫೭,೦೦೦ | ೯೫,೯೪೬ | ೧,೦೬,೩೭೬ |
| ೦೨. | ಸದಸ್ಯತ್ವದ ಸಂಖ್ಯೆ (ಲಕ್ಷಗಳಲ್ಲಿ) | ೩.೨೦ | ೧,೨೧೮ | ೧೨,೨೫,೬೯೧ |
| ೦೩. | ಕಾರ್ಯನಿರತ ಬಂಡವಾಳ (ಕೋಟಿ.ರೂ) | ೧೨.೭೬ | ೪೦,೯೭೬ | ೭೩,೩೮೬,೬೭ |
| ೦೪. | ಠೇವಣಿ ಮೊತ್ತ (ಕೋಟಿ.ರೂ) | ೭೫ | ೧೯,೮೨೫ | ೧,೯೫೬,೧೧೯ |
| ೦೫. | ಸಾಲದ ಪ್ರಮಾಣ (ಕೋಟಿ.ರೂ) | NA | ೨೬,೪೨೦ | ೩,೫೬೨,೩೫೪ |
| ೦೬. | ಬಾಕಿಯ ಪ್ರಮಾಣ | ೪೪ | ೫೩.೫೭ | NA |

ಆಧಾರ: ೧. ನಬಾರ್ಡ್-ರೂರಲ್ ಡವಲೆಪ್‌ಮೆಂಟ್ ಇನ್ ಇಂಡಿಯಾ ಸಮ್ ಆಸ್ಪೆಕ್ಟ್ಸ್, ಹೈದ್ರಾಬಾದ್, ೧೯೮೧, ಪುಟ.೮೨೯

೨. ನಬಾರ್ಡ್-ಕೋ-ಅಪರೇಟಿವ್ ಮೂಮೆಂಟ್ ಇನ್ ಇಂಡಿಯಾ, ೧೯೯೪-೯೫, ಮುಂಬೈ.

೩. ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೨೦೦೬-೦೭. ಆರ್‌ಬಿಐ ಪು.೩೮೫.

ಈ ಮೇಲಿನ ಪಟ್ಟಿಯಿಂದ ಕಂಡುಬರುವುದೇನೆಂದರೆ ಈ ಸಂಘಗಳ ಸಂಖ್ಯೆಯು ೧೯೭೨-೭೩ ರಿಂದ ೨೦೦೭ರ ಹೊತ್ತಿಗೆ ಇಳಿಮುಖವಾಗಿರುವುದನ್ನು ಕಾಣಬಹುದು. ಇದಕ್ಕೆ ಆರ್‌ಬಿಐನ ಸಂಯೋಜನಾ ನೀತಿ ಎನ್ನಬಹುದಾಗಿದೆ. ಆದರೆ ಅದೇ ಅವಧಿಯಲ್ಲಿ ಸದಸ್ಯತ್ವದ ಪ್ರಮಾಣ ಅತ್ಯಧಿಕವಾಗಿದೆ. ಕಾರ್ಯನಿರತ ಬಂಡವಾಳ ೧೯೭೨-೭೩ರಿಂದ ೨೦೦೬-೦೭ರ ವರೆಗೆ ಸುಮಾರು ಮೂರುಪಟ್ಟು ಹೆಚ್ಚಾಗಿರುವುದನ್ನು ಕಂಡುಕೊಳ್ಳಬಹುದು. ಪ್ರಾಥಮಿಕ ಸಹಕಾರಿ ಸಂಘಗಳು ನೀಡಿರುವ ಸಾಲದ ಪ್ರಮಾಣವು ೨೦೦೬ರ ವೇಳೆಗೆ ೩೫,೬೨೩ಕೋಟಿ ರೂಪಾಯಿಗಳಿಗೆ ಅಧಿಕವಾಗಿದೆ. ಬಾಕಿಯ ಪ್ರಮಾಣ ೧೯೭೨-೭೩ರಲ್ಲಿ ಪ್ರತಿಶತ ೪೪ರಷ್ಟು ಇದ್ದಿದು ೯೪-೯೫ರ ವೇಳೆಗೆ ೫೩-೫೭ರಷ್ಟಕ್ಕೆ ಅಧಿಕವಾಗಿರುವುದನ್ನು ಪಟ್ಟಿಯಲ್ಲಿ ಕಾಣಬಹುದು. ಬಾಕಿಯ ಪ್ರಮಾಣ ೭೨-೭೩ರಲ್ಲಿ ಕಡಿಮೆ ಇದ್ದು ೯೪-೯೫ರ ವೇಳೆಗೆ ಪ್ರತಿಶತ ೫೩.೫೭ ಅಧಿಕವಾಗಿರುವುದನ್ನು ಕಂಡಾಗ ಇದು ಅದರ ಅದಕ್ಷತೆಯನ್ನು ಸೂಚಿಸುತ್ತದೆ.

## ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕು

ಈ ಬ್ಯಾಂಕುಗಳು ಸಾಮಾನ್ಯವಾಗಿ ಜಿಲ್ಲಾ ಮುಖ್ಯ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಈ ಬ್ಯಾಂಕು ಜಿಲ್ಲೆಯಾದ್ಯಂತ ತನ್ನ ಶಾಖೆಗಳನ್ನು ಆರಂಭಿಸಿ ತನ್ನ ವ್ಯವಹಾರವನ್ನು ನಿರ್ವಹಿಸುತ್ತಿದೆ. ಅದರ ಪ್ರಗತಿಯನ್ನು ಪಟ್ಟಿ ೭ರ ಮೂಲಕ ನೋಡಬಹುದು.

### ಪಟ್ಟಿ ೭

### ಜಿಲ್ಲಾ ಕೇಂದ್ರದ ಸಹಕಾರಿ ಬ್ಯಾಂಕು

ಕೋಟಿ ರೂಪಾಯಿಗಳಲ್ಲಿ

| ವರ್ಷಗಳು | ಕೇಂದ್ರಗಳ ಸಂಖ್ಯೆ | ಕಛೇರಿಗಳ ಸಂಖ್ಯೆ | ಸ್ಥಿರ ಬಂಡವಾಳ | ಠೇವಣಿಗಳು | ಸಾಲ ಮತ್ತು ಮುಂಗಡಗಳು | ಬಾಕಿಯ ಪ್ರಮಾಣ |
|---|---|---|---|---|---|---|
| ೧೯೫೧-೫೨ | ೫೦೯ | ೭೭೯ | ೫.೦ | ೩೮.೦೦ | ೧೦೬ | ... |
| ೧೯೭೯-೮೦ | ೩೩೭ | ೭೨೭೫ | ... | ೨೦೦೦ | ೨೬೧೭ | ೪೦ |
| ೧೯೯೬-೯೭ | ೩೬೪ | ... | ... | ೩೦,೪೦೩ | ೨೯೯೫೭ | ೩೧ |
| ೨೦೦೦-೦೧ | ೩೬೯ | ... | ... | ... | ೫೬೫೬೦ | ... |
| ೨೦೦೫-೦೬ | ೩೬೬ | ... | ೨೩,೪೫೦ | ೮೭,೫೩೨ | ೭೩,೫೮೩ | ೬೯ |

...ಅಂಕಿ ಅಂಶಗಳು ದೊರಕಿರುವುದಿಲ್ಲ.

ಆಧಾರದ: ೧. ನಬಾರ್ಡ್-ಸ್ಟ್ಯಾಟಿಸ್ಟಿಕಲ್ ಸ್ಟೇಟ್‌ಮೆಂಟ್ ರಿಲೇಟಿಂಗ್ ಟು ಕೋ-ಆಪರೇಟಿವ್ ಮೂವ್‌ಮೆಂಟ್ ಇನ್, ಇಂಡಿಯಾ, ೧೯೭೯-೮೦.

೨. ಆರ್‌ಬಿಐ-ರಿಪೋರ್ಟ್ ಆನ್ ಟ್ರೆಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೨೦೦೬-೦೭, ಪು.೩೬೮.

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಜಿಲ್ಲಾ ಕೇಂದ್ರ ಬ್ಯಾಂಕುಗಳ ಸಂಖ್ಯೆ ೧೯೫೧-೫೨ ರಿಂದ ೨೦೦೬ರ ವೇಳೆಗೆ ಕಡಿಮೆಯಾಗಿರುವುದು ಕಂಡುಬರುತ್ತದೆ. ಠೇವಣಿಗಳ ಮೊತ್ತ ೩೮ ಕೋಟಿ ರೂಪಾಯಿಗಳಿದ್ದು, ೨೦೦೬ರ ವೇಳೆಗೆ ೮೭,೫೩೨ ಕೋಟಿ ರೂಪಾಯಿಗಳಿಗೆ ಅಧಿಕವಾಗಿದೆ. ಅದು ಪ್ರತಿಶತ ೯೦೦೦ಪಟ್ಟು ಅಧಿಕವಾಗಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು. ಸಾಲ ಮತ್ತು ಮುಂಗಡ ನೀಡಿಕೆ ೧೯೫೧-೫೨, ೧೦೬ ಕೋಟಿ ರೂಪಾಯಿಗಳಿದ್ದುದು ೨೦೦೬ ಜೂನ್ ವೇಳೆಗೆ ೭೩,೫೮೩ ಕೋಟಿ ರೂಪಾಯಿಗಳಿಗೆ ಹೆಚ್ಚಾಗಿರುವುದನ್ನು ಕಾಣಬಹುದು. ಅದೇ ರೀತಿ ಈ ಬ್ಯಾಂಕುಗಳ ಬಾಕಿ ಪ್ರಮಾಣವು ೧೯೭೦-೭೧ರಲ್ಲಿ ಪ್ರತಿಶತ ೩೬ರಷ್ಟು ಇದ್ದುದು, ೨೦೦೬ರ ವೇಳೆಗೆ ಪ್ರತಿಶತ ೬೯ ಹೆಚ್ಚಳವಾಗಿರುವುದನ್ನು ಪಟ್ಟಿಯ ಮೂಲಕ ಕಂಡುಕೊಳ್ಳಬಹುದು. ಅಂಶವು ಆ ಬ್ಯಾಂಕುಗಳ ಅದಕ್ಷತೆಯನ್ನು ಸೂಚಿಸುತ್ತದೆ.

### ರಾಜ್ಯ ಸಹಕಾರಿ ಬ್ಯಾಂಕುಗಳು

ಈ ಬ್ಯಾಂಕು ಮಹತ್ತರವಾದ ಸ್ಥಾನವನ್ನು ಪಡೆದಿದೆ. ರಾಜ್ಯ ಸಹಕಾರಿ ಬ್ಯಾಂಕ್ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಒಕ್ಕೂಟದಿಂದಾಗಿ ಆಯಾ ರಾಜ್ಯಗಳಲ್ಲಿ ಸ್ಥಾಪನೆಗೊಂಡಿವೆ. ದೇಶದ ಆರ್.ಬಿ.ಐ. ಮತ್ತು ನಬಾರ್ಡ್, ರಾಜ್ಯ ಸಹಕಾರ ಬ್ಯಾಂಕಿನ ಮೂಲಕ ಕೃಷಿಕರಿಗೆ ಬೇಕಾದ ಹಣಕಾಸಿನ ನೆರವನ್ನು ನೀಡುತ್ತವೆ. ರಾಜ್ಯ ಸಹಕಾರಿ ಬ್ಯಾಂಕು ಕೊರತೆಯಲ್ಲಿರುವ ಡಿಸಿಸಿ ಬ್ಯಾಂಕಿಗೆ ಬೇಕಾದ ಹಣಕಾಸಿನ ನೆರವನ್ನು ಅತಿ ಹೆಚ್ಚು ಸಂಪನ್ಮೂಲ ಹೊಂದಿರುವ ಡಿಸಿಸಿ ಬ್ಯಾಂಕಿನಿಂದ ವರ್ಗಾಯಿಸಿ ವಿವಿಧ ಜಿಲ್ಲಾ ಬ್ಯಾಂಕುಗಳ ನಡುವೆ ಇರಬೇಕಾದ ಸಮತೋಲನವನ್ನು ಸಾಧಿಸುತ್ತದೆ. ರಾಜ್ಯ ಸಹಕಾರ ಬ್ಯಾಂಕು ಸಾರ್ವಜನಿಕರಿಂದ ಮತ್ತು ಮುಕ್ತ ಹಣಕಾಸಿನ ಮಾರುಕಟ್ಟೆಯಿಂದ ಸಂಪನ್ಮೂಲ ವೃದ್ಧಿಸಿಕೊಂಡು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳ ಮೂಲಕ ಪ್ರಾಥಮಿಕ ಸಹಕಾರಿ ಬ್ಯಾಂಕುಗಳಿಗೆ ಹಣಕಾಸಿನ ನೆರವನ್ನು ನೀಡುತ್ತದೆ. ಅಂತಿಮವಾಗಿ ಪ್ರಾಥಮಿಕ ಸಹಕಾರಿ ಸಂಘಗಳು ಕೃಷಿಕರಿಗೆ ಅವಶ್ಯವಿರುವ ಹಣಕಾಸಿನ ನೆರವನ್ನು ಒದಗಿಸುತ್ತವೆ.

ಪಟ್ಟಿ ೮

ರಾಜ್ಯ ಸಹಕಾರಿ ಬ್ಯಾಂಕುಗಳ ಪ್ರಗತಿ

| ವರ್ಷಗಳು | ರಾ.ಸ.ಬ್ಯಾ | ಒಟ್ಟು | ಸಾಲ ಮುಂಗಡಗಳು | ಕೋಟಿ ರೂಗಳಲ್ಲಿ ಕಾರ್ಯಗತ |
|---|---|---|---|---|
| | ಸಂಖ್ಯೆ | ಠೇವಣಿಗಳು | | ಬಂಡವಾಳ |
| ೧೯೫೧-೫೨ | ೧೬ | ೨೧.೦೦ | ೫೫.೦೦ | ೨೫೦.೦೦ |
| ೧೯೭೯-೮೦ | ೨೭ | ೧೪೨೩.೦೦ | ೨೪೦೦ | ... |
| ೧೯೯೬-೯೭ | ೨೮ | ೧೭,೪೮೭ | ೨೮,೯೨೭ | ೨೮,೨೭೦ |
| ೨೦೦೫-೦೬ | ೩೧ | ೪೫,೪೦೫ | ೪೮,೨೬೦ | ೬೯,೧೪೦ |

... ಅಂಕಿ ಅಂಶಗಳು ದೊರೆತಿರುವುದಿಲ್ಲ.

ಆಧಾರ: ೧. ನಬಾರ್ಡ್-ಸ್ಟ್ಯಾಟಿಸ್ಟಿಕಲ್ ಟೇಬಲ್ಸ್ ರಿಲೇಟಿಂಗ್ ಟು ಕೊ-ಅಪರೇಟಿವ್ ಮೂಮೆಂಟ ಇನ್ ಇಂಡಿಯಾ ೧೯೭೦-೭೧, ೧೯೮೦-೮೧. ೨. ಆರ್‌ಬಿಐ ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ ೧೯೯೭, ೯೮, ೨೦೦೬.೦೮ ಪು.೩೬೮

ಮೇಲಿನ ಪಟ್ಟಿಯನ್ನು ಅವಲೋಕಿಸಿದಾಗ ೧೯೫೧-೫೨ರಲ್ಲಿ ೧೬ ರಾಜ್ಯ ಸಹಕಾರಿ ಬ್ಯಾಂಕುಗಳಿದ್ದುದು, ೨೦೦೫-೦೬ರ ವೇಳೆಗೆ ೩೧ಕ್ಕೆ ಅಧಿಕವಾಗಿದೆ. ಏಕೆಂದರೆ ಭಾರತ ಸರಕಾರವು ಹೊಸ ರಾಜ್ಯಗಳನ್ನು ಸ್ಥಾಪನೆ ಮಾಡಿದ ಪ್ರಯುಕ್ತ ಪ್ರತಿಯೊಂದು ರಾಜ್ಯವು ಒಂದು ಸಹಕಾರ ಬ್ಯಾಂಕನ್ನು ಹೊಂದಬೇಕಾಗಿರುವುದರಿಂದ ಇವುಗಳ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಅದೇ ಕಾಲಾವಧಿಯಲ್ಲಿ ಠೇವಣಿಯ ಮೊತ್ತ ೨೧ ಕೋಟಿ ರೂಪಾಯಿಗಳಿಂದ ೪೫,೫೦೫ ಕೋಟಿ ರೂಪಾಯಿಗಳಿಗೆ ಅಧಿಕವಾಗಿದೆ. ಅದು ಪ್ರತಿಶತ ೨೧೬೨ರಷ್ಟು ೫೫ ವರ್ಷಗಳ ಅವಧಿಯಲ್ಲಿ ಅಧಿಕವಾಗಿದೆ ಎನ್ನಬಹುದು. ಅದೇ ಕಾಲಾವಧಿಯಲ್ಲಿ ಸಾಲ ಮತ್ತು ಮುಂಗಡಗಳ ಪ್ರಮಾಣವು ೫೫ ಕೋಟಿ ರೂಪಾಯಿಗಳಿಂದ ೪೮,೨೬೦ಕೋಟಿ ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಕಾಣಬಹುದು. ಅದು ಪ್ರತಿಶತ ೮೭೭ರಷ್ಟು ಕಳೆದ ೫೫ ವರ್ಷಗಳಲ್ಲಿ ಅಧಿಕವಾಗಿರುವುದನ್ನು ಕಾಣಬಹುದು.

### ಧೀರ್ಘಕಾಲಾವಧಿ ಸಾಲ ನೀಡುವ ಸಹಕಾರ ಸಂಘಗಳು

ಕೃಷಿಕರಿಗೆ ಧೀರ್ಘಾವಧಿ ಸಾಲವನ್ನು ನೀಡುವುದಕ್ಕಾಗಿ ರಾಷ್ಟ್ರದಾದ್ಯಂತ ಎರಡು ಹಂತದ ಸಹಕಾರಿ ಸಂಸ್ಥೆಗಳು ಇರುತ್ತವೆ. ಮೊದಲನೆಯದಾಗಿ 'ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕು' ಅಥವಾ ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಆಗಿದ್ದು, ಇದು ಕೆಳಗಿನ ಹಂತದ ಬ್ಯಾಂಕಾಗಿದ್ದರೆ, 'ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು' ಅಥವಾ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ದೀರ್ಘಾವಧಿ ಸಾಲ ನೀಡುವ ಬ್ಯಾಂಕು ಆಗಿರುತ್ತವೆ.

**ಪಟ್ಟಿ ೯**

**ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕಿನ ಪ್ರಗತಿ**

| ವಿವರಗಳು | ೧೯೫೧-೫೨ | ೧೯೬೯-೭೦ | ೧೯೭೯-೮೦ | ೧೯೯೪-೯೫ | ೨೦೦೫-೦೬ |
|---|---|---|---|---|---|
| ಬ್ಯಾಂಕುಗಳ ಸಂಖ್ಯೆ | ೨೮೯ | ೮೦೯ | ೮೯೬ | ೭೫೭ | ೬೯೬ |
| ಷೇರು ಬಂಡವಾಳ | ೦.೫೮ | ೮೪ | ೯೩ | .... | .... |
| ಸಾಲ ಮುಂಗಡಗಳು ಕೋ.ರೂ. | ೧.೩೦ | ೧೧೩.೨೨ | ೨೦೫.೦೦ | ೬೫೧ | ೨೨೫೪ |
| ಕಾರ್ಯಗತ ಬಂಡವಾಳ ಕೋ.ರೂ. | ೭.೫೯ | ೪೦೪.೦೦ | ೧೧೩೦.೦೦ | ೩೪೧೬ | ೧೬,೮೫೬ |

... ಅಂಕಿ ಅಂಶಗಳು ದೊರೆತಿರುವುದಿಲ್ಲ.

ಆಧಾರ: ಆರ್.ಬಿ.ಐ, ಸ್ಟ್ಯಾಟಿಸ್ಟಿಕಲ್ ಸ್ಟೇಟ್‌ಮೆಂಟ್ ರಿಲೇಟಿಂಗ್, ಕೊ-ಆಪರೇಟಿವ್ ಮೂಮೆಂಟ್ ಇನ್-ಇಂಡಿಯಾ ೧೯೬೯-೭೦, ೧೯೭೯-೮೦ ನಬಾರ್ಡ್ ಆರ್‌ಬಿಐ ಕೋ ಆಪರೇಟಿವ್ ಮೂಮೆಂಟ್ ಇನ್ ಇಂಡಿಯಾ, ೧೯೯೪-೯೫, ಪುಟ-XV ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೨೦೦೬-೦೭.

ಮೇಲಿನ ಪಟ್ಟಿಯನ್ನು ನೋಡಿದಾಗ ಬ್ಯಾಂಕುಗಳ ಸಂಖ್ಯೆ ೧೯೫೦-೫೨ರಲ್ಲಿ ೨೮೯ ಆಗಿದ್ದು, ೯೪-೯೫ರ ವೇಳೆಗೆ ೭೯೬ಕ್ಕೆ ಅಧಿಕವಾಗಿರುವುದನ್ನು ಕಾಣಬಹುದು. ಸಾಲ ಮತ್ತು ಮುಂಗಡಗಳ ನೀಡಿಕೆ ಪ್ರಮಾಣ ೧೯೫೦.೫೧ರಲ್ಲಿ ೧.೩೦ ಕೋಟಿ ರೂಪಾಯಿಗಳಿದ್ದುದು ೯೪-೯೫ರ ವೇಳೆಗೆ ೬೫೧ ಕೋಟಿ ರೂಪಾಯಿಗಳಿಗೆ ಸುಮಾರು ೬ ಪಟ್ಟು ಹೆಚ್ಚಾಗಿರುವುದನ್ನು ಪಟ್ಟಿಯ ಮೂಲಕ ತಿಳಿದುಕೊಳ್ಳಬಹುದು. ೧೯೯೪-೯೫, ೬೫೧ ಕೋಟಿ ರೂಪಾಯಿಗಳಿದ್ದುದು, ೨೦೦೫-೦೬ರಲ್ಲಿ ೨,೨೫೪ಕೋಟಿ ರೂಪಾಯಿಗಳಿಗೆ ಅಧಿಕವಾಗಿದ್ದು, ಅದು ೩.೪೬ರಷ್ಟು ಪ್ರತಿಶತ ಪ್ರಮಾಣದಷ್ಟು ಅಧಿಕವಾಗಿರುವುದನ್ನು ಕಾಣಬಹುದು. ಅದೇ ಅವಧಿಗೆ ಕಾರ್ಯಗತ ಬಂಡವಾಳ ೨.೨೨ಪಟ್ಟು ಅಧಿಕವಾಗಿರುವುದನ್ನು ಪಟ್ಟಿಯು ತಿಳಿಸುತ್ತದೆ.

ಈ ಬ್ಯಾಂಕುಗಳು ನೇರವಾಗಿ ಅಥವಾ ಶಾಖೆಗಳ ಮೂಲಕ ಕಾರ್ಯನಿರ್ವಹಿಸುತ್ತವೆ. ದೇಶದಾದ್ಯಂತ ವಿವಿಧ ರಾಜ್ಯಗಳಲ್ಲಿ ವಿವಿಧ ಪ್ರಕಾರದ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು ಕಾರ್ಯನಿರ್ವಸುತ್ತವೆ. ಅದರ ಪ್ರಗತಿಯ ಪಟ್ಟಿ೧ನ್ನು ಈ ಕೆಳಗೆ ನೋಡಬಹುದಾಗಿದೆ.

**ಪಟ್ಟಿ ೧೦**

**ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕಿನ ಪ್ರಗತಿ ಪಟ್ಟಿ**

| ವಿವರಗಳು | ೧೯೫೦-೫೨ | ೧೯೬೮-೬೯ | ೧೯೭೯-೮೦ | ೧೯೯೬-೯೭ | ೨೦೦೫-೦೬ |
|---|---|---|---|---|---|
| ಬ್ಯಾಂಕುಗಳ ಸಂಖ್ಯೆ | ೬ | ೧೯ | ೧೯ | ೧೯ | ೨೦ |
| ಸದಸ್ಯರ ಸಂಖ್ಯೆ | ೦.೩೪ | ೧೧.೭ | ೨೬.೫೦ | .. | .. |
| ಷೇರು ಬಂಡವಾಳ (ಕೋಟಿ ರೂಗಳಲ್ಲಿ) | ೦.೪೪ | ೩೦.೯ | ೧೪.೩ | .. | .. |
| ಕಾರ್ಯಗತ ಬಂಡವಾಳ (ಕೋಟಿ ರೂಗಳಲ್ಲಿ) | ೧೦.೧೭ | ೪೮೮.೧೯ | ೨೩೫೪.೦೦ | ೯೯೯೧ | ೨೩,೬೨೫ |
| ಸಾಲಗಳು | ೨.೫೧ | ೧೦೩.೬೨ | ೩೦೮ | ೨,೧೫೧ | ೨,೯೦೭ |

ಆಧಾರ: ಆರ್.ಬಿ.ಐ, ನಬಾರ್ಡ್ ಸ್ಟ್ಯಾಟಸ್ಟಿಕಲ್ ಸ್ಟೇಟ್‌ಮೆಂಟ್ಸ್ ರಿಲೇಟಿಂಗ್ ಟು ಕೋ-ಅಪರೇಟಿವ್ ಮೂಮೆಂಟ್ ಇನ್ ಇಂಡಿಯಾ, ೧೯೬೯-೭೦, ೧೯೭೯-೮೦ ಬಾಂಬೆ. ರಿಪೋರ್ಟ್ ಆನ್ ಟ್ರೆಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ ೧೯೯೭-೯೮, ಪು.೧೭೮, ೨೦೦೬-೦೭, ಪುಟ.೩೬೯

ಈ ಮೇಲಿನ ಪಟ್ಟಿಯನ್ನು ಪರಿಶೀಲಿಸಿದಾಗ ರಾಜ್ಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಸಂಖ್ಯೆ ೧೯೫೧-೫೨ರಲ್ಲಿ ೬ ಇದ್ದುದು ೧೯೯೬-೯೭ರ ವೇಳೆಗೆ ೧೯ಕ್ಕೆ ಹಾಗೆಯೇ ೨೦೦೫-೦೬ರ ವೇಳೆಗೆ ಬ್ಯಾಂಕುಗಳ ಸಂಖ್ಯೆ ೨೦ಕ್ಕೆ ಹೆಚ್ಚಾಗಿದೆ. ಸಾಲಗಳ ಪ್ರಮಾಣವು ೧೯೫೧-೫೨ರಲ್ಲಿ ೨.೫೧ ಕೋಟಿ ಇದ್ದುದು ೧೯೯೬.೯೭ರ ವೇಳೆಗೆ ೨.೧೫೧ಕೋಟಿ ರೂಪಾಯಿಗಳು ಹಾಗೂ ೨೦೦೫-೦೬ಕ್ಕೆ

೨,೯೦೭ಕೋಟಿ ರೂಪಾಯಿಗಳಿಗೆ ಹೆಚ್ಚಾಗಿದೆ. ೧೯೫೧-೫೨ ರಿಂದ ೯೭ರ ವೇಳೆಗೆ ಪ್ರತಿಶತ ೮೫೬ಕ್ಕೆ ಹೆಚ್ಚಾಗಿದೆ. ೯೭ ರಿಂದ ೨೦೦೬-೦೭ರ ವರೆಗೆ ಪ್ರತಿಶತ ೧.೩೫ರಷ್ಟು ಅಧಿಕವಾಗಿರುವುದನ್ನು ಕಾಣಬಹುದು.

### ದುರ್ಬಲ ವರ್ಗದ ಜನರಿಗೆ ಸಹಕಾರಿ ಬ್ಯಾಂಕುಗಳು ನೀಡಿದ ಸಾಲದ ಪ್ರಮಾಣ

ಪ್ರಾಥಮಿಕ ಸಹಕಾರಿ ಸಂಘಗಳ ಹಂತದಿಂದ ರಾಜ್ಯ ಅಪೆಕ್ಸ್ ಬ್ಯಾಂಕ ಹಂತದವರೆಗಿನ ಸಹಕಾರಿ ಸಂಸ್ಥೆಗಳ ಆಡಳಿತವು ಪಟ್ಟಭದ್ರ ಹಿತಾಸಕ್ತಿ ಅಥವಾ ಬಲಾಢ್ಯತೆಯನ್ನು ಹೊಂದಿರುವ ಜನರ ಕೈಯಲ್ಲಿ ಇರುವುದು ಒಂದು ವಿಶೇಷ ಅಂಶವಾಗಿದೆ. ಈ ಸಹಕಾರಿ ಸಂಸ್ಥೆಗಳಲ್ಲಿ ಇರುವಂತಹ ಸದಸ್ಯರು ಬಹುತೇಕವಾಗಿ ದೊಡ್ಡಕೃಷಿಕರು, ಜಮೀನ್ದಾರರು ಮತ್ತು ಅವರ ಸಂಬಂಧಿಕರು ಆಗಿರುತ್ತಾರೆ. ದುರ್ಬಲ ವರ್ಗಕ್ಕೆ ಸೇರಿದ ಸಣ್ಣ/ಅತಿಸಣ್ಣ ರೈತರು, ಕೃಷಿ ಕಾರ್ಮಿಕರು, ಕುಶಲ ಕರ್ಮಿಗಳು ಮತ್ತು ಇತರ ದುರ್ಬಲ ವರ್ಗದ ಜನರು ಇಂತಹ ಸಹಕಾರಿ ಪತ್ತಿನ ರಚನೆಯಲ್ಲಿ ಅಲ್ಪಸದಸ್ಯತ್ವವನ್ನು ಹೊಂದಿರುವುದು ಕಂಡುಬರುತ್ತದೆ. ದೊಡ್ಡ ರೈತರು, ಜಮೀನ್ದಾರರು, ಗ್ರಾಮೀಣ ಭಾಗದ ಬಡಜನರನ್ನು ಜೀತ ಪದ್ಧತಿಯಡಿಯಲ್ಲಿ ಕೆಲಸಕ್ಕೆ ಸೇರಿಸಿಕೊಂಡು, ವಾರ್ಷಿಕ ಅಥವಾ ಮಾಸಿಕ ಅಲ್ಪವೇತನವನ್ನು ಕೊಡುವ ಪದ್ದತಿಯನ್ನು ಅನುಸರಿಸುತ್ತಿದ್ದರು. ದೊಡ್ಡ ರೈತರ ಪ್ರಕಾರ ಜೀತದಡಿಯಲ್ಲಿ ಕೆಲಸ ಮಾಡುವಂತಹ ಜನರನ್ನು ಆರ್ಥಿಕವಾಗಿ ಸ್ವತಂತ್ರಗೊಳಿಸಿದಲ್ಲಿ, ಅವರ ಕೃಷಿಕೆಲಸದ ಅಥವಾ ಸೇವೆಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರಬಹುದು ಮತ್ತು ಅವರಿಗೆ ಅಧಿಕ ಕೂಲಿಯನ್ನು ಕೊಡಬೇಕಾಗಬಹುದು ಎನ್ನುವಂತಹ ನಿರ್ಧಾರ[೧೦೯] ಮಾಡಿದ್ದರು. ಇಂತಹ ದೊಡ್ಡ ರೈತರ ಮತ್ತು ಪಟ್ಟಭದ್ರ ಹಿತಾಸಕ್ತಿಗಳ ಅಭಿಪ್ರಾಯವನ್ನು ಪರಿಗಣಿಸಿರುವುದರ ಹಿನ್ನೆಲೆಯಲ್ಲಿ ದುರ್ಬಲವರ್ಗದ ಜನರಿಗೆ ಗ್ರಾಮೀಣ ಭಾಗದ ಪ್ರಾಥಮಿಕ ಸಹಕಾರ ಸಂಘಗಳಲ್ಲಿ ಸದಸ್ಯತ್ವ ಹೊಂದಲಿಕ್ಕೆ ಇವರಿಗೆ ಅವಕಾಶ ದೊರೆಯಲಿಲ್ಲ. ಹಲವಾರು ಸಮಿತಿಗಳ ವರದಿಗಳು (ಸಮೀಕ್ಷಾ ವರದಿ ೧೯೫೪, ರಿವ್ಯೂ ಕಮಿಟಿ ೧೯೬೯) ಗ್ರಾಮೀಣ ನಿವಾಸಿಗಳ ಸಹಕಾರಿ ಸಂಸ್ಥೆಗಳು ನೀಡಿದಂತಹ ಪತ್ತಿನ ಪ್ರಮಾಣ ಬಹಳ ಕಡಿಮೆ ಇದ್ದಿತೆಂದು ವರದಿ ಮಾಡಿವೆ. ಉದಾಹರಣೆಗೆ ೧೯೫೧-೫೨, ೧೯೬೧-೬೨, ೧೯೭೧-೭೨ರಲ್ಲಿ ಅನುಕ್ರಮವಾಗಿ ೨.೯೧, ೧೩.೮, ೨೦.೧ರಷ್ಟು ಇದ್ದಿತು ಎಂದು ಈ ಮೊದಲೇ ತಿಳಿದುಕೊಂಡಿದ್ದೇವೆ. ಇದರಿಂದ ಕಂಡುಬರುವುದೇನೆಂದರೆ ಸಹಕಾರಿ ಸಂಸ್ಥೆಗಳು ನೀಡುವ ಬಹುತೇಕ ಪತ್ತಿನ ಪಾಲನ್ನು ಶ್ರೀಮಂತರು, ಜಮೀನ್ದಾರರು, ದೊಡ್ಡ ರೈತರು ಇನ್ನೂ ಮುಂತಾದವರು ಪಡೆದಿರುವುದನ್ನು ಕಾಣಬಹುದು.

೧೯೫೪ರಲ್ಲಿ ಅಖಿಲ ಭಾರತ ಪತ್ತಿನ ಸಮೀಕ್ಷಾ ವರದಿಯ ಪ್ರಕಾರ ದೊಡ್ಡ ರೈತ ಜನಪದರು ಸರಾಸರಿ ರೂಪಾಯಿ ೨೪ ಪತ್ತನ್ನು ಪಡೆದಿದ್ದಾರೆ. ಮಧ್ಯಮ ಪ್ರಮಾಣದ ರೈತರು ಸರಾಸರಿ ೪.೭ ರೂಪಾಯಿಗಳ ಪತ್ತನ್ನು ಮತ್ತು ಸಣ್ಣ ಹಿಡುವಳಿದಾರರು ಸರಾಸರಿ ಕೇವಲ ೧.೯ ರೂಪಾಯಿಗಳಷ್ಟು ಪತ್ತನ್ನು ಪಡೆದಿದ್ದಾರೆಂದು ವರದಿ ಮಾಡಿದೆ.[೧೧೦] ಈ ಅಂಕಿ ಅಂಶಗಳಿಂದ ತಿಳಿದು ಬರುವುದೇನೆಂದರೆ

ಸಹಕಾರಿ ಸಂಸ್ಥೆಗಳ ಬಹುತೇಕ ಪತ್ತಿನ ಪಾಲನ್ನು ದೊಡ್ಡ ಹಿಡುವಳಿದಾರರು ಹೊಂದಿದ್ದಾರೆಂದು ತಿಳಿದುಬರುತ್ತದೆ.

ಸಹಕಾರಿ ಪತ್ತಿನ ಸಂಸ್ಥೆಗಳು ಸಾಲ ನೀಡಬೇಕಾದರೆ ಭೂಮಿಯನ್ನೇ ಭದ್ರತೆಯನ್ನಾಗಿಕೊಂಡು ಉತ್ಪಾದಕ ಉದ್ದೇಶಕ್ಕೆ ಸಾಲವನ್ನು ಕೊಡುತ್ತಿದ್ದವು. ಆದರೆ ದುರ್ಬಲ ವರ್ಗಕ್ಕೆ ಸೇರಿದ ಜನಪದರಿಗೆ ಭೂಮಿಯನ್ನಾಗಲಿ ಅಥವಾ ಬೆಲೆಯುಳ್ಳ ವಸ್ತುಗಳನ್ನು ಹೊಂದಿರದ ಪ್ರಯುಕ್ತ ಇವರು ಸಹಕಾರಿ ಸಂಸ್ಥೆಗಳಿಂದ ಸಾಲ ಪಡೆಯಲು ಅನರ್ಹರು ಎಂದು ಪರಿಗಣಿಸಲಾಗುತ್ತಿತ್ತು. ದುರ್ಬಲ ವರ್ಗಕ್ಕೆ ಸೇರಿದ ಜನರು ಪತ್ತನ್ನು ಬಹುತೇಕ ಉಪಭೋಗಕ್ಕಾಗಿ ಬೇಡುತ್ತಿದ್ದರು. ಸಹಕಾರಿ ಸಂಸ್ಥೆಗಳು ಉಪಭೋಗವನ್ನು ಅನುತ್ಪಾದಕ ಉದ್ದೇಶವೆಂದು ಪರಿಗಣಿಸಿದ್ದರಿಂದ ದುರ್ಬಲ ವರ್ಗದ ಜನಪದರಿಗೆ ಈ ಸಂಸ್ಥೆಗಳು ಪತ್ತಿನ ವ್ಯಾಪ್ತಿಯಿಂದ ದೂರ ಇಟ್ಟು, ಕೇವಲ ದೊಡ್ಡ ಮತ್ತು ಪಟ್ಟಭದ್ರ ಹಿತಾಸಕ್ತಿ ರೈತರಿಗೆ ಸಾಲ ಸಿಗುವಂತೆ ಸಹಕಾರಿ ವ್ಯವಸ್ಥೆ ರಚನೆಯಾಗಿತ್ತು.[೧೦೯]

**ಹೆಚ್ಚುತ್ತಿರುವ ಸಹಕಾರಿ ಸಂಘಗಳ ಬಾಕಿ ಪ್ರಮಾಣ**

ವಿವಿಧ ಹಂತದ ಸಹಕಾರಿ ಸಂಸ್ಥೆಗಳಲ್ಲಿ ಬಾಕಿಯ ಪ್ರಮಾಣ ಹೆಚ್ಚುತ್ತಿರುವುದನ್ನು ಭಾರತ ಸರ್ಕಾರ, ಆರ್.ಬಿ.ಐ., ರಾಜ್ಯ ಸರ್ಕಾರಗಳು, ಸಹಕಾರಿ ಸಂಸ್ಥೆಗಳು ಸಹ ಗಂಭೀರವಾಗಿ ಆಲೋಚಿಸಿ ಇದರಿಂದ ಆಗುವಂತಹ ದುಷ್ಪರಿಣಾಮದ ಬಗ್ಗೆ ಚಿಂತನೆ ನಡೆಸಿದವು.

ಸಹಕಾರಿ ಸಂಸ್ಥೆಗಳಲ್ಲಿ ಬಾಕಿಯ ಪ್ರಮಾಣ ಹೆಚ್ಚುತ್ತಿರುವುದಕ್ಕೆ ಪ್ರತಿವರ್ಷ ಬಾಕಿದಾರರ ಸಂಖ್ಯೆ ಹೆಚ್ಚಾಗುತ್ತಿರುವುದು ಪ್ರಮುಖ ಕಾರಣವಾಗಿತ್ತು. ಬಾಕಿದಾರರು ಎಂದರೆ ಪಡೆದಂತಹ ಸಾಲವನ್ನು ನಿಗದಿ ಪಡಿಸಿದ ಅವಧಿಯೊಳಗೆ ಮರುಪಾವತಿ ಮಾಡದೇ ಇರುವವರನ್ನು ಬಾಕಿದಾರರು ಎಂದು ಪರಿಗಣಿಸಲಾಯಿತು.[೧೧೦] ಈ ರೀತಿಯ ಬಾಕಿಯನ್ನು ಉಳಿಸಿಕೊಳ್ಳಲಿಕ್ಕೆ ಹಲವಾರು ಕಾರಣಗಳು ಇರುತ್ತಿದ್ದವು. ಉದಾಹರಣೆಗೆ ಬೆಳೆನಷ್ಟ ಅಥವಾ ಹವಮಾನ ವೈಪರೀತ್ಯ, ಮೇಲ್ವಿಚಾರಣೆಯ ಕೊರತೆ, ಆಡಳಿತ ವರ್ಗದ ಅತೃಪ್ತಿಕರ ಆಡಳಿತ ಬೆಳೆದಂತಹ ಬೆಳೆಗೆ ಕಡಿಮೆ ಬೆಲೆ ಆರ್ಥಿಕ ಮತ್ತು ಸಾಮಾಜಿಕ ಹಿಂದುಳಿಯುವಿಕೆ ಇತ್ಯಾದಿ ಕಾರಣಗಳು ಇರುತ್ತಿದ್ದವು. ಆದರೆ ಸಹಕಾರಿ ಸಂಸ್ಥೆಗಳಲ್ಲಿ ಇರುವಂತಹ ಬಾಕಿದಾರರು ಉದ್ದೇಶಿತ ಬಾಕಿದಾರರು ಎಂದು ಪರಿಗಣಿಸಲಾಗಿತ್ತು.

ಉದ್ದೇಶಿತ ಬಾಕಿದಾರರೆಂದರೆ ಅವರಿಗೆ ಸಾಲ ಮರುಪಾವತಿ ಸಾಮರ್ಥ್ಯವಿದ್ದರೂ ಮರುಪಾವತಿ ಮಾಡಲು ಮನಸ್ಸಿಲ್ಲದಿರುವುದು ಎಂದು ಗುರುತಿಸಲಾಗಿತ್ತು. ಇಂತಹ ಬಾಕಿದಾರರು ಬಹುತೇಕವಾಗಿ ಜಮೀನ್ದಾರರು, ಶ್ರೀಮಂತ ರೈತರು ಆಗಿರುತ್ತಿದ್ದರು. ಜೊತೆಗೆ ನೀರಾವರಿ ಪ್ರದೇಶಗಳಲ್ಲಿ ವಾಸಿಸುವಂತಹವರು ಆಗಿರುತ್ತಿದ್ದರು. ಇವರು ಬಹುತೇಕವಾಗಿ ಸಹಕಾರಿ ಸಂಸ್ಥೆಗಳಿಂದ ಕಡಿಮೆ ಬಡ್ಡಿಗೆ ಸಾಲವನ್ನು ತಂದು ಅಧಿಕ ಬಡ್ಡಿಗೆ ವಾಣಿಜ್ಯ ಬ್ಯಾಂಕುಗಳಲ್ಲಿ ಠೇವಣಿಯಾಗಿಡುತ್ತಿದ್ದರು. ಸಹಕಾರಿ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು ನೀಡುವ ಬಡ್ಡಿಯ ವ್ಯತ್ಯಾಸವೇ ಅವರ ಆದಾಯದ ಮೂಲವಾಗಿದ್ದಿತು.

ಏಕೆಂದರೆ ಸಹಕಾರಿ ಸಂಸ್ಥೆಗಳಲ್ಲಿ ನೀಡಿರುವ ಸಾಲವನ್ನು ಉದ್ದೇಶಕ್ಕೆ ಉಪಯೋಗಿಸಿದ್ದರೋ ಇಲ್ಲವೋ ಎಂಬುದನ್ನು ಕಂಡುಕೊಳ್ಳಲಿಕ್ಕೆ ಮೇಲ್ವಿಚಾರಣೆ ಇರಲಿಲ್ಲ.[೧೧೧]

ಕೆಲವು ಸಹಕಾರಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರಿ ಸಂಘಗಳು ಬಾಕಿದಾರರಿಗೂ ಸಹ ಸಾಲ ನೀಡುವಂತಹ ಕೆಟ್ಟ ಪದ್ಧತಿಯನ್ನು ಅನುಸರಿಸುತ್ತಾ ಬಂದವು. ಬಾಕಿದಾರರಿಗೆ ತಾವೂ ಬಾಕಿದಾರರಿದ್ದೂ, ಸಹಕಾರಿ ಸಂಸ್ಥೆಗಳಿಂದ ಹೊಸ ಸಾಲ ಸಿಗುತ್ತದೆ ಎನ್ನುವಂತಹ ಸ್ಥಿತಿಯನ್ನು ಸಹಕಾರಿ ಸಂಸ್ಥೆಗಳಲ್ಲಿ ನಿರ್ಮಾಣ ಮಾಡಿದ್ದರು. ಇದರಿಂದ ಬಾಕಿದಾರರು ತಮ್ಮ ಬಾಕಿಯನ್ನು ವಾಪಸ್ಸು ಕೊಡುವ ಅಗತ್ಯವಿಲ್ಲ ಎನ್ನುವಂತಹ ಮಾನಸಿಕ ನಿರ್ಧಾರಕ್ಕೆ ಬಂದಿದ್ದರು. ಇಂತಹ ಪರಿಸ್ಥಿತಿ ಸಹಕಾರ ಕ್ಷೇತ್ರದಲ್ಲಿ ಇದ್ದ ಪ್ರಯುಕ್ತ ಪಡೆದಂತಹ ಸಾಲವನ್ನು ಮರುಪಾವತಿ ಮಾಡುವ ಸಾಮಾರ್ಥ್ಯವಿದ್ದರೂ ಸಹ ಬಾಕಿಯನ್ನು ಸೃಷ್ಟಿಸುವ ಮನೋಭಾವಕ್ಕೆ ಬಂದಿದ್ದರು.[೧೧೨]

ಆರ್.ಬಿ.ಐ., ಸಹಕಾರಿ ಸಂಘಗಳ ಬಾಕಿಯ ಅಧ್ಯಯನಕ್ಕಾಗಿ 'ಅಧ್ಯಯನ ವೃಂದ'ವನ್ನು ನೇಮಿಸಿತ್ತು. ಈ ಸಮಿತಿ ೧೯೭೪ರಲ್ಲಿ ತನ್ನ ವರದಿಯನ್ನು ಆರ್.ಬಿ.ಐ.ಗೆ ಸಲ್ಲಿಸಿತು. ಈ ವರದಿಯಲ್ಲಿ ಸಮಿತಿಯು ಪ್ರಾಥಮಿಕ ಹಂತದ ಸಹಕಾರಿ ಸಂಸ್ಥೆಗಳಲ್ಲಿ ಬಾಕಿಯ ಪ್ರಮಾಣ ೧೯೬೭-೬೮ರಲ್ಲಿ ಪ್ರತಿಶತ ೩೨, ೧೯೬೯-೭೦ರಲ್ಲಿ ೩೮ರಷ್ಟು ಜೂನ್ ೧೯೭೨ರ ವೇಳೆಗೆ ಪ್ರತಿಶತ ೪೪ರಷ್ಟಕ್ಕೆ ಹೆಚ್ಚಾಗಿದ್ದಿತು ಎಂದು ಅಭಿಪ್ರಾಯಪಟ್ಟಿತು.[೧೧೩] ಇದರಲ್ಲಿ ೩/೪ ಅಂಶದಷ್ಟು ಬಾಕಿಯನ್ನು ಉದ್ದೇಶಿತ ಬಾಕಿದಾರರು ಹೊಂದಿದ್ದರು. ಇದಕ್ಕೆ ಸಹಕಾರಿ ಸಂಸ್ಥೆಗಳ ಸಾಲ ನೀಡುವ ನೀತಿಯಲ್ಲಿ ದೋಷಗಳಿದ್ದುದೇ ಪ್ರಮುಖ ಕಾರಣವಾಗಿದೆ. ಹಾಗೆಯೇ ಆಡಳಿತ ಮಂಡಳಿ ಇಂತಹ ಬಾಕಿದಾರರ ವಿರುದ್ಧ ಯಾವುದೇ ಕ್ರಮಕೈಗೊಳ್ಳದಿರುವುದು, ಇಂತಹ ಪರಿಸ್ಥಿತಿ ನಿರ್ಮಾಣವಾಗುವುದಕ್ಕೆ ಕಾರಣ ಎಂದು ಸಮಿತಿ ಅಭಿಪ್ರಾಯ ಪಟ್ಟಿತು.[೧೧೪] ಇದಲ್ಲದೇ ಸಮಿತಿ ಸಹಕಾರಿ ಸಂಸ್ಥೆಗಳಲ್ಲಿ ಬೇರೂರಿರುವಂತಹ ಅನೇಕ ವಂಚನೆಯ ಪ್ರಕರಣಗಳನ್ನು ಉಲ್ಲೇಖಿಸಿ ವರದಿ ಸಲ್ಲಿಸಿತು.[೧೧೫]

**ಸಹಕಾರಿ ಸಂಘಗಳ ವಿಫಲತೆ**

೧. ಸದಸ್ಯರ ಬಡತನ, ಸಹಕಾರಿ ಸಂಘಗಳು ಸಹ ಪ್ರಾಯೋಜಿತ ಎಂಬಂತೆ ನಂಬಿಕೆಯಿಂದ ಹಾಗೂ ದುಡಿಯುವ ಬಂಡವಾಳಕ್ಕೆ ಸದಸ್ಯರ ಕೊಡುಗೆ ಬಹಳ ಕಡಿಮೆ.

೨. ಬಾಹ್ಯ ಸಂಪನ್ಮೂಲ ಮೇಲೆ ಅವಲಂಬನೆ ಜಾಸ್ತಿ.

೩. ಸಹಕಾರ ಸಂಘಗಳಲ್ಲಿ ರಾಜಕೀಯ ಹಸ್ತಕ್ಷೇಪ

೪. ವೃತ್ತಿ ಪರತೆಯಿಲ್ಲದ ನಿರ್ವಹಣೆ ಮತ್ತು ಸ್ಪರ್ಧೆ.

೫. ಇವುಗಳ ಸುಧಾರಣೆಗೆ ಭಾರತ ಸರ್ಕಾರದ ಹಲವಾರು ಸಮಿತಿಗಳ ರಚನೆ

೧೯೫೦-೫೧ರಲ್ಲಿ ಗೋರವಾಲ್ ಸಮಿತಿ

೧೯೮೭ ಅರ್ಧನಾರೀಶ್ವರ ಸಮಿತಿ

೧೯೮೯ ಖುದ್ರೋ ಸಮಿತಿ

೧೯೯೯ ಜಗದೀಶ ಕಪೂರ ಸಮಿತಿ

ಈ ಎಲ್ಲಾ ಸಮಿತಿಗಳು ಸಹಕಾರ ಸಂಘಗಳ ಸುಧಾರಣೆಗೆ ಹಲವಾರು ಅಂಶಗಳ ಶಿಫಾರಸ್ಸು ಮಾಡಿದ್ದಾರೆ.

೧. ಉಳಿತಾಯಕ್ಕೆ ಪ್ರಚೋದನೆ ನೀಡಿ ಠೇವಣಿ ಸಂಗ್ರಹಕ್ಕೆ ಒತ್ತು ನೀಡುವುದು.

೨. ಈ ಸಂಘಗಳಲ್ಲಿನ ನೇಮಕ ಹಾಗೂ ತರಬೇತಿ ನೀತಿಗಳನ್ನು ಬದಲಿಸುವುದು.

೩. ವ್ಯವಹಾರ ನಿರ್ವಹಣೆಯಲ್ಲಿ ವೃತ್ತಿಪರತೆಯನ್ನು ರೂಡಿಸಿಕೊಳ್ಳುವುದು.

೪. ಬಾಹ್ಯಸಂಸ್ಥೆಗಳ ಅವಲಂಬನೆ ಕಡಿಮೆ ಮಾಡುವುದು.

೫. ಆಡಳಿತ ಮಂಡಳಿಗೆ ಸರ್ಕಾರಿ ನಾಮಕರಣ ನಿಲ್ಲಿಸುವುದು.

೬. ಆಂತರಿಕ ಮುಂದಾಳತ್ವವನ್ನು ಪ್ರೋತ್ಸಾಹಿಸುವುದು.

೭. ಸಹಕಾರಿ ಶಿಕ್ಷಣವನ್ನು ಸುಧಾರಿಸುವುದು.

೮. ಪ್ರಯೋಜನದಾರರಿಗಷ್ಟೇ ಮತಹಾಕುವ ಅಧಿಕಾರ ನೀಡುವುದು.

ಈ ಸಮಿತಿ ಸಹಕಾರಿ ಸಂಸ್ಥೆಗಳ ಬಾಕಿ ಸಮಸ್ಯೆಗಳ ಪರಿಹಾರಕ್ಕಾಗಿ ಅನೇಕ ಸಲಹೆಗಳನ್ನು ಆರಂ.ಬಿ.ಐ.ಗೆ ನೀಡಿತ್ತು. ಹಾಗೆ ಆರ್.ಬಿ.ಐ. ಈ ಸಂಘಟನೆಗಳಿಗೆ ಅನೇಕ ಸಲಹೆ ನೀಡಿದೆ.

**ಅವುಗಳೆಂದರೆ**

೧. ಅಧಿಕ ಬಾಕಿ ಹೊಂದಿರುವಂತಹ ಆಡಳಿತ ಮಂಡಳಿಯನ್ನು ರದ್ದುಪಡಿಸುವುದು.

೨. ಬಾಕಿದಾರರು ಎಂದು ಕಂಡು ಬಂದಲ್ಲಿ ಅವರ ಸದಸ್ಯತ್ವ ಮತ್ತು ಮತದಾನಕ್ಕೆ ಅನರ್ಹರು ಎಂದು ಪರಿಗಣಿಸಬೇಕು.

೩. ಬಾಕಿದಾರರಿಗೆ ದಂಡ ವಿಧಿಸುವುದು.

೪. ಬಾಕಿದಾರರ ಸ್ವತ್ತನ್ನು ಹರಾಜಿನ ಮೂಲಕ ಮಾರಿ ಕಡ್ಡಾಯವಾಗಿ ಬಾಕಿಯನ್ನು ಮರುವಸೂಲಿ ಮಾಡುವುದು.

೫. ಬಾಕಿದಾರರ ಜಮೀನು ಇದ್ದರೆ ಅದನ್ನು ಮಾರಿ ಸಾಲದ ಬಾಕಿಯನ್ನು ತುಂಬಿಕೊಳ್ಳುವುದು ಮತ್ತು ಬಾಕಿದಾರರಿಗೆ ಪತ್ತು ನೀಡಿಕೆಯನ್ನು ರದ್ದುಗೊಳಿಸುವುದು.

ಈ ಸಲಹೆಗಳನ್ನು ಆರ್.ಬಿ.ಐ.ಗೆ ನೀಡಿದ ನಂತರ ಈ ಬ್ಯಾಂಕು ಸಲಹೆಗಳನ್ನು ಅಂಗೀಕರಿಸಿ ಜಾರಿಗೆ ತಂದಿದ್ದರೂ ಸಹ ಸಹಕಾರಿ ಸಂಸ್ಥೆಗಳ ಆರ್ಥಿಕ ಪರಿಸ್ಥಿತಿಯೇನು ಸುಧಾರಿಸಿರುವುದಿಲ್ಲ ಎನ್ನುವಂತಹ ಅಭಿಪ್ರಾಯವನ್ನು ಇನ್ನೊಂದು ಸಮಿತಿ ವ್ಯಕ್ತಪಡಿಸಿತು. ಏಕೆಂದರೆ ಈ ಸಂಸ್ಥೆಗಳಲ್ಲಿ ಇರುವಂತಹ ಜನಪದರೆಂದರೆ ರಾಜಕೀಯ ವ್ಯಕ್ತಿಗಳು, ಶ್ರೀಮಂತರು ಆಗಿರುವುದರಿಂದ, ಈ ಸಂಸ್ಥೆಗಳ ಲಾಭವನ್ನು ಗ್ರಾಮೀಣ ಭಾರತ ಬಡಜನರಿಗೆ ಸರ್ಕಾರ ನಿರೀಕ್ಷಿಸಿದ ಪ್ರಮಾಣದಲ್ಲಿ ತಲುಪಿಸಲು ಸಾಧ್ಯವಾಗಿರುವುದಿಲ್ಲ. ಆದಕಾರಣ ನಮ್ಮ ದೇಶದಲ್ಲಿ ಸಹಕಾರಿ ಸಂಸ್ಥೆಗಳು ಅ ಯಶಸ್ವಿಯಾದರೆ ಸಹಕಾರ ಮಾತ್ರ ಯಶಸ್ವಿಯಾಗಿದೆ ಎಂದು ಹೇಳಬಹುದು.

**ಟಿಪ್ಪಣಿಗಳು**

೧. ಬರಗೂರು ರಾಮಚಂದ್ರಪ್ಪ (ಸಂ), **ಕರ್ನಾಟಕ ಸಂಗಾತಿ,** ಕ.ಅ.ಪ್ರಾ. ಬೆಂಗಳೂರು, ಡಿಸೆಂಬರ್ ೨೦೦೨, ಪು. ೨೦೨.

೨. **ಜಾನಪದ ಕೈಪಿಡಿ,** ಪು. ೧೨೩.

೩. ಅದೇ.,

೪. ರಾಜಪ್ಪ ದಳವಾಯಿ, **ಕನ್ನಡ ಸಾಹಿತ್ಯ ಕೋಶ,** ಕದಿರು ಪ್ರಕಾಶನ, ಮೈಸೂರು, ೨೦೦೩, ಪು. ೪೫೫.

೫. ಅದೇ.,

೬. ಬರಗೂರು ರಾಮಚಂದ್ರಪ್ಪ (ಸಂ), **ಕರ್ನಾಟಕ ಸಂಗಾತಿ,** ಕ.ಅ.ಪ್ರಾ. ಬೆಂಗಳೂರು, ಡಿಸೆಂಬರ್ ೨೦೦೨, ಪು. ೨೦೨.

೭. **ಜಾನಪದ ಕೈಪಿಡಿ,** ಪು. ೧೨೩.

೮. ಡಾ. ಎಚ್.ಜೆ. ಲಕ್ಕಪ್ಪಗೌಡ, **ಸಂ. ೧, ಸುವರ್ಣ ಜಾನಪದ,** ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೧೯೯೮, ಪು. ೧೨೨.

೯. ಕೆ.ಆರ್. ಸಂಧ್ಯಾರೆಡ್ಡಿ, **ಜಾನಪದ ಸ್ವರೂಪ ಮತ್ತು ಸಾಹಿತ್ಯ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೭, ಪು. ೬.

೧೦. ಅದೇ.,

೧೧. **ಜ್ಞಾನಗಂಗೋತ್ರಿ,** ಸಂ. ೧, ಪು. ೪೮.

೧೨. ಆರ್.ಸಿ. ಹಿರೇಮಠ, **ಜಾನಪದ ಸಾಹಿತ್ಯ ದರ್ಶನ,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೫, ಪು. ೪.

೧೩. **ಜ್ಞಾನಗಂಗೋತ್ರಿ,** ಸಂ. ೧, ಪು. ೪೮೨.

೧೪. ಅದೇ., ಪು. ೯೩೦.

೧೫. ಅದೇ., ಪು. ೯೩೨.

೧೬. ಅದೇ., ಪು. ೯೩೩.

೧೭. ಅದೇ., ಪು. ೯೩೩.

೧೮. ಅದೇ., ಪು. ೯೩೪.

೧೯. ಅದೇ., ಪು. ೯೩೮.

೨೦. ಅದೇ., ಪು. ೯೩೯.

೨೧. ಅದೇ., ಪು. ೯೩೮.

೨೨. ಎಲ್. ಸಿದ್ಧವೀರನಗೌಡ, ಮಾನವನ ಉಗಮ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೬೯, ಪು. ೨೧೨.

೨೩. ಅದೇ.,

೨೪. ಅದೇ.,

೨೫. ಆರ್.ಸಿ. ಹಿರೇಮಠ, ಜಾನಪದ ಸಾಹಿತ್ಯ ದರ್ಶನ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೫, ಪು. ೧.

೨೬. ಕೆ.ಪಿ.ಎಂ.ಸುಂದರಂ, ಮನಿಬ್ಯಾಂಕಿಂಗ್ ಅಂಡ್ ಇಂಟರ್‌ನ್ಯಾಷನಲ್ ಟ್ರೇಡ್ ಎಸ್.ಚಾಂದ್ ಅಂಡ್ ಕಂಪನಿ ನ್ಯೂ ಡೆಲ್ಲಿ ಪುಟ.೨

೨೭. ಅದೇ

೨೮. ನಾಗೇಶ್.ಎಚ್.ವಿ. ಗ್ರಾಮಾಂತರ, ಪು. ೧೨೧.

೨೯. ಬಿ. ಷೇಕ್‌ಅಲಿ, ಕರ್ನಾಟಕ ಚರಿತ್ರೆ ಭಾಗ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೧೯೯೭, ಪು. ೨೩೧.

೩೦. ಬಿ. ಷೇಕ್ ಅಲಿ, ಕರ್ನಾಟಕ ಚರಿತ್ರೆ ಭಾಗ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೧೯೯೭, ಪು. ೧೨೯.

೩೧. ಕೃಷ್ಣಭಟ್ ಕೆ., ಕೌಟಿಲ್ಯನ ಅರ್ಥಶಾಸ್ತ್ರ, ಸಮಾಜ ಪುಸ್ತಕಾಲಯ, ಧಾರವಾಡ, ಪು. ೯೮-೯೯.

೩೨. ಅಪ್ಪಾ ದೊರೈ, **A Economic Condition in South India**, p. 25.

೩೩. ಪಿ.ವಿ. ನಾರಾಯಣ, ವಚನ ಸಾಹಿತ್ಯ ಸಂಪುಟ, ಪು. ೧೫೦.

೩೪. ಕೃಷ್ಣಭಟ್ ಕೆ., ಕೌಟಿಲ್ಯನ ಅರ್ಥಶಾಸ್ತ್ರ, ಸಮಾಜ ಪುಸ್ತಕಾಲಯ, ಧಾರವಾಡ ಪು. ೮೯.

೩೫. ಅದೇ.,

೩೬. ಅದೇ., ಪು. ೧೧೩.

೩೭. ಕೃಷ್ಣಭಟ್ ಕೆ., ಕೌಟಿಲ್ಯನ ಅರ್ಥಶಾಸ್ತ್ರ, ಪು. ೨೦೭.

೩೮. ಕೃಷ್ಣಭಟ್ ಕೆ., ಕೌಟಿಲ್ಯನ ಅರ್ಥಶಾಸ್ತ್ರ, ಪು. ೨೩೯.

೩೯. ಅದೇ.,

೪೦. ಅದೇ.,

೪೧. ಅದೇ.,

೪೨. ಅದೇ. ಪು. ೨೪೨.

೪೩. ಬಿ. ಷೇಕ್‌ಅಲಿ, ಕರ್ನಾಟಕ ಚರಿತ್ರೆ ಭಾಗ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೧೯೯೭, ಪು. ೧೬೯.

೪೪. ಅದೇ. ಪು. ೨೯೪.

೪೫. ಬಿ.ಆರ್. ಹಿರೇಮಠ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು. ೧೭೦.

೪೬. ಅದೇ.,

೪೭. ಎಂ.ಎಂ. ಅಣ್ಣಿಗೇರಿ, ನಾಣ್ಯಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು. ೩.

೪೮. ಕೃಷ್ಣಭಟ್ ಕೆ., ಕೌಟಿಲ್ಯನ ಅರ್ಥಶಾಸ್ತ್ರ, ಪು. ೨೩೯.

೪೯. ಬಿ. ಷೇಕ್‌ಅಲಿ (ಸಂ), ಕರ್ನಾಟಕ ಚರಿತ್ರೆ ಭಾಗ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೧೯೯೭, ಪು. ೩೦೨.

೫೦. ಅದೇ., ಪು. ೩೨೬.

೫೧. ಅದೇ., ಪು. ೩೨೭.

೫೨. ಬಿ.ಪಿ.ಹೂಗಾರ್, ಕರ್ನಾಟಕ ಇತಿಹಾಸ, ಎಸ್.ಎಸ್.ಬುಕ್ ಡಿಪೋ, ಗುಲ್ಬರ್ಗಾ, ೨೦೦೫, ಪುಟ.೪೧.

೫೩. ಬಿ.ಷೇಕ್ ಅಲಿ (ಸಂ), ಕರ್ನಾಟಕ ಚರಿತ್ರೆ ಭಾಗ-೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪುಟ.೩೨೦

೫೪. ಬಿ.ಪಿ. ಹೂಗಾರ, ಕರ್ನಾಟಕ ಇತಿಹಾಸ, ಸಿದ್ಧಲಿಂಗೇಶ್ವರ ಬುಕ್ ಡಿಪೋ, ಗುಲಬರ್ಗಾ, ೨೦೦೫, ಪು. ೪೬೮.

೫೫. ಅದೇ. ಪು.೧೦೬

೫೬. ಸೌ.ಇ.ಇ. XV ೧೫೧ ಭೈರವಾಡಗಿ (ಬಾಗೇವಾಡಿ), ಕ್ರಿ.ಶ. ೧೧೭೬.

ಡಾ. ಕೆ. ಎಸ್. ಕೊಪ್ಪ, ತರ್ದನಾಡು, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦.

೫೭. ಅದೇ.,

೫೮. ಬಿ.ಆರ್. ಹಿರೇಮಠ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು. ೧೦.

೫೯. ಜಾನಪದ ಕೈಪಿಡಿ, ಪು. ೧೨೩.

೬೦. ಅದೇ., ೧೨೯.

೬೧. ಎ.ಕ. XI ದಾವಣಗೆರೆ, ಕ್ರಿ.ಶ. ೧೨೧೮, ಪು. ೧೦೫.

೬೨. ನಯಸೇನ ಮತ್ತು ಅವನ ಕೃತಿಗಳು, ಪು. ೨೮೫.

೬೩. ಬಿ. ಷೇಕ್‌ಅಲಿ (ಸಂ), ಕರ್ನಾಟಕ ಚರಿತ್ರೆ ಭಾಗ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೧೯೯೭, ಪು. ೩೧೯.

೬೪. ಕರ್ನಾಟಕದ ಪರಂಪರೆ (ಸಂ), ಆದಿಕಾಲ, ಮೈಸೂರು ಸರ್ಕಾರ, ೧೯೭೦, ಪು. ೧೨೯.

೬೫. ಬಿ. ಷೇಕ್‌ಅಲಿ (ಸಂ), ಕರ್ನಾಟಕ ಚರಿತ್ರೆ ಭಾಗ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೧೯೯೭, ಪು. ೩೨೦.

೬೬. ಎಲ್. ಬಸವರಾಜು, ಬಸವೇಶ್ವರ ವಚನ ಸಂಗ್ರಹ, ಡಿ.ವಿ.ಕೆ. ಮೂರ್ತಿ ಮೈಸೂರು, ೧೯೬೪, ಪು. ೮೨.

೬೭. ಅದೇ., ಪು. ೧೦೦.

೬೮. ಡಾ. ಎಲ್.ಜಿ. ಭಟ್, ಬಸವೇಶ್ವರ ವಚನ ಸಂಗ್ರಹ, ಕರ್ನಾಟಕ ಇತಿಹಾಸ, ವಿಜಯ ಪಬ್ಲಿಕೇಶನ್ಸ್, ೨೦೦೫, ಪು. ೨೮೯.

೬೯. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಪು. ೫೨೯.

೭೦. ಡಾ. ಎಸ್.ಕೆ. ಕೊಪ್ಪ, ತರ್ದವಾಡಿ ನಾಡು, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦.

೭೧. ಬಿ.ಆರ್. ಹಿರೇಮಠ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಪು. ೭೫.

೭೨. ಹಾ.ಮಾ. ನಾಯಕ (ಸಂ), ಕರ್ನಾಟಕ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು. ೧೪೩೮.

೭೩. ಡಾ. ರಾಜಶೇಖರ ಜಮದಂಡಿ, ಸರ್ವಜ್ಞನ ವಚನಗಳು, ಅಖಿಲ ಭಾರತ ಶರಣ ಸಾಹಿತ್ಯ ಪರಿ,ತ್ತು, ಮೈಸೂರು, ೨೦೦೪.

೭೪. ಬಿ. ಷೇಕ್‌ಅಲಿ, ಕರ್ನಾಟಕ ಚರಿತ್ರೆ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩ ೨೭೬, ೧೯೯೭, ಪು. ೪೮೩.

೭೫. ಅದೇ., ಪು. ೪೯೦.

೭೬. ಅಪ್ಪಾ ದೊರೈ, ಎಕನಾಮಿಕ್ ಕಂಡೀಷನ್ಸ್ ಇನ್ ಸೌತ್ ಇಂಡಿಯಾ, ಪು. ೨೫.

೭೭. ಡಾ. ಸೂರ್ಯನಾಥ ಕಾಮತ್, ಕರ್ನಾಟಕ ಗ್ಯಾಜಿಟಿಯರ್, ಭಾಗ-೨, ಕರ್ನಾಟಕ ಸರ್ಕಾರ, ೧೯೮೫.

೭೮. ರಾಧಾಸ್ವಾಮಿ, ದಿ-ಬ್ಯಾಂಕಿಂಗ್, ಎಸ್.ಚಾಂದ್ ಅಂಡ್ ಕಂಪನಿ, ೨೦೦೫, ಪುಟ.೩೦೭

೭೯. ಅದೇ., ಪು. ೩೧೧.

೮೦. ಕೆ.ಪಿ.ಎಂ.ಸುಂದರಂ, ಮನಿ, ಬ್ಯಾಂಕಿಂಗ್ ಅಂಡ್ ಇಂಟರನ್ಯಾಷನಲ್ ಟ್ರೇಟ್, ಎಸ್.ಚಾಂದ್ ಅಂಡ್ ಸನ್ಸ್, ನ್ಯೂ ಡೆಲ್ಲಿ, ೨೦೦೫.

೮೧. ಅದೇ.

೮೨. ಅದೇ.

೮೩. ಆರ್.ಬಿ.ಐ. ರಿಪೋರ್ಟ್ ಆಪ್ ದಿ ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೊ ಕಮಿಟಿ, ೧೯೬೯, ಬಾಂಬೆ, ಪು. ೩೨೫.

೮೪. ಅದೇ., ಪು. ೩೨೬.

೮೫. ಅದೇ.,

೮೬. ಆರ್.ಬಿ.ಐ. ರಿಪೋರ್ಟ್ ಆಪ್ ಕಮಿಟಿ ಟು ಸ್ಟಡಿ ದಿ ಪಂಕ್ಷನಿಂಗ್ ಪಬ್ಲಿಕ್ ಸೆಕ್ಟಾರ್ ಬ್ಯಾಂಕ್, ಬಾಂಬೆ, ೧೯೭೮, ಪು. ೨೦.

೮೭. ಅದೇ., ಪು. ೨೧.

೮೮. ಗೌರ್‍ನಮೆಂಟ್ ಆಫ್ ಇಂಡಿಯಾ, ರಿಪೋರ್ಟ್ ಆಪ್ ದಿ ರೂರಲ್ ಬ್ಯಾಂಕಿಂಗ್ ಎನ್‌ಕ್ವಯರಿ ಕಮಿಟಿ, ೧೯೫೦, ದೆಹಲಿ, ಪು. ೨೧, ೪೧, ೪೮.

೮೯. ರಿಪೋರ್ಟ್ ಆಫ್ ದಿ ಇಂಡಿಯನ್ ಸೆಂಟ್ರಲ್ ಬ್ಯಾಂಕಿಂಗ್, ಎನ್‌ಕ್ವಯರಿ ಕಮಿಟಿ, ೧೯೩೧. ಆರ್.ಬಿ.ಐ. ಜನರಲ್ ಆಫ್ ದಿ ಇಂಡಿಯಾ, ರೂರಲ್ ಕ್ರೆಡಿಟ್ ಸರ್ವೆ ಕಮಿಟಿ, ಬಾಂಬೆ, ೧೯೫೪, ಪು. ೧೦೦.

೯೦. ರಿಪೋರ್ಟ್ ಆಫ್ ದಿ ರೂರಲ್ ಬ್ಯಾಕಿಂಗ್ ಎನ್‌ಕ್ವಯರಿ ಕಮಿಟಿ, ಪು. ೫೦.

೯೧. ಆರ್.ಬಿ.ಐ. ರಿಪೋರ್ಟ್ ಆಫ್ ದಿ ಆಲ್ ಇಂಡಿಯಾ, ರೂರಲ್ ಕ್ರೆಡಿಟ್ ಸರ್ವೆ ಕಮಿಟಿ, ಬಾಂಬೆ, ೧೯೫೪, ಪು. ೩.

೯೨. ಎ.ಐ.ಆರ್.ಸಿ.ಎಸ್., ಆಲ್ ಇಂಡಿಯಾ ರೂರಲ್ ಕ್ರೆಡಿಟ್ ಸರ್ವೆ ೧೯೫, ೫೨, ಆಲ್ ಇಂಡಿಯಾ ರೂರಲ್ ಡೆವಲಪ್‌ಮೆಂಟ್ ಅಂಡ್ ಇನ್‌ವೆಸ್ಟ್‌ಮೆಂಟ್ ಸರ್ವೆ, ೧೯೬೧-೬೨, ಎ.ಐ.ಡಿ.ಪಿ.ಎಸ್. Ibid - 1991-72, From RBI Repart 1969, 1971, p. 100.

೯೩. Statement of Finance Minister on Social Centre of Commercial Banks made in Parliment - 14-1967 Quoted, S.S.M. Desai, p. 181.

೯೪. ಕೆ.ಪಿ.ಎಂ. ಸುಂದರಮ್ ಅಂಡ್ ದತ್ತ, ಇಂಡಿಯನ್ ಎಕಾನಮಿ, ಎಸ್. ಚಾಂದ ಆಂಡಸನ್ಸ್, ನ್ಯೂಡೆಲ್ಲಿ, ಪು. ೬೯೩.

೯೫. ಎಸ್.ಎಸ್. ಎಂ., ದೇಸಾಯಿ, ಇಂಡಿಯನ್ ಎಕಾನಮಿ, ಎಸ್. ಚಾಂದ ಆಂಡ ಸನ್ಸ್, ನ್ಯೂಡೆಲ್ಲಿ, ಪು. ೧೮೪.

೯೬. ಸಾಂಬ ಶಿವರಾಯ್, ಆಚಾರ್ಯಲು "ವಿಥರ್ ಇನ್‌ಸ್ಟಿಟೂಷನಲ್ ಫೈನಾನ್ಸ್", ಕುರುಕ್ಷೇತ್ರ, ವ್ಯಾಲೂಂ ೩೦, ಸೆಪ್ಟೆಂಬರ್ ೧-೧೫, ೧೯೮೨, p. 4.

೯೭. ವಿಜಯರತ್ನ, **ಕಮರ್ಷಿಯಲ್ ಬ್ಯಾಂಕ್ಸ್ ಮತ್ತು ಮಾಸ್ ಬ್ಯಾಕಿಂಗ್ ವಿಥ ರಿಯಾಲಿಟಿ ಯೋಜನಾ- ವ್ಯಾಲುಂ ೨೭**, ನಂ. ೧೩, ಜುಲೈ, ೧೬.೩.೧೯೮೩, ಪು. ೨೦.

೯೮. ಆರ್.ಬಿ.ಐ. ರಿಪೋರ್ಟ್ ಆಫ್ ದ ವರ್ಕಿಂಗ್ ಗ್ರೂಪ್, ಪ್ರಿಯಾರಿಟಿ ಲೆಂಡಿಂಗ್ ೪, ೨೦ ಫ್ಯಾಯಿಂಟ್ ಎಕಾನಾಮಿಕ್, ರೂರಲ್ ಬ್ಯಾಂಕ್ಸ್, ಬಾಂಬೆ, ೧೯೮೦, ಪು. ೧೭.

೯೯. ಅದೇ. ೬೩

೧೦೦. ಅದೇ ೬೮.

೧೦೧. ಅದೇ ೫೪.

೧೦೨. ಅದೇ ೫೩.

೧೦೩. ಅದೇ.

೧೦೪. ಅದೇ.

೧೦೫. ಗೌರ್ನಮೆಂಟ್ ಆಪ್ ಇಂಡಿಯಾ ಕೋ-ಅಪರೇಷನ್ ಇನ್ ಇಂಡಿಯಾ ನ್ಯೂ ಡೆಲ್ಲಿ ೧೯೬೫. ಪುಟ.೫.

೧೦೬. ಎಸ್.ಎಸ್.ಎಂ.ದೇಸಾಯಿ, ಇಂಡಿಯನ್ ಎಕಾನಮಿ, ಪುಟ.೯೮

೧೦೭. ಆರ್.ಬಿ.ಐ. ಮಾರ್ಜಿನಲ್ ಫಾರ್ಮರ್ಸ್ ಅಂಡ್ ಅಗ್ರಿಕಲ್ಚರಲ್ ಲೇಬರ್ಸ್ ಡೆವಲಪ್‌ಮೆಂಟ್ ಏಜನ್ಸೀಸ್, ಬಾಂಬೆ, ೧೯೭೬, ಪುಟ.೩೧

೧೦೮. ಆರ್.ಬಿ.ಐ. ಆಲ್ ಇಂಡಿಯಾ ರೂರಲ್ ಕ್ರೆಡಿಟ್ ಸರ್ವೇ, ೧೯೫೫ ಪುಟ.೫೬ ರಿಪೋರ್ಟ್ ಆಫ್ ದಿ ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೂ, ಕಮಿಟಿ, ೧೯೬೬, ಬಾಂಬೆ ಪುಟ.೨೨

೧೦೯. ಅದೇ

೧೧೦. ಆರ್.ಬಿ.ಐ. ರಿಪೋರ್ಟ್ ಆಫ್ ದಿ ಸ್ಟಡಿ ಟೀಮ್ ಒವರಡ್ಯೂಸ್ ಆಫ್ ಕೋ ಅಪರೇಟಿವ್ ಕ್ರೆಡಿಟ್ ಇನ್ಸ್‌ಸ್ಟಿಟ್ಯೂಷನ್ಸ್, ಬಾಂಬೆ, ೧೯೯೪, ಪುಟ.೭.

೧೧೧. ಇದೇ

೧೧೨. ಆರ್.ಬಿ.ಐ. ರಿಪೋರ್ಟ್ ಆಫ್ ದಿ ಸ್ಟಡಿ ಟೀಮ್ ಒವರಡ್ಯೂಸ್ ಆಫ್ ಕೋ ಅಪರೇಟಿವ್ ಕ್ರೆಡಿಟ್ ಇನ್ಸ್‌ಸ್ಟಿಟ್ಯೂಷನ್ಸ್, ಬಾಂಬೆ, ೧೯೬೪-೬೫

೧೧೩. ಅದೇ

೧೧೪. ಅದೇ

೧೧೫. ಆರ್‌ಬಿಐ ರಿಪೋರ್ಟ್ ಆಫ್ ದಿ ಕಾಫಿಕಾರ್ಡ್, ಪುಟ.೧೩೬-೩೭

# ಅಧ್ಯಾಯ ಮೂರು

## ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಸೃಷ್ಟಿ ಮತ್ತು ದೃಷ್ಟಿ

೩.೧. ಭಾರತದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸೃಷ್ಟಿ

೩.೨. ಭಾರತದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪ್ರಗತಿ

೩.೩. ಕರ್ನಾಟಕದ ಗ್ರಾಮೀಣ ಬ್ಯಾಂಕುಗಳ ಪ್ರಗತಿ ಹಾಗೂ ಉದ್ದೇಶ

೩.೪. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ದೃಷ್ಠಿ

## ಅಧ್ಯಾಯ ಮೂರು

# ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಸೃಷ್ಟಿ ಮತ್ತು ದೃಷ್ಟಿ

### ೩.೧. ಭಾರತದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸೃಷ್ಟಿ

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಅಸ್ತಿತ್ವದ ಪೂರ್ವದಲ್ಲಿ ಪ್ರಾಥರ್ಮಿಕ ಕೃಷಿ ಸಹಕಾರ ಸಂಘಗಳು ಮತ್ತು ವಾಣಿಜ್ಯ ಬ್ಯಾಂಕಿನ ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿದ್ದು, ಜನಪದರಿಗೆ ಪತ್ತನ್ನು ಪೂರೈಸುತ್ತಿದ್ದವು. ಸರಕಾರದ ಹಲವಾರು ಸಮಿತಿಗಳು ಈ ಎರಡು ಸಂಸ್ಥೆಯ ಕಾರ್ಯನಿರ್ವಹಣೆಯ ಬಗ್ಗೆ ಪುನರ್‌ಪರಿಶೀಲಿಸಿ, ಕೆಲವೊಂದು ಶಿಫಾರಸ್ಸುಗಳೊಂದಿಗೆ ಗ್ರಾಮೀಣ ಪತ್ತಿನ ರಚನೆಯನ್ನು ಸುಧಾರಿಸಲು ಪ್ರಯತ್ನಿಸಿದವು.[೧] ಈ ಎರಡು ಸಂಸ್ಥೆಗಳು, ಸರ್ಕಾರದ ಸಮಿತಿಗಳ ಶಿಫಾರಸ್ಸಿನಂತೆ ಗ್ರಾಮೀಣ ಪತ್ತಿನ ಪೂರೈಕೆಯಲ್ಲಿ ಸುಧಾರಣೆಯಾಗುತ್ತದೆಂದು ಮೊದಲು ನಿರೀಕ್ಷಿಸಲಾಗಿತ್ತು. ಆದರೆ ವಾಸ್ತವವಾಗಿ ಆ ಸುಧಾರಣೆಗಳು ಅನುಷ್ಠಾನಗೊಳ್ಳಲಿಲ್ಲ.

ಅಖಿಲ ಭಾರತೀಯ ಗ್ರಾಮೀಣ ಪತ್ತಿನ ಸಮೀಕ್ಷಾ ಸಮಿತಿ (೧೯೫೧-೫೨)ಯ ಅಂಕಿ ಅಂಶವನ್ನು ಗಮನಿಸಿದಾಗ, ಸಹಕಾರಿ ಸಂಘಗಳ ಪತ್ತಿನಲ್ಲಿನ ಪಾಲುದಾರಿಕೆಯು ಸಮಾಜದಲ್ಲಿನ ಮೇಲ್ವರ್ಗದವರಿಗೆ ಮಾತ್ರ ದೊರೆಯುತ್ತಿತ್ತು. ಆದರೆ ಸಮಾಜದಲ್ಲಿನ ದುರ್ಬಲ ವರ್ಗದವರಾದ ಸಣ್ಣ ಮತ್ತು ಅತಿಸಣ್ಣ ರೈತರು, ಕರಕುಶಲ ಕರ್ಮಿಗಳು, ಕೃಷಿ ಕಾರ್ಮಿಕರುಗಳು ಇದರಿಂದ ವಂಚಿತರಾಗಿರುವುದು ಕಂಡು ಬರುತ್ತದೆ.[೨] ಸಹಕಾರಿ ವಲಯು (೧೯೫೧-೫೨) ಪ್ರಕಟನೆ ಮಾಡಿದ ಪತ್ತಿನ ಅಂಕಿ-ಅಂಶಗಳಲ್ಲಿ ದೊಡ್ಡ ರೈತರು, ಮಧ್ಯಮವರ್ಗದ ಹಾಗೂ ಸಣ್ಣ, ಅತಿ ಸಣ್ಣ ರೈತರು ಅನುಕ್ರಮವಾಗಿ ಪ್ರತಿಶತ ೭೬.೦೯, ೧೭.೦೩ ಮತ್ತು ೬.೮೮ರಷ್ಟು ಪತ್ತನ್ನು ಪಡೆದಿರುವುದು ಕಂಡು ಬರುತ್ತದೆ.[೩]

ಸಣ್ಣ ಹಿಡುವಳಿದಾರರಿಗೆ ಸಹಕಾರ ಸಂಘಗಳ ಮೂಲಕ ದೊರೆಯುತ್ತಿರುವ ಪತ್ತಿನ ಪ್ರಮಾಣವು ಎಲ್ಲಾ ರಾಜ್ಯಗಳಲ್ಲೂ ಕಡಿಮೆಯಿದೆ. ಆದರೆ ದೊಡ್ಡ ರೈತರು, ಜಮೀನ್ದಾರರು ಅಧಿಕ ಪ್ರಮಾಣದಲ್ಲಿ ಸಹಕಾರಿ ಸಂಘಗಳಿಂದ ಪತ್ತನ್ನು ಪಡೆದಿದ್ದಾರೆ. ಕೆಲವು ಸಂದರ್ಭಗಳಲ್ಲಿ ದೊಡ್ಡ ರೈತರು ತಮ್ಮ ಪತ್ತಿನ ಬಯಕೆಯನ್ನು ಈಡೇರಿಸಿಕೊಳ್ಳಲು ಬೇನಾಮಿ ಪತ್ತಿನ ವ್ಯವಹಾರವನ್ನು ಸಣ್ಣ ರೈತರ ಹೆಸರಿನಲ್ಲಿ ಪಡೆದಿರುತ್ತಾರೆಂದು "ರೂರಲ್ ಕ್ರೆಡಿಟ್ ರಿವ್ಯೊ ಕಮಿಟಿ"(Rural Credit Review Committe)ಯ ವರದಿಯು ತಿಳಿಸುತ್ತದೆ.[೪]

ಈ ಸಮಿತಿಯ ಅಭಿಪ್ರಾಯದ ಪ್ರಕಾರ ಈಗಿರುವ ಗ್ರಾಮೀಣ ಪತ್ತಿನ ರಚನೆಯು ಗ್ರಾಮೀಣ ಸಮಾಜದಲ್ಲಿನ ದೊಡ್ಡ, ಸಣ್ಣ, ಅತಿಸಣ್ಣ ರೈತರ ಮತ್ತು ಕೃಷಿಯೇತರ ಜನರ ಪತ್ತಿನ ಪೂರೈಕೆಯಲ್ಲಿನ ಅಂತರವನ್ನು ಗಮನಿಸಬಹುದು ಹಾಗೂ ಆರ್.ಬಿ.ಐ. ಸಹಕಾರಿ ಸಂಸ್ಥೆಗಳ ಮೇಲೆ ಒತ್ತಾಯ ತಂದು, ಒಟ್ಟು ಪತ್ತಿನಲ್ಲಿ ಪ್ರತಿಶತ ೨೦ರಷ್ಟು ಪತ್ತನ್ನು ದುರ್ಬಲ ವರ್ಗದವರಿಗೆ, ಸಣ್ಣ ಮತ್ತು ಅತಿಸಣ್ಣ ರೈತರಿಗೆ (೧೯೭೧-೭೨)[೫] ನೀಡಬೇಕು ಎಂದು ಕಡ್ಡಾಯ ಮಾಡಿತು. National Commission on Agriculture[೬] ಸಮಿತಿಯು ಕೂಡ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಸೇವಾ ಸಂಸ್ಥೆಗಳನ್ನು ಸ್ಥಾಪಿಸಲು ಶಿಫಾರಸ್ಸು ಮಾಡಿತು.

ಪ್ರಾಥಮಿಕ ಸಹಕಾರಿ ಸಂಘಗಳು ೧೯೭೩ರವರೆಗೆ ಪ್ರತಿಶತ ೯೫ರಷ್ಟು ಗ್ರಾಮಗಳನ್ನೊಳಗೊಂಡು ೧.೫೦ ಲಕ್ಷ ಸದಸ್ಯರನ್ನು ಹೊಂದಿತ್ತು. ಒಟ್ಟು ಹಿಡುವಳಿದಾರರಲ್ಲಿ ಪ್ರತಿಶತ ೪೦ರಷ್ಟು ಸಣ್ಣ ಹಿಡುವಳಿದಾರರನ್ನು ಇವು ಒಳಗೊಂಡಿರುವುದಿಲ್ಲ. ಆದರೆ ಸಾಲದ ಬಾಕಿಯ ಪ್ರಮಾಣವು ಪ್ರತಿಶತ ೪೩ರಷ್ಟು ಇತ್ತು. ಭಾರತೀಯ ರಿಸರ್ವ್ ಬ್ಯಾಂಕಿನ ಲೆಕ್ಕ ಪರಿಶೋಧಕರ ಹಾಗೂ ಸಹಕಾರ ಸಂಘಗಳ ವರ್ಗೀಕರಣದ ಪ್ರಕಾರ ೧೯೭೫ರ ಜೂನ್ ಕೊನೆಯ ಹೊತ್ತಿಗೆ ೧,೨೯.೦೫೭, ಸಂಘಗಳಲ್ಲಿ ೯೦,೩೯೨ ಸಂಘಗಳು ಚಟುವಟಿಕೆಗಳಿಂದ ಕೂಡಿದ್ದವು. ಆದರೆ ಅವುಗಳಲ್ಲಿ ಪ್ರತಿಶತ ೯೦ರಷ್ಟು ದುರ್ಬಲವಾಗಿದ್ದವು. ಒಟ್ಟು ೩೩೮ ಕೇಂದ್ರ ಸಹಕಾರಿ ಬ್ಯಾಂಕುಗಳಲ್ಲಿ ೧೮೧ ಬ್ಯಾಂಕುಗಳು ದುರ್ಬಲವಾಗಿದ್ದವು. ಒಟ್ಟು ೮೪೦ ಭೂ ಅಭಿವೃದ್ಧಿ ಬ್ಯಾಂಕುಗಳಲ್ಲಿ ೩೬೫ ಬ್ಯಾಂಕುಗಳು ದುರ್ಬಲವಾಗಿದ್ದವು ಎಂಬ ಅಂಶವನ್ನು ಸ್ಪಷ್ಟಪಡಿಸಿತು.[೭]

ಪ್ರಾಥಮಿಕ ಸಹಕಾರ ಸಂಘಗಳು ೨೦೦೬-೦೭ರ ಹೊತ್ತಿಗೆ ಕಡಿಮೆಯಾಗಿದ್ದು, ಅದರ ಸದಸ್ಯರ ಸಂಖ್ಯೆಯು ಮಾತ್ರ ೧೨,೨೫,೬೯೧ ಲಕ್ಷಕ್ಕೆ ಅಧಿಕವಾಗಿದೆ. ಠೇವಣಿ ಮೊತ್ತವು ೭೩,೩೮,೬೬೭ ಲಕ್ಷ ರೂಪಾಯಿಗಳಿಗೂ ಅಧಿಕವಾಗಿರುತ್ತದೆ. ಬಾಕಿಯ ಪ್ರಮಾಣ ೧೯೭೩ರಲ್ಲಿ ಪ್ರತಿಶತ ೪೪ ಇದ್ದದು, ೨೦೦೬-೦೭ರ ಹೊತ್ತಿಗೆ ಅಧಿಕವಾಗಿರುವುದು ಕಂಡು ಬರುತ್ತದೆ. ಈ ಅಂಶಗಳು ಸಹಕಾರಿ ಸಂಘಗಳ ದಕ್ಷತೆಯನ್ನು ಸೂಚಿಸುತ್ತದೆ. ಈ ಎಲ್ಲಾ ನ್ಯೂನತೆಗಳನ್ನು ಹೋಗಲಾಡಿಸುವಂತಹ ನೀತಿಯನ್ನು ಜಾರಿಗೆ ತಂದು ಈ ಸಂಸ್ಥೆಗಳ ಆರ್ಥಿಕ ಪರಿಸ್ಥಿತಿಯನ್ನು ತಳಮಟ್ಟದಿಂದಲೇ ಸುಧಾರಿಸುವಂತೆ ಯೋಜನೆಯನ್ನು ರೂಪಿಸಿಕೊಳ್ಳಬಹುದಾಗಿದೆ.

ವಾಣಿಜ್ಯ ಬ್ಯಾಂಕುಗಳು ಸಹ ತಮ್ಮದೇ ಆದ ನ್ಯೂನತೆಗಳನ್ನು ಒಳಗೊಂಡಿವೆ. ವಾಣಿಜ್ಯ ಬ್ಯಾಂಕುಗಳ ವಾಸ್ತವ ಬೆಳವಣಿಗೆಯೆಂದರೆ ಗ್ರಾಮೀಣ ಶಾಖೆಗಳನ್ನು ಸ್ಥಾಪಿಸುವುದು, ಪತ್ತು ಮತ್ತು ಮುಂಗಡಗಳನ್ನು ಗ್ರಾಮೀಣ ಪ್ರದೇಶಗಳಿಗೆ ಒದಗಿಸುವುದು, ಗ್ರಾಮಗಳನ್ನು ದತ್ತು ತೆಗೆದುಕೊಳ್ಳುವುದು ಮುಂತಾದವುಗಳಾಗಿದ್ದವು. ಆದರೆ ವಾಣಿಜ್ಯ ಬ್ಯಾಂಕಿನ ಶಾಖೆಗಳು ಇಂದಿಗೂ ಕೂಡ ಗ್ರಾಮೀಣ ಪ್ರದೇಶಗಳನ್ನು ತಲುಪಿಲ್ಲದಿರುವುದು ಒಂದೆಡೆಯಾದರೆ, ಇನ್ನೊಂದೆಡೆಗೆ ವಾಣಿಜ್ಯ ಬ್ಯಾಂಕುಗಳು ತಮ್ಮ

ಶಾಖೆಗಳನ್ನು ಗ್ರಾಮೀಣ ಪ್ರದೇಶದಲ್ಲಿ ಪ್ರಾರಂಭಿಸಿ, ಅಲ್ಲಿನ ಗ್ರಾಹಕರಿಂದ ಠೇವಣಿಗಳನ್ನು ಸಂಗ್ರಹಿಸಿ, ಆ ಠೇವಣಿಯನ್ನು ಪಟ್ಟಣ ಪ್ರದೇಶಗಳಿಗೆ ವರ್ಗಾವಣೆ ಮಾಡಿ ಅಲ್ಲಿನ ಪತ್ತಿನ ಪ್ರಮಾಣವನ್ನು ಅಧಿಕಗೊಳಿಸಿವೆ. ಗ್ರಾಮೀಣ ಪ್ರದೇಶದಲ್ಲಿನ ವಾಣಿಜ್ಯ ಬ್ಯಾಂಕುಗಳು ಸಂಗ್ರಹಿಸಿದ ಠೇವಣಿ ಮೊತ್ತದಲ್ಲಿ ಕಡಿಮೆ ಪ್ರಮಾಣದ ಪತ್ತು ಮತ್ತು ಮುಂಗಡಗಳನ್ನು ಈ ಪ್ರದೇಶಗಳಿಗೆ ಒದಗಿಸಿವೆ. ಈ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳಲ್ಲಿ ೧೯೭೪ರ ಜೂನ್ ಹೊತ್ತಿಗೆ ಸಂಗ್ರಹಿಸಿದ ಠೇವಣಿಯು ಪ್ರತಿಶತ ೭.೭.'ರಷ್ಟಾಗಿದ್ದು, ಪ್ರತಿಶತ ೫.೩ರಷ್ಟು ಪತ್ತು ಮತ್ತು ಮುಂಗಡಗಳನ್ನು ಒದಗಿಸಿವೆ. ಈ ಅಂಶವು ಸ್ಪಷ್ಟಪಡಿಸುವುದೇನೆಂದರೆ ವಾಣಿಜ್ಯ ಬ್ಯಾಂಕಿನ ಗ್ರಾಮೀಣ ಶಾಖೆಗಳು ಪತ್ತು ಮತ್ತು ಮುಂಗಡ ಕೇಂದ್ರಗಳಾಗಿರದೆ, ಠೇವಣಿ ಸಂಗ್ರಹದ ಕೇಂದ್ರಗಳಾಗಿರುವುದು.

ವಾಣಿಜ್ಯ ಬ್ಯಾಂಕುಗಳು ೧೯೬೯ರ ಜೂನ್ ಹೊತ್ತಿಗೆ ಕೃಷಿಗೆ ಪ್ರತಿಶತ ೫.೩.ರಷ್ಟು ಪತ್ತನ್ನು ಒದಗಿಸಿದ್ದವು. ೧೯೯೭ರ ಜೂನ್ ಹೊತ್ತಿಗೆ ಪ್ರತಿಶತ ೧೫.೪ರಷ್ಟು[೧೦] ೨೦೦೭ ಮಾರ್ಚ್ ಕೊನೆಯ ಹೊತ್ತಿಗೆ ಪ್ರತಿಶತ ೧೨ರಷ್ಟು ಪತ್ತನ್ನು ಒದಗಿಸಿದ್ದವು. ಸಹಕಾರಿ ಸಂಘಗಳು ಮತ್ತು ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಪ್ರದೇಶದ ಪತ್ತು ರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿ ಪ್ರಾದೇಶಿಕ ಅಸಮಾನತೆಯನ್ನು ತಡೆಗಟ್ಟಲು ಪ್ರಯತ್ನಿಸಿವೆ. ಆದರೆ ಅಧಿಕ ಪ್ರಮಾಣದ ಪತ್ತನ್ನು ಕೆಲವೇ ನೀರಾವರಿ ಪ್ರದೇಶಗಳು ಪಡೆದಿವೆ. ಇನ್ನುಳಿದ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಸೌಲಭ್ಯವಿಲ್ಲದಿರುವ ಕಾರಣ ಹಣಕಾಸಿನ ನೆರವನ್ನು ಪಡೆಯಲು ಸಾಧ್ಯವಾಗಿಲ್ಲ.[೧೧]

ಕೃಷಿಯಲ್ಲಿ ಹಸಿರು ಕ್ರಾಂತಿ ಸಂಭವಿಸಿದ ನಂತರದಲ್ಲಿ ಸಾಲದ ಬೇಡಿಕೆಯು ಅಧಿಕವಾಯಿತು. ಕೃಷಿಯು ಕಡಿಮೆ ಹೂಡಿಕೆಯ ಶಕ್ತಿ ಮತ್ತು ಕಡಿಮೆ ಉತ್ಪಾದನೆಯನ್ನು ಹೊಂದಿತ್ತು. ಸರಕಾರವು ರಾಜ್ಯದಲ್ಲಿ ಹೇರಳವಾಗಿ ದೊರೆಯುವ ನೀರು, ವಿದ್ಯುಚ್ಛಕ್ತಿ, ಬೀಜ, ಗೊಬ್ಬರ, ಕ್ರಿಮಿನಾಶಕಗಳ ಮೇಲೆ ಸಂಪನ್ಮೂಲಗಳನ್ನು ಒದಗಿಸುತ್ತದೆ. ಆದರೆ ದುರಾದೃಷ್ಟವಶಾತ್ ಅಧಿಕ ಪ್ರಮಾಣದ ರೈತರು ಅನುಕೂಲಗಳನ್ನು ಪಡೆಯಲು ಪತ್ತಿನ ಪ್ರಮಾಣದ ಕೊರತೆಯಿಂದ ಸಾಧ್ಯವಾಗುತ್ತಿಲ್ಲ. ಈ ಎಲ್ಲಾ ಸಮಸ್ಯೆಗಳಿಗೆ ಸಂಪೂರ್ಣವಾದ ಮಾರ್ಗೋಪಾಯಗಳನ್ನು ಹುಡುಕಬೇಕಾದರೆ ಹೊಸ ನೀತಿಯನ್ನು ರೂಪಿಸುವವರು. ಹಾಲಿ ಇರುವ ಹಣಕಾಸಿನ ಸಂಸ್ಥೆಗಳ ಬಗ್ಗೆ ಪುನರ್‌ಪರಿಶೀಲಿಸಬೇಕು ಎಂದು ನರಸಿಂಹಮ್ ಸಮಿತಿ[೧೨] ತಿಳಿಸಿತು.

ಸಂಪೂರ್ಣ ದುರ್ಬಲವಾದ ಸಹಕಾರಿ ಸಂಘಗಳು, ಸಂಘಟನಾತ್ಮಕ, ವ್ಯವಸ್ಥಾಪನಾ, ಹಣಕಾಸಿನ ಮತ್ತು ಅಧಿಕ ನಿರ್ವಹಣಾ ವೆಚ್ಚದಿಂದ ಬಳಲುತ್ತವೆ. ಗ್ರಾಮೀಣ ಪ್ರದೇಶದಲ್ಲಿನ ವಾಣಿಜ್ಯ ಬ್ಯಾಂಕುಗಳಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಗೆ ಆ ಪರಿಸರದಲ್ಲಿ ಕಾರ್ಯಪ್ರವೃತ್ತರಾಗುವ ಹಾಗೂ ಆ ಪ್ರದೇಶಗಳಲ್ಲಿ ವಾಸಿಸುವ ಮನಸಿಲ್ಲದಿರುವುದು ಸಹ ಕಾರಣವಾಗಿದೆ. ಈ ಮೇಲಿನ ಅಂಶಗಳಿಂದ ಸ್ಪಷ್ಟವಾಗುವುದೇನೆಂದರೆ ವಾಣಿಜ್ಯ ಬ್ಯಾಂಕುಗಳು ಬಹುದೂರದ ಹಳ್ಳಿಗಳಲ್ಲಿ ತಮ್ಮ ಕಾರ್ಯನಿರ್ವಹಣೆಯನ್ನು ಸುಧಾರಿಸಲು ಸಾಧ್ಯವಾಗಿಲ್ಲ.[೧೩]

ಆ ಕಾರಣವಾಗಿ ಗ್ರಾಮೀಣ ಪತ್ತಿನ ಸಮಸ್ಯೆಗಳಿಗೆ ಪರಿಹಾರೋಪಾಯವಾಗಿ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಯ ಬಗ್ಗೆ ಪ್ರಸ್ತಾಪಿಸಲಾಯ್ತು. ೧೯೭೨ರ ಬ್ಯಾಂಕಿಂಗ್ ಕಮಿಷನ್ ವರದಿಯ ಪ್ರಕಾರ ಗ್ರಾಮೀಣ ಬ್ಯಾಂಕುಗಳು ಪ್ರಾಥಮಿಕ ಬ್ಯಾಂಕಿಂಗ್ ಸಂಸ್ಥೆಯಾಗಿದ್ದು, ಗ್ರಾಮೀಣ ಪ್ರದೇಶದಲ್ಲಿರುವವರಿಗೆ ಹೊಂದಿಕೊಂಡು ಸಾಮಾನ್ಯ ಸಹಕಾರಿ ಬ್ಯಾಂಕಾಗಿ ಅಥವಾ ವಾಣಿಜ್ಯ ಬ್ಯಾಂಕಿನ ಸಹ ವಲಯದ ಬ್ಯಾಂಕಾಗಿ ಕಾರ್ಯ ನಿರ್ವಹಿಸಬೇಕು ಎಂಬುದಾಗಿತ್ತು. ಗ್ರಾಮೀಣ ಕೃಷಿ, ಅದರ ಉತ್ಪನ್ನ, ಕೃಷಿ ಅವಲಂಬಿತ ಚಟುವಟಿಕೆಗಳಿಗೆ ಹಾಗೂ ಗ್ರಾಮೀಣ ಉತ್ಪಾದಕರಿಗೆ ಆಯಾ ಪ್ರದೇಶದಲ್ಲೇ ಬ್ಯಾಂಕಿಂಗ್ ಸೌಲಭ್ಯದೊಂದಿಗೆ ವಿಶೇಷ ರೀತಿಯ ಪತ್ತಿನ ನೆರವನ್ನೊದಗಿಸುವುದು ಅದರ ಗುರಿಯಾಗಿತ್ತು.[೧೪] ಅದರಂತೆ ಪ್ರಾದೇಶಿಕ ಬ್ಯಾಂಕುಗಳ ಪ್ರಸ್ತಾವನೆಯನ್ನು ಹೀಗೆ ವ್ಯಾಖ್ಯಾನಿಸಲಾಗಿದೆ. ಸಹಕಾರಿ ಬ್ಯಾಂಕುಗಳೊಂದಿಗೆ ಅಥವಾ ಪರವಾನಗಿ ಪಡೆದ ವಾಣಿಜ್ಯ ಬ್ಯಾಂಕಿನ ಸಹಾಯದೊಂದಿಗೆ ವ್ಯವಸ್ಥೆಗೊಳಿಸಿ, ಗ್ರಾಮೀಣ ಪ್ರದೇಶದ ಜನರಿಗೆ ಬ್ಯಾಂಕಿಂಗ್ ಮತ್ತು ಪತ್ತಿನ ಸೌಲಭ್ಯವನ್ನೊದಗಿಸುವುದಾಗಿದೆ.[೧೫]

ಬ್ಯಾಂಕಿಂಗ್ ಕಮಿಷನ್ ಸಮಿತಿಯು ಮೂರು ವಿಧದ ಗ್ರಾಮೀಣ ಬ್ಯಾಂಕುಗಳ ಪ್ರಸ್ತಾವನೆಗೆ ಶಿಫಾರಸ್ಸುಗಳನ್ನು ಮಾಡಿತು.

I. ಮೊದಲನೆಯದಾಗಿ ಮುಂದುವರೆಸಿಕೊಂಡು ಹೋಗಲು ಸಾಧ್ಯವಿರುವ ಪ್ರಾಥಮಿಕ ಪತ್ತಿನ ಸಹಕಾರ ಸಂಘಗಳನ್ನು ಗ್ರಾಮೀಣ ಸಹಕಾರಿ ಬ್ಯಾಂಕಾಗಿ ಪರಿವರ್ತಿಸುವುದು.

II. ಎರಡನೆಯದಾಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳನ್ನು ಪುನಃ ರಚಿಸಿ ಸಹಕಾರಿ ಬ್ಯಾಂಕಾಗಿ ಪರಿವರ್ತಿಸುವುದು.

III. ಮೂರನೆಯದಾಗಿ ವಾಣಿಜ್ಯ ಬ್ಯಾಂಕುಗಳನ್ನು ಸಹಕಾರಿ ಗ್ರಾಮೀಣ ಬ್ಯಾಂಕುಗಳಾಗಿ ಪರಿವರ್ತಿಸುವುದು.

ಮೇಲಿನ ಎರಡು ವಿಧದ ಪ್ರಾಥಮಿಕ ಪತ್ತಿನ ಸಹಕಾರಿ ಸಂಘಗಳನ್ನು ಗ್ರಾಮೀಣ ಸಹಕಾರಿ ಬ್ಯಾಂಕುಗಳೆಂದು, ಮೂರನೆಯದನ್ನು ವಾಣಿಜ್ಯ ಬ್ಯಾಂಕಿನ ಸಹಕಾರಿ ಬ್ಯಾಂಕುಗಳೆಂದು ಕರೆಯಲು ಪರಿಗಣಿಸಲಾಯಿತು.[೧೬]

ಬ್ಯಾಂಕಿಂಗ್ ಸಮಿತಿಯ ವರದಿಯ ಬಗ್ಗೆ ಸರ್ಕಾರ ೧೯೭೫ರ ಮಧ್ಯಭಾಗದವರೆಗೂ ಯಾವ ನಿರ್ಣಯವನ್ನೂ ಕೈಗೊಳ್ಳಲು ಸಾಧ್ಯವಾಗಲಿಲ್ಲ. ಭಾರತ ಸರ್ಕಾರದ ನೀತಿ ರೂಪಿಸುವವರು, ಗ್ರಾಮೀಣ ಬ್ಯಾಂಕುಗಳನ್ನು ರಾಷ್ಟ್ರದಲ್ಲಿ ಆರಂಭಿಸುವ ಬಗ್ಗೆ ಸರ್ಕಾರಕ್ಕೆ ಮನವರಿಕೆ ಮಾಡಿಕೊಟ್ಟರು. ೧೯೭೫ರ ಜುಲೈ ತಿಂಗಳಲ್ಲಿ ಭಾರತದ ಪ್ರಧಾನ ಮಂತ್ರಿಗಳು ರಾಷ್ಟ್ರದಲ್ಲಿ ತುರ್ತು ಪರಿಸ್ಥಿತಿಯನ್ನು ಘೋಷಿಸಿದರು. ಆ ಸಂದರ್ಭದಲ್ಲಿ ದುರ್ಬಲ ವರ್ಗದವರು ಗ್ರಾಮೀಣ ಪ್ರದೇಶದಲ್ಲಿನ ಸಾಂಸ್ಥಿಕೇತರ ಸಂಸ್ಥೆಗಳಿಂದ ಪಡೆದ ಸಾಲವನ್ನು ಮರುಪಾವತಿ ಮಾಡುವಂತಿಲ್ಲ ಎಂಬ ಕಾನೂನನ್ನು ಜಾರಿಗೆ ತಂದರು. ಈ ಕಾನೂನು

ರಾಷ್ಟ್ರದಾದ್ಯಂತಹ ಕಾರ್ಯಾಚರಣೆಗೆ ಬಂದಿತು. ಇದರಿಂದಾಗಿ ದುರ್ಬಲ ವರ್ಗದವರು ಸಾಂಸ್ಥಿಕೇತರ ಸಂಸ್ಥೆಗಳಲ್ಲಿ ಪಡೆದಂತಹ ಸಾಲವನ್ನು ಮರುಪಾವತಿ ಮಾಡುವ ಆಗಿಲ್ಲ ಹಾಗೂ ಅವರು ಆ ಸಾಲದಿಂದ ಮುಕ್ತರು ಎಂಬ ಕಾನೂನುಗಳು ಜಾರಿಗೆ ಬಂದಿದ್ದರಿಂದ, ಈ ಸಾಂಸ್ಥಿಕೇತರ ಸಂಸ್ಥೆಗಳವರು ಗ್ರಾಮೀಣ ಪ್ರದೇಶಗಳಲ್ಲಿ ತಮ್ಮ ವ್ಯವಹಾರವನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿದರು. ಆಗ ಸರಕಾರವು ಗ್ರಾಮೀಣ ಪ್ರದೇಶದ ಜನರ ಸಾಲದ ಅವಶ್ಯಕತೆಯನ್ನು ಪೂರೈಸಲು ಗಂಭೀರ ಚಿಂತನೆ ನಡೆಸಿ, ಹೊಸ ಸಾಲದ ಮೂಲವನ್ನು ಪರಿಶೋಧಿಸಲು ಪ್ರಯತ್ನಿಸಿ ಎಂ. ನರಸಿಂಹಮ್‌ರವರ ಅಧ್ಯಕ್ಷತೆಯಲ್ಲಿ "Working group of Rural Banks" ಎಂಬ ಸಮಿತಿಯನ್ನು ರಚಿಸಿತು. ಈ ಸಮಿತಿಯು ತನ್ನ ವರದಿಯನ್ನು ೧೯೭೫ರ ಜುಲೈ ತಿಂಗಳಲ್ಲಿ ಸರಕಾರಕ್ಕೆ ಸಲ್ಲಿಸಿತು.

ಗ್ರಾಮೀಣ ಪ್ರದೇಶದಲ್ಲಿ ಠೇವಣಿ ಸಂಗ್ರಹಿಸುವಲ್ಲಿ ವಿಫಲತೆ, ಅಧಿಕ ಸಾಲದ ಬಾಕಿ, ವ್ಯವಸ್ಥಾಪಕರ ಪ್ರಭುತ್ವ, ಪುನರ್ ಹಣಕಾಸಿನ ಸೌಲಭ್ಯವನ್ನು ಸಹಕಾರಿ ಸಂಘಗಳು ಸರಿಯಾಗಿ ಉಪಯೋಗಿಸಿಕೊಳ್ಳದೇ ಇರುವುದು ಒಂದೆಡೆಯಾದರೆ ಇನ್ನೊಂದೆಡೆ ವಾಣಿಜ್ಯ ಬ್ಯಾಂಕುಗಳು ತಮ್ಮದೇ ನ್ಯೂನ್ಯತೆಗಳಾದ ಅಧಿಕ ಪ್ರಮಾಣದ ಕಾರ್ಯನಿರ್ವಹಣಾ ವೆಚ್ಚ, ಪಟ್ಟಣಾಧಾರಿತ ಮನೋವೃತ್ತಿಯ ಸಿಬ್ಬಂದಿಯಿಂದಾಗಿ ಗ್ರಾಮೀಣ ಪ್ರದೇಶದ ಶಾಖೆಗಳ ವಿಸ್ತರಣೆಯು ಮಂದಗತಿಯಾಗಿರುವುದನ್ನು ಎಂ. ನರಸಿಂಹಮ್‌ರವರ ಸಮಿತಿಯ[೭೭] ವರದಿಯು ತಿಳಿಸುತ್ತದೆ.

ನಮ್ಮ ದೇಶವು ವೈವಿಧ್ಯತೆಯಿಂದ ಕೂಡಿದ್ದು, ರಾಷ್ಟ್ರದ ಎಲ್ಲಾ ಪ್ರದೇಶಗಳು ಏಕರೂಪದ ಮಾದರಿ ಇಲ್ಲದಿರುವುದರಿಂದ ವಾಣಿಜ್ಯ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರಿ ಸಂಘಗಳಿಂದ ಗ್ರಾಮೀಣ ಜನಪದರ ಸಾಲದ ಅವಶ್ಯಕತೆಯನ್ನು ಪೂರೈಸಲು ಸಾಧ್ಯವಾಗಿಲ್ಲದೇ ಇರುವುದು, ಮುಂದಾಲೋಚನೆಯಿಲ್ಲದೆ ಕಾರ್ಯರೂಪಕ್ಕೆ ತರುವ ಕಾರ್ಯಕ್ರಮಗಳು, ಗ್ರಾಮೀಣ ಸಾಲದ ಪೂರೈಕೆಯಲ್ಲಿ ವಿಫಲತೆಯನ್ನು ಹೊಂದಿರುವುದರಿಂದ, ಒಂದು ಹೊಸ ರೀತಿಯ ಹಣಕಾಸಿನ ಸಂಸ್ಥೆಯ ಅವಶ್ಯಕತೆಯಿದೆ ಎಂದು ನರಸಿಂಹಮ್ ಸಮಿತಿ[೭೮] ಅಭಿಪ್ರಾಯಪಟ್ಟಿತು. ಈ ಸಮಿತಿಯು ಮುಂದುವರೆದು ರಾಜ್ಯ ಸರ್ಕಾರ ಪ್ರಾಯೋಜಿತ "ಪ್ರಾದೇಶಿಕ ಗ್ರಾಮೀಣಾಧಾರಿತ ವಾಣಿಜ್ಯ ಬ್ಯಾಂಕುಗಳ"[೭೯] ಸ್ಥಾಪನೆಗೆ ಶಿಫಾರಸ್ಸು ಮಾಡಿತಲ್ಲದೆ, ಹಾಲಿ ಇರುವ ಹಣಕಾಸಿನ ಸಂಸ್ಥೆಗಳನ್ನು ನಿವೃತ್ತಿ ಪಡಿಸದೆ, ಮುಂದುವರೆಸಿಕೊಂಡು ಹೋಗಬೇಕು. ತೀರ ಹಿಂದುಳಿದ ಅಥವಾ ಬಹು ದೂರದ ಗ್ರಾಮಗಳ ಅಭಿವೃದ್ಧಿಯನ್ನು ಸಾಧಿಸಲು ಈಗ ಪ್ರಸ್ತಾಪಿಸಿದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಂದ ಸಾಧ್ಯ[೮೦] ಎಂದು ಸಮಿತಿ ಅಭಿಪ್ರಾಯಪಟ್ಟಿತು.

ಗ್ರಾಮೀಣ ಬ್ಯಾಂಕುಗಳ ಪ್ರಮುಖ ಉದ್ದೇಶಗಳೆಂದರೆ ಆ ಪ್ರದೇಶದ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಮತ್ತು ಆ ಸಂಪನ್ಮೂಲವನ್ನು ಅದೇ ಪ್ರದೇಶಗಳಲ್ಲಿ ಉಪಯೋಗಿಸಿಕೊಳ್ಳುವುದಾಗಿತ್ತು. ಗ್ರಾಮೀಣ ಪ್ರದೇಶದಲ್ಲಿನ ಸಣ್ಣ ಮತ್ತು ಅತಿಸಣ್ಣ ರೈತರಿಗೆ, ಕೃಷಿ ಕಾರ್ಮಿಕರಿಗೆ, ಸಣ್ಣ ವ್ಯಾಪಾರಸ್ಥರಿಗೆ ಹಾಗೂ ಸಮಾಜದಲ್ಲಿನ ಇನ್ನಿತರ ದುರ್ಬಲ ವರ್ಗದವರಿಗೆ ಪತ್ತನ್ನೊದಗಿಸಿ ಅವರಿಂದ ಸಾಲ

ವಾಪಾಸಾತಿಯನ್ನು ಪಡೆಯುವುದು ಮತ್ತು ಲಾಭಕ್ಕೆ ಹೆಚ್ಚು ಮಹತ್ವ ನೀಡದೆ ಅವರನ್ನು ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗುವಂತೆ ಪ್ರೇರೇಪಿಸುವುದು.[೨೦] ಈ ಬ್ಯಾಂಕುಗಳ ಸಾಲವು ಕೇವಲ ಉತ್ಪಾದಕ ಚಟುವಟಿಕೆಗಳಲ್ಲದೆ, ಯಥಾರ್ಥವಾಗಿ ಅನುಭೋಗದ ಪತ್ತನ್ನು ಗ್ರಾಮೀಣ ದುರ್ಬಲ ವರ್ಗದವರಿಗೆ ದೊರೆಯುವಂತೆ ಮಾಡಬೇಕು ಎಂದು ಸಮಿತಿಯು[೨೧] ಸ್ಪಷ್ಟಪಡಿಸಿತು. ಎಂ. ನರಸಿಂಹನ್ ಸಮಿತಿಯ ಶಿಫಾರಸ್ಸಿನಂತೆ ಪ್ರಪ್ರಥಮವಾಗಿ ೫ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ರಾಷ್ಟ್ರದ ಆಯ್ದ ಪ್ರದೇಶಗಳಲ್ಲಿ ಸ್ಥಾಪಿಸಲು ಕೇಂದ್ರ ಸರ್ಕಾರವು ನಿರ್ಣಯಿಸಿತು. ಈ ಬ್ಯಾಂಕುಗಳ ವಿಸ್ತರಣೆಯನ್ನು ಅದರ ಅನುಭವ ಮೌಲ್ಯಮಾಪನದ ನಂತರ ವಿಸ್ತರಿಸುವುದೆಂದು ನಿರ್ಣಯ ಕೈಗೊಳ್ಳಲಾಯಿತು.

ಭಾರತ ಸರ್ಕಾರವು ಈ ಸಮಿತಿಯ ಶಿಫಾರಸ್ಸುಗಳನ್ನು ಅಂಗೀಕರಿಸಿ ೧೯೭೫ರ ಸೆಪ್ಟೆಂಬರ್ ೨೬ ರಂದು ಸುಗ್ರೀವಾಜ್ಞೆಯೊಂದನ್ನು ಹೊರಡಿಸಿತು. (ಆರ್.ಆರ್.ಬಿ.ಕಾಯ್ದೆ) ಈ ಆಜ್ಞೆಯ ಪ್ರಕಾರ ಸರಕಾರವು ದೇಶದ ವಿವಿಧ ಭಾಗಗಳಲ್ಲಿ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸುವ ಅಧಿಕಾರವನ್ನು ಪಡೆಯಿತು. ಈ ಸುಗ್ರೀವಾಜ್ಞೆಗೆ ೧೯೭೬ರಲ್ಲಿ ಕಾಯ್ದೆಯ[೨೨] ಸ್ವರೂಪ ಕಲ್ಪಿಸಲಾಯಿತು. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳೆಂದರೆ ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿಸಲ್ಪಟ್ಟ ಶೆಡ್ಯೂಲ್ಡ ಬ್ಯಾಂಕುಗಳಾಗಿವೆ. ಈ ಬ್ಯಾಂಕುಗಳು ಕೃಷಿ, ವ್ಯಾಪಾರ, ವಾಣಿಜ್ಯ, ಕೈಗಾರಿಕೆ, ಉತ್ಪಾದಕ ಚಟುವಟಿಕೆಗಳಿಗೆ, ಸಣ್ಣ ಮತ್ತು ಅತಿಸಣ್ಣ ರೈತರಿಗೆ, ಕೃಷಿ ಕಾರ್ಮಿಕರಿಗೆ, ಸಣ್ಣ ಉದ್ದಿಮೆದಾರರಿಗೆ ಹಾಗೂ ಸಮಾಜದಲ್ಲಿನ ದುರ್ಬಲ ವರ್ಗದವರಿಗೆ ಪತ್ತನ್ನೊದಗಿಸಿ ಗ್ರಾಮೀಣಾರ್ಥಿಕಾಭಿವೃದ್ಧಿಯನ್ನು[೨೩] ಸಾಧಿಸುವುದಾಗಿದೆ.

೧೯೭೫ರಲ್ಲಿ ರಾಷ್ಟ್ರದಲ್ಲಿ ೫ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೧೭ ಶಾಖೆಗಳೊಂದಿಗೆ ೧೧ ಜಿಲ್ಲೆಗಳ ವ್ಯಾಪ್ತಿಯನ್ನು ಒಳಗೊಂಡು ಅಸ್ತಿತ್ವಕ್ಕೆ ಬಂದವು. ಆದರೆ ೧೯೯೯ ರ ಮಾರ್ಚ್ ಕೊನೆಯ ಹೊತ್ತಿಗೆ ೪೩೭ ಜಿಲ್ಲೆಗಳ ವ್ಯಾಪ್ತಿಯಲ್ಲಿ ೧೯೬ ಗ್ರಾಮೀಣ ಬ್ಯಾಂಕುಗಳು ೧೪,೪೭೫[೨೪] ಶಾಖೆಗಳನ್ನೊಳಗೊಂಡು ಕಾರ್ಯನಿರ್ವಹಿಸುತ್ತಿದ್ದವು ಎಂಬುದನ್ನು ಅಂಕಿ-ಅಂಶಗಳ ಮೂಲಕ ಕಂಡುಕೊಳ್ಳಬಹುದು. ೨೦೦೩ರ ಮಾರ್ಚ್ ಹೊತ್ತಿಗೆ ೧೫,೫೨೨ ಶಾಖೆಗಳನ್ನೊಳಗೊಂಡು ಕಾರ್ಯನಿರ್ವಹಿಸುತ್ತಿದ್ದವು. ೨೦೦೭ರ ಜೂನ್‌ನಲ್ಲಿ ಬ್ಯಾಂಕುಗಳ ವಿಲೀನದಿಂದಾಗಿ ೧೯೬ ಗ್ರಾಮೀಣ ಬ್ಯಾಂಕುಗಳ ಸಂಖ್ಯೆಯನ್ನು ೮೮ಕ್ಕೆ ಇಳಿಸಲಾಯಿತು. ಅದೇ ಕಾಲಾವಧಿಯಲ್ಲಿ ೧೪,೫೪೫ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ರಾಷ್ಟ್ರಾದ್ಯಂತ ಕಾರ್ಯನಿರ್ವಹಿಸುತ್ತಿವೆ.

ದೇಶದಲ್ಲಿ ೧೯೭೭ರಲ್ಲಿ ಜನತಾ ಸರ್ಕಾರವು ಅಸ್ತಿತ್ವಕ್ಕೆ ಬಂದಿತು. ಗ್ರಾಮೀಣ ಬ್ಯಾಂಕುಗಳು ೧೯೭೫ರ ತುರ್ತು ಪರಿಸ್ಥಿತಿಯಲ್ಲಿ ಅಸ್ತಿತ್ವಕ್ಕೆ ಬಂದಿದ್ದರಿಂದ ಹೊಸ ಸರ್ಕಾರವು ಬ್ಯಾಂಕಿನ ಬಗ್ಗೆ ಕೆಲವೊಂದು ಸಂದೇಹಗಳನ್ನು ವ್ಯಕ್ತಪಡಿಸಿತು. ಆಗ ಆರ್.ಬಿ.ಐ.ಯು "ಗ್ರಾಮೀಣ ಬ್ಯಾಂಕುಗಳ ಪರಿಶೀಲನಾ ಸಮಿತಿಯನ್ನು ಪ್ರೊ. ಎಂ.ಎಲ್. (೧೯೭೮) ದಂತವಾಲರವರ ಅಧ್ಯಕ್ಷತೆಯಲ್ಲಿ ರಚಿಸಿತು. ಈ ಸಮಿತಿಯು ತನ್ನ ವರದಿಯನ್ನು ಅದೇ ವರ್ಷದಲ್ಲಿ ಸರ್ಕಾರಕ್ಕೆ ಸಲ್ಲಿಸಿತು. ಈ ಸಮಿತಿಯು

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಹಿನ್ನೆಲೆ, ಹಣಕಾಸಿನ ಬಲ, ಅದರ ದುರ್ಬಲತೆ ಹಾಗೂ ಹಾಲಿ ಇರುವ ಸಹಕಾರಿ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕುಗಳ ಗ್ರಾಮೀಣ ಪತ್ತಿನ ರಚನೆ ಮತ್ತಿತರ ಅಂಶಗಳನ್ನು ರುಜುವಾತು ಮಾಡಿ ಗ್ರಾಮೀಣ ಬ್ಯಾಂಕುಗಳ ಅವಶ್ಯಕತೆ ದೇಶಕ್ಕೆ ಇದೆ[೨೬] ಎಂದು ಸ್ಪಷ್ಟಪಡಿಸಿತು. ಈ ಸಮಿತಿಯ ಪ್ರಕಾರ "ಗ್ರಾಮೀಣ ಬ್ಯಾಂಕುಗಳ ಸಂಘಟನೆ ಮತ್ತು ಅದರ ಕಾರ್ಯಗಳನ್ನು ಬದಲಾವಣೆಯನ್ನು ಮಾಡಿದರೆ, ಗ್ರಾಮೀಣ ಪತ್ತಿನ ರಚನೆಗೆ ಅನುಕೂಲವಾಗುತ್ತದೆ. ದೇಶವು ಇಂತಹ ಗ್ರಾಮೀಣ ಬ್ಯಾಂಕುಗಳನ್ನು ಅಳವಡಿಸಿಕೊಂಡು ಕೊರತೆಯಿರುವ ಪತ್ತಿನ ವ್ಯವಸ್ಥೆಯನ್ನು ಪೂರೈಸಬೇಕು"[೨೭] ಎಂದಿತು.

ಈ ಸಮಿತಿಯು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಭವಿಷ್ಯದ ಬಗ್ಗೆ ಎರಡು ಆಯ್ಕೆಗಳನ್ನು ರೂಪಿಸಿತು. ಮೊದಲನೆಯದಾಗಿ ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಸಂಘಗಳು ದುರ್ಬಲವಾಗಿರುವ ಪ್ರದೇಶಗಳಲ್ಲಿ ಗ್ರಾಮೀಣ ಬ್ಯಾಂಕುಗಳ ವಿಸ್ತರಣೆಯನ್ನು ನಿರ್ಬಂಧಿಸುವುದು. ಎರಡನೆಯದಾಗಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೆ ಪೂರ್ಣಪ್ರಮಾಣದ ಅಸ್ತಿತ್ವವನ್ನೊದಗಿಸುವುದು. ಈ ಮೇಲಿನ ಆಯ್ಕೆಗಳಲ್ಲಿ ಸಮಿತಿಯು ಎರಡನೆಯ ಅಂಶವನ್ನು ಆಯ್ಕೆ ಮಾಡಿಕೊಂಡಿತು.[೨೮] ಅಷ್ಟೇ ಅಲ್ಲದೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಗುಣಾತ್ಮಕ ಮತ್ತು ಗಾತ್ರಾತ್ಮಕ ಪತ್ತು ವಿಸ್ತರಣೆಯಿಂದ ಗ್ರಾಮೀಣ ಪತ್ತನ್ನು ಸುಧಾರಿಸಬಹುದೆಂದಿತು. ಈ ಮೊದಲು ಇದ್ದಂತಹ ವಾಣಿಜ್ಯ ಬ್ಯಾಂಕು ಮತ್ತು ಸಹಕಾರಿ ಸಂಘಗಳಿಂದಲೂ ಅಲ್ಲಿನ ಪತ್ತಿನ ಕೊರತೆಯನ್ನು ನೀಗಿಸಬಹುದಾದರೂ, ಭವಿಷ್ಯದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಂದಲೇ ಈ ಪತ್ತಿನ ಕೊರತೆಯನ್ನು ನೀಗಿಸಬಹುದೆಂದು[೨೯] ಸಮಿತಿಯು ತಿಳಿಸಿತು.

ಗ್ರಾಮೀಣ ಬ್ಯಾಂಕುಗಳ ಪರಿಶೀಲನಾ ಸಮಿತಿಯು ಗ್ರಾಮೀಣ ಮತ್ತು ವಾಣಿಜ್ಯ ಬ್ಯಾಂಕುಗಳ ಶಾಖಾ ವಿಸ್ತರಣೆಯ ಬಗ್ಗೆ ಮನದಟ್ಟು ಮಾಡಿಕೊಂಡು "ವಾಣಿಜ್ಯ ಬ್ಯಾಂಕುಗಳಿಗಿಂತ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಪತ್ತನ್ನು ಒದಗಿಸುವ ನೀತಿಯಲ್ಲಿ ತನ್ನದೇ ಆದ ಶ್ರೇಷ್ಟತೆಯನ್ನು ಹೊಂದಿದೆ ಎಂಬ ಅಂಶವನ್ನು ಸಮಿತಿಯು ಗಮನಿಸಿತು. ಗ್ರಾಮೀಣ ಬ್ಯಾಂಕುಗಳನ್ನು ವಾಣಿಜ್ಯ ಬ್ಯಾಂಕುಗಳಿಗೆ ಹೋಲಿಸಿದರೆ ಅತ್ಯಂತ ಕಡಿಮೆ ವೆಚ್ಚದ ಕಾರ್ಯನಿರ್ವಹಣೆ, ಸರಳತೆ, ಸ್ಥಳೀಯ ಭಾಷೆಯಲ್ಲಿ ವ್ಯವಹಾರ, ಸ್ಥಳೀಯರ ಸಹಕಾರ, ಸ್ಥಳೀಯ ಸಿಬ್ಬಂದಿಯೊಂದಿಗೆ ಹೊಂದಾಣಿಕೆ, ಜಿಲ್ಲಾಮಟ್ಟದ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಸಂಸ್ಥೆಗಳ ಸಹಕಾರದ ಮೂಲಕ ಕಾರ್ಯ ನಿರ್ವಹಿಸಬಹುದು.[೩೦] ವಾಣಿಜ್ಯ ಬ್ಯಾಂಕುಗಳ ಶಾಖಾ ವಿಸ್ತರಣೆಗೆ ಅವಕಾಶ ಕೊಡದೆ, ಈಗಿರುವ ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಪ್ರದೇಶದಲ್ಲಿ ತಾವು ನೀಡುತ್ತಿರುವ ಪತ್ತಿನ ಕಾರ್ಯವನ್ನು ಕ್ರಮೇಣವಾಗಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೆ ಬಿಟ್ಟು ಕೊಡುವುದು ಒಳ್ಳೆಯದೆಂಬ ಅಭಿಪ್ರಾಯವನ್ನು ಸಮಿತಿಯು[೩೧] ತಿಳಿಸಿತು.

೧೯೮೭ರಲ್ಲಿ ಭಾರತ ಸರ್ಕಾರ ಪುನಃ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಬಗ್ಗೆ ಪರಿಶೀಲನಾ ಸಮಿತಿಯನ್ನು ಕೇಲ್ಕಾರವರ ಅಧ್ಯಕ್ಷತೆಯಲ್ಲಿ ರಚಿಸಿತು (Working Group in Regional Rural

Banks). ಇವರ ಶಿಫಾರಸ್ಸುಗಳೆಂದರೆ, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೆ ಬೇಕಾಗಿರುವ ಹಣಕಾಸಿನ ಸೌಲಭ್ಯವನ್ನು ಹೆಚ್ಚಿಸುವುದು, ದಕ್ಷತೆಯಿಂದ ಕೂಡಿದ ಆಡಳಿತ ಪ್ರವರ್ತಕ ಬ್ಯಾಂಕಿನ ಸಹಕಾರ, ಭಾರತ ಸರ್ಕಾರ, ರಾಜ್ಯ ಸರ್ಕಾರ ಆರ್.ಬಿ.ಐ., ನಬಾರ್ಡ್ ಇವುಗಳ ಸಹಕಾರದಿಂದ ಈ ಬ್ಯಾಂಕುಗಳ ವಹಿವಾಟನ್ನು ಸುಧಾರಿಸುವುದು. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವವರನ್ನೇ ಬ್ಯಾಂಕಿನ ಸಿಬ್ಬಂದಿಯಾಗಿ ಆಯ್ಕೆ ಮಾಡಿಕೊಳ್ಳಬೇಕು ಹಾಗೂ ದುರ್ಬಲ ವರ್ಗದ ಜನಪದರ ಪತ್ತಿನ ಸಮಸ್ಯೆಯನ್ನು ತಳಮಟ್ಟದಿಂದಲೇ ಈಡೇರಿಸಲು ಈ ಬ್ಯಾಂಕುಗಳು ಅವಶ್ಯಕವಾಗಿವೆ ಎಂಬ ಅಂಶವನ್ನು ಪರಿಶೀಲನಾ ಸಮಿತಿ[೨೨] ತಿಳಿಸಿತು.

ಭಾರತ ಸರ್ಕಾರ ೧೯೮೯ರಲ್ಲಿ ಎಂ.ಎಂ. ಖುಸ್ರೂರ ಅಧ್ಯಕ್ಷತೆಯಲ್ಲಿ Agriculture Credit Review Committeeಯನ್ನು ರಚಿಸಲಾಯಿತು.[೨೩] ಈ ಸಮಿತಿಯು ಗ್ರಾಮೀಣ ಬ್ಯಾಂಕುಗಳನ್ನು ಅಭ್ಯಾಸಿಸಿದ ನಂತರ, ಈ ಬ್ಯಾಂಕುಗಳು ತಮ್ಮದೇ ಆದ ದೋಷಗಳನ್ನು ಹೊಂದಿವೆ ಎಂಬುದನ್ನು ಗುರುತಿಸಿತು.

ಈ ಬ್ಯಾಂಕುಗಳು ತಮ್ಮ ಉದ್ದೇಶಗಳನ್ನು ಈಡೇರಿಸುವಲ್ಲಿ ವಿಫಲವಾಗಿರುತ್ತವೆ, ಅವುಗಳನ್ನು ಸುಧಾರಿಸಲು ಸಾಧ್ಯವಿಲ್ಲ. ಸರ್ಕಾರದ ನಿರೀಕ್ಷೆಯಂತೆ ಸಮಾಜದಲ್ಲಿನ ಆದ್ಯತಾ ವಲಯಕ್ಕೆ ಹಿತವಾಗುವಂತಹ ಸೇವೆ ಸಲ್ಲಿಸಲು ಸಾಧ್ಯವಾಗದ ಕಾರಣ ಅವುಗಳನ್ನು ಪ್ರಾಯೋಜಿತ ವಾಣಿಜ್ಯ ಬ್ಯಾಂಕುಗಳಲ್ಲಿ ವಿಲೀನಗೊಳಿಸುವುದು ಒಳ್ಳೆಯದೆಂದು ಅವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿದರು. ಆದರೆ ಭಾರತ ಸರ್ಕಾರವು ಇವರ ಶಿಫಾರಸ್ಸುಗಳನ್ನು ಒಪ್ಪಿಕೊಳ್ಳಲಿಲ್ಲ.

೧೯೯೧ರಲ್ಲಿ ಭಾರತ ಸರಕಾರವು ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣಗಳನ್ನು ಅನುಸರಿಸಿದರ ಪರಿಣಾಮವಾಗಿ ಬೃಹತ್ ಪ್ರಮಾಣದಲ್ಲಿ ಹಣಕಾಸಿನ ಸುಧಾರಣೆಗಳನ್ನು ಪ್ರಾರಂಭಿಸಿತು ಹಾಗೂ ಎಂ. ನರಸಿಂಹನ್[೨೪]ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯು ಗ್ರಾಮೀಣ ಬ್ಯಾಂಕುಗಳ ಸಮಸ್ಯೆಗಳನ್ನು ಗುರುತಿಸಿ, ಅವುಗಳಿಗೆ ಪರಿಹಾರ ಕಂಡು ಹಿಡಿಯಲು ಪ್ರಯತ್ನಿಸಿತು. ಅದರ ಫಲವಾಗಿ ವಾಣಿಜ್ಯ ಬ್ಯಾಂಕುಗಳಿಗೆ ಬದಲಾಗಿ ಕಡಿಮೆ ವೆಚ್ಚದಲ್ಲಿ ಕಾರ್ಯನಿರ್ವಹಿಸುವ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲಾಗಿತ್ತು. ಆದರೆ ವಾಸ್ತವವಾಗಿ ವಾಣಿಜ್ಯ ಬ್ಯಾಂಕುಗಳಿಗಿಂತಲೂ ಗ್ರಾಮೀಣ ಬ್ಯಾಂಕುಗಳ ನಿರ್ವಹಣಾ ವೆಚ್ಚವು ಅಧಿಕವಾಗಿರುವುದನ್ನು ಕೆಳಗಿನ ಅಂಶಗಳಿಂದ ಸ್ಪಷ್ಟಪಡಿಸಿಕೊಳ್ಳಬಹುದು.

೧. ಗ್ರಾಮೀಣ ಬ್ಯಾಂಕುಗಳು ಕೈಗೊಳ್ಳುವ ವ್ಯವಹಾರದ ಮೇಲೆ ಹಲವಾರು ನಿರ್ಬಂಧಗಳನ್ನು ಹೇರಿದ್ದರಿಂದ ಅವುಗಳ ಗಳಿಕೆಯ ಸಾಮರ್ಥ್ಯ ಕಡಿಮೆ ಇದೆ.

೨. ಗ್ರಾಮೀಣ ಬ್ಯಾಂಕುಗಳ ವೇತನ, ಭತ್ಯೆ ಇತ್ಯಾದಿಗಳು ವಾಣಿಜ್ಯ ಬ್ಯಾಂಕುಗಳಂತೆಯೇ ಇದ್ದು, ಅವು ಸಾಕಷ್ಟು ಪ್ರಮಾಣದಲ್ಲಿ ಅಧಿಕವಾಗಿರುವುದರಿಂದ, ಅವುಗಳ ಸ್ಥಾಪನೆಯ ಉದ್ದೇಶವೇ ವಿಫಲವಾಗಿದೆ.

೩. ಗ್ರಾಮೀಣ ಬ್ಯಾಂಕನ್ನು ಪ್ರಾಯೋಜಿಸಿದ ಶೆಡ್ಯೂಲ್ಡ್ ವಾಣಿಜ್ಯ ಬ್ಯಾಂಕುಗಳು ತಮ್ಮ ಶಾಖೆಗಳನ್ನು ಗ್ರಾಮೀಣ ಬ್ಯಾಂಕುಗಳಿದ್ದ ಪ್ರದೇಶದಲ್ಲಿ ತೆರೆದಿದ್ದರಿಂದ ಅದು ಅನಾವಶ್ಯಕ ವೆಚ್ಚಕ್ಕೆ ಅವಕಾಶ ನೀಡಿದೆ.

ಆದ್ದರಿಂದ ಗ್ರಾಮೀಣ ಬ್ಯಾಂಕುಗಳು ತಮ್ಮ ಉದ್ದೇಶಗಳನ್ನು ಈಡೇರಿಸಬೇಕಾದರೆ ಅವುಗಳನ್ನು ಪುನಶ್ಚೇತನಗೊಳಿಸುವುದು ಅವಶ್ಯಕವಾಗಿದೆ. ಇದಕ್ಕಾಗಿ ಈ ಬ್ಯಾಂಕುಗಳು ಎದುರಿಸುತ್ತಿರುವ ಪೈಪೋಟಿಯನ್ನು ನಿವಾರಿಸಬೇಕಾಗಿದೆ. ಅಲ್ಲದೆ ಈ ಬ್ಯಾಂಕುಗಳನ್ನು ಪುನರ್ ಸಂಘಟಿಸುವುದು ಮುಖ್ಯವಾಗಿದೆ ಎಂದು ನರಸಿಂಹನ್ ಸಮಿತಿ ತನ್ನ ಶಿಫಾರಸ್ಸುಗಳನ್ನು ಸರ್ಕಾರಕ್ಕೆ ಸಲ್ಲಿಸಿತು.

**ಆ ಶಿಫಾರಸ್ಸುಗಳೆಂದರೆ**

೧. ಗ್ರಾಮೀಣ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳೊಂದಿಗೆ ತಮ್ಮ ಸಂಬಂಧವನ್ನು ಕಡಿದುಕೊಳ್ಳಬೇಕು. ಅವುಗಳನ್ನು ತಮ್ಮ ಸಹಾಯಕ ಅಂಗ ಸಂಸ್ಥೆಗೆ ಒಪ್ಪಿಸಬೇಕು.

೨. ಗ್ರಾಮೀಣ ಬ್ಯಾಂಕಿಂಗ್‌ನ್ನು ಮುಂದುವರೆಸಿಕೊಂಡು ಹೋಗಲು ಅವುಗಳ ವ್ಯವಹಾರದ ಮೇಲಿನ ನಿರ್ಬಂಧಗಳನ್ನು ತೆಗೆದು ಹಾಕಬೇಕು.

೩. ವಾಣಿಜ್ಯ ಬ್ಯಾಂಕುಗಳು ವಿಧಿಸುವ ಬಡ್ಡಿಯ ದರಗಳನ್ನು ಗ್ರಾಮೀಣ ಬ್ಯಾಂಕುಗಳು ವಿಧಿಸಬೇಕು. ಗ್ರಾಮೀಣ ಬ್ಯಾಂಕಿನಲ್ಲಿನ ಅಧಿಕವಾದ ಹಣವನ್ನು ಭದ್ರತಾ ಪತ್ರದಲ್ಲಿ ತೊಡಗಿಸಿ, ಆದಾಯ ಪಡೆಯುವಂತೆ ನಬಾರ್ಡ್ ಮಾರ್ಗದರ್ಶನ ನೀಡಬೇಕು. ಈ ಎಲ್ಲಾ ಕ್ರಮಗಳಿಂದ ಗ್ರಾಮೀಣ ಬ್ಯಾಂಕುಗಳ ಕಾರ್ಯನಿರ್ವಹಣೆಯು ಸುಧಾರಿಸಲು ಸಾಧ್ಯ ಎಂದು ಸಮಿತಿ ಶಿಫಾರಸ್ಸು ಮಾಡಿತು.

೧೯೯೬ರಲ್ಲಿ ಆರ್.ಬಿ.ಐ. ಪುನಃ ಗ್ರಾಮೀಣ ಬ್ಯಾಂಕುಗಳ ಪುನರಚನೆಯ ಬಗ್ಗೆ ಭಂಡಾರಿ[೨೫] ಸಮಿತಿಯನ್ನು ನೇಮಿಸಿತು. ಈ ಸಮಿತಿಯು ಗ್ರಾಮೀಣ ಬ್ಯಾಂಕುಗಳು ಕಾರ್ಯನಿರ್ವಹಣೆ, ದೀರ್ಘಾವಧಿ ಮುಂದುವರೆಯುವ ಬಗ್ಗೆ ತನ್ನದೇ ಆದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿತು.

ಈ ವರದಿಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಷೇರು ಬಂಡವಾಳವನ್ನು ೭೫ ಲಕ್ಷದಿಂದ ೧ ಕೋಟಿಗೇರಿಸಬೇಕು. ಮರುಪಾವತಿ ತೃಪ್ತಿಕರವಾಗಿಲ್ಲದ ಬ್ಯಾಂಕುಗಳ ಕಾರ್ಯಗಳನ್ನು ಪ್ರತಿ ತಿಂಗಳಿಗೊಮ್ಮೆ, ಅದರ ಉತ್ಪಾದಕತೆ, ನಗದು ವ್ಯವಸ್ಥಾಪನೆ, ಮುಂಗಡ ಖಾತೆ, ವಸೂಲಾತಿ ಸ್ಥಿತಿಯನ್ನು ನಬಾರ್ಡ್ ಪರಿಶೀಲಿಸಿ ಅವುಗಳಿಗೆ ಅವಶ್ಯಕವಾದ ಅಲ್ಪಾವದಿ ಕ್ರಮಗಳನ್ನು ಸೂಚಿಸಬೇಕೆಂದಿತು.

**ಆ ಕ್ರಮಗಳೆಂದರೆ**

೧. ಈ ಬ್ಯಾಂಕುಗಳು ಸೇವಾ ವಲಯದ ನಿರ್ಬಂಧದಿಂದ ಹೊರಬರಬೇಕು.

೨. ಆದ್ಯತೇತರ ವಲಯಕ್ಕೆ ೪೦ ರಿಂದ ೬೦ರಷ್ಟು ಹಣಕಾಸಿನ ನೆರವನ್ನು ಒದಗಿಸುವುದು.

೩. ನಷ್ಟದಲ್ಲಿರುವ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಕೃಷಿ ಮಾರುಕಟ್ಟೆಯ ಹತ್ತಿರ ವರ್ಗಾವಣೆಗೆ ಅವಕಾಶ ಕಲ್ಪಿಸುವುದು.

೪. ಈ ಬ್ಯಾಂಕುಗಳಿಗೆ ತಮ್ಮ ವಿಸ್ತರಣಾ ಕೇಂದ್ರವನ್ನು ಪ್ರಾರಂಭಿಸಲಿಕ್ಕೆ ಅವಕಾಶ ಕಲ್ಪಿಸುವುದು.

೫. ಗ್ರಾಹಕರ ಬೆಲೆ ಬಾಳುವ ವಸ್ತುಗಳಿಗೂ ಸಾಲ ದೊರೆಯುವಂತೆ ಮಾಡುವುದು.

ಈ ಮೇಲಿನ ಎಲ್ಲಾ ಕ್ರಮಗಳನ್ನು ಈ ಬ್ಯಾಂಕುಗಳು ಅನುಸರಿಸಬೇಕೆಂದು ನಬಾರ್ಡ ಸೂಚಿಸಿತು.

ಭಾರತ ಸರಕಾರದ ಜಾಯಿಂಟ ಪಾರ್ಲಿಮೆಂಟರಿ ಕಮಿಟಿಯು[೬೬] ಈ ಶಿಫಾರಸ್ಸುಗಳ ಅನ್ವಯ ಭಾರತೀಯ ರಿಸರ್ವ ಬ್ಯಾಂಕ್ "ವರ್ಕಿಂಗ್ ಗ್ರೂಪ್ ಆಫ್ ಟು ಇವಾಲ್ಯ ದಿ ಗೈಡ್ ಲೈನ್ ಫಾರ್ ವಾಲಂಟರಿ ಮರ್ಜಸ್ ಇನ್‌ವಾಲ್ವವಿಂಗ್ ಬ್ಯಾಂಕಿಂಗ್ ಕಮಿಟಿ" ಎಂಬ ಸಮಿತಿಯು ಗ್ರಾಮೀಣ ಬ್ಯಾಂಕುಗಳ ಸಂಯೋಜನೆಯ ಬಗ್ಗೆ ವರದಿ ಸಲ್ಲಿಸಿತು. ಇದಕ್ಕೆ ಪೂರಕವಾಗಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು, ಪ್ರಾಯೋಜಿತ ಬ್ಯಾಂಕುಗಳು ರಾಜ್ಯಮಟ್ಟದ ಸಂಯೋಜನೆಗೆ ಪ್ರೋತ್ಸಾಹ ನೀಡಿದವು.[೬೭]

ಭಾರತ ಸರಕಾರದ ಹಣಕಾಸು ಇಲಾಖೆಯು ನಬಾರ್ಡನೊಂದಿಗೆ ರಾಜ್ಯ ಸರಕಾರ ಮತ್ತು ಪ್ರಾಯೋಜಿತ ಬ್ಯಾಂಕುಗಳೊಂದಿಗೆ ಸಮಾಲೋಚಿಸಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕು ೧೯೭೬ರ ಕಾಯ್ದೆ ೨೩/ಎ[೬೮]ಗೆ ತಿದ್ದುಪಡಿ ತಂದು ಅವುಗಳನ್ನು ಸಂಯೋಜಿಸಲು ಸೆಪ್ಟೆಂಬರ್ ೨೦೦೫ ರಂದು ಕಾನೂನಿನ ವ್ಯಾಪ್ತಿ ಅಡಿಯಲ್ಲಿ ಕಾಯ್ದೆ ತರಲಾಯಿತು (ಆದೇಶ ಸಂಖ್ಯೆ : ಎಸ್.ನಂ.ಎಸ್.ನಂ.೧(೨)೨೦೦೧ ಆರ್.ಆರ್.ಬಿ., ದಿನಾಂಕ ೧೨.೦೯.೨೦೦೫). ಇದಕ್ಕೆ ಪೂರಕವಾಗಿ ಇಂಟರನಲ್ ಗ್ರೂಫ್ ಆನ್ ಆರ್.ಆರ್.ಬಿ. ಕಮಿಟಿಯು ಪ್ರಾದೇಶಿಕ ಬ್ಯಾಂಕುಗಳ ಒಗ್ಗೂಡುವಿಕೆಗೆ ಈ ಕೆಳಗಿನ ಶಿಫಾರಸ್ಸುಗಳನ್ನು ಮಾಡಿತು.

೧. ಪ್ರಾಯೋಜಿತ ಬ್ಯಾಂಕುಗಳಿಂದ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಆಯಾ ರಾಜ್ಯದಲ್ಲಿ ಒಗ್ಗೂಡಿಸುವುದು.

೨. ಬ್ಯಾಂಕುಗಳನ್ನು ಒಗ್ಗೂಡಿಸುವುದರಿಂದ ಆಡಳಿತಾತ್ಮಕ ವೆಚ್ಚವನ್ನು ಕಡಿಮೆ ಮಾಡುವುದರ ಜೊತೆಗೆ ಸ್ಪರ್ಧಾತ್ಮಕ ಬೆಳವಣಿಗೆಯನ್ನು ಕಾಣಲು, ಕೆಲಸದಲ್ಲಿ ದಕ್ಷತೆ ಮುಂತಾದವುಗಳ ಸುಧಾರಣೆಗೆ ಸಹಾಯಕವಾಗುತ್ತದೆ.

೩. ಬ್ಯಾಂಕುಗಳು ಒಗ್ಗೂಡಿಸುವುದರಿಂದ ನಷ್ಟದಲ್ಲಿರುವ ಬ್ಯಾಂಕುಗಳನ್ನು ಪುನಶ್ಚೇತನಗೊಳಿಸಲು ಸಹಾಯಕವಾಗುತ್ತದೆ.

೪. ಬ್ಯಾಂಕಿನ ಸಿಬ್ಬಂದಿಯನ್ನು ಆಯ್ಕೆ ಮಾಡಿಕೊಳ್ಳುವಾಗ ಪಾರದರ್ಶಕತೆಯನ್ನು ಅನುಸರಿಸುವುದು.

೫. ಬ್ಯಾಂಕುಗಳ ನೌಕರರಿಗೆ ತರಬೇತಿ, ಕೌಶಲ್ಯ ಹೆಚ್ಚಿಸುವ ಕಾರ್ಯಕ್ರಮಗಳು ಹಾಗೂ ಮಾಹಿತಿ ತಂತ್ರಜ್ಞಾನ ಒದಗಿಸುವುದು.

ಈ ಎಲ್ಲಾ ಅಂಶಗಳ ಬಗ್ಗೆ ಯುಕ್ತ ಮತ್ತು ವಿಧಿಬದ್ಧವಾದ ಮೇಲ್ವಿಚಾರಣೆಯನ್ನು ಆರ್.ಬಿ.ಐ. ಕೈಗೊಳ್ಳುವುದು. ಅದರಂತೆ ೧೨.೦೯.೨೦೦೫ರಿಂದ ಪ್ರಾಯೋಜಿತ ಬ್ಯಾಂಕ್ ಅಧೀನದಲ್ಲಿ

ಕಾರ್ಯನಿರ್ವಹಿಸುತ್ತಿರುವ ಬ್ಯಾಂಕುಗಳು ಒಗ್ಗೂಡಿ ಕಾರ್ಯನಿರ್ವಹಿಸುತ್ತಿವೆ. ೨೦೦೭ರ ಜೂನ್ ವೇಳೆಗೆ ೮೮ ಗ್ರಾಮೀಣ ಬ್ಯಾಂಕುಗಳು ೧೪,೫೪೫ ಶಾಖೆಗಳೊಂದಿಗೆ ದೇಶದಾದ್ಯಂತ ಕೆಲಸ ನಿರ್ವಹಿಸುತ್ತಿವೆ.

## ೩.೨. ಭಾರತದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪ್ರಗತಿ

೧೯೭೫ರ ಅಕ್ಟೋಬರ್ ೨ ರಂದು ಪ್ರಪ್ರಥಮವಾಗಿ ೫ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಲಾಯಿತು. ೧೯೭೬ರ ಕೊನೆಯ ಹೊತ್ತಿಗೆ ೪೦ ಪ್ರಾದೇಶಿಕ ಬ್ಯಾಂಕುಗಳು ೪೮೯ ಶಾಖೆಗಳನ್ನೊಳಗೊಂಡು ೮೪ ಜಿಲ್ಲೆಗಳ ಕಾರ್ಯವ್ಯಾಪ್ತಿಯನ್ನು ಒಳಗೊಂಡಿತ್ತು. ಮಾರ್ಚ್ ೧೯೯೫ರ ಮಾರ್ಚ್ ಕೊನೆಯ ಹೊತ್ತಿಗೆ ೧೯೬ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೧೪,೫೩೬ ಶಾಖೆಗಳನ್ನೊಳಗೊಂಡು ೪೩೭* ಜಿಲ್ಲೆಗಳ ವ್ಯಾಪ್ತಿಯನ್ನು ಒಳಗೊಂಡಿತ್ತು. ಆದರೆ ೨೦೦೭ರ ಜೂನ್ ಕೊನೆಯ ಹೊತ್ತಿಗೆ ದೇಶದಾದ್ಯಂತ ಇರುವ ೮೮** ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೧೪,೫೪೫ ಶಾಖೆಗಳೊಂದಿಗೆ ೪೩೯ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿವೆ.

### ಪಟ್ಟಿ ೧

### ರಾಷ್ಟ್ರದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪ್ರಗತಿ

ಕೋಟಿ ರೂಪಾಯಿಗಳಲ್ಲಿ

| ಜಿಲ್ಲೆಗಳ ವ್ಯಾಪ್ತಿ | ವರ್ಷ ಕೊನೆ | ಪ್ರಾ.ಗ್ರಾ. ಬ್ಯಾಂಕುಗಳ ಸಂಖ್ಯೆ | ಶಾಖೆಗಳ ಸಂಖ್ಯೆ | ಠೇವಣಿಗಳು | ಮುಂಗಡಗಳು | ಸಾಲ ಮತ್ತು ಠೇವಣಿಗಳ ಅನುಪಾತ |
|---|---|---|---|---|---|---|
| ೬ | ಡಿಸೆಂಬರ್ ೧೯೭೫ | ೫ | ೧೭ | ೦.೨೦ | ೦.೧೦ | ೫೦ |
| ೮೪ | ಡಿಸೆಂಬರ್ ೧೯೭೬ | ೪೦ | ೪೮೯ | ೭.೭೨ | ೭.೦೨ | ೯೧ |
| ೧೧೪ | ಡಿಸೆಂಬರ್ ೧೯೮೦ | ೮೫ | ೩೨೭೯ | ೧೯೯.೮೩ | ೨೪೩.೩೮ | ೧೨೨ |
| ೩೩೩ | ಡಿಸೆಂಬರ್ ೧೯೮೫ | ೧೮೮ | ೧೨೬೦೬ | ೧೨೮೫.೮೨ | ೧೪೦೭.೬೭ | ೧೦೯ |
| ೩೮೦ | ಮಾರ್ಚ್ ೧೯೯೦ | ೧೯೬ | ೧೪೦೭೯ | ೪೧೫೦.೫೨ | ೩೫೫೪.೦೪ | ೮೬ |
| ೪೦೫ | ಮಾರ್ಚ್ ೧೯೯೫ | ೧೯೬ | ೧೪೫೩೬ | ೧೧೧೫೦.೧೭ | ೬೨೯೦.೨೨ | ೫೬ |
| ೪೩೭ | ಮಾರ್ಚ್ ೧೯೯೭ | ೧೯೬ | ೧೪೪೬೧ | ೧೮೦೩೨.೦೧ | ೮೭೧೮ | ೪೮ |
| ೪೩೯ | ಜೂನ್ ೨೦೦೭ | ೮೮ | ೧೪೫೪೫ | ೮೦೨೧೭ | ೪೮೪೮೮ | ೬೦ |

ಆಧಾರ : ಆರ್.ಬಿ. ರಿಪೋರ್ಟ್ ಆನ್ ದಿ ಟ್ರೆಂಡ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ-೧೯೯೦-೧೯೯೭, ೨೦೦೮ ಪು. ೫೮ ಪು. ೭೨.

ರಾಷ್ಟ್ರದಲ್ಲಿನ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೆ ಠೇವಣಿಗಳೇ ಪ್ರಮುಖ ಸಂಪನ್ಮೂಲಗಳಾಗಿವೆ. ೧೯೭೫ರಲ್ಲಿ ೨೦ ಕೋಟಿ ರೂಪಾಯಿಗಳ ಠೇವಣಿಯನ್ನು ಸಂಗ್ರಹಿಸಿತ್ತು. ೧೯೯೦ರ ವೇಳೆಗೆ ೪,೧೫೦.೫೨ ಕೋಟಿ ರೂಪಾಯಿಗಳು ೨೦೦೭ರ ಜೂನ್ ಕೊನೆಯ ಹೊತ್ತಿಗೆ ೮೦೨೧೭ ಕೋಟಿ ರೂಪಾಯಿಗಳಿಗೆ ಠೇವಣಿ ಅಧಿಕವಾಗಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು. ಅದೇ ಕಾಲಾವಧಿಯಲ್ಲಿ ಸಾಲ ಮತ್ತು ಮುಂಗಡಗಳು ೧೦ ಕೋಟಿಯಿಂದ ೩೬೦೯,೨೭ ಕೋಟಿ ಹಾಗೂ ೪೮,೪೮೪ ಕೋಟಿ ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಕೂಡ ಪಟ್ಟಿಯ ಮೂಲಕ ನೋಡಬಹುದು. ಸಾಲ ಮತ್ತು ಠೇವಣಿಯ ಅನುಪಾತವು ೫೦, ೮೬ ಮತ್ತು ೬೦ರಷ್ಟು ಇರುವುದನ್ನು ಕಾಣುತ್ತೇವೆ.

**ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ (NABARD)**

ಕೃಷಿ ಮತ್ತು ಪುನರ್‌ಧನ ಅಭಿವೃದ್ಧಿ ಕಾರ್ಪೋರೇಷನ್‌ಗೆ ಬದಲಾಗಿ ನಬಾರ್ಡ್ ೧೯೮೨[೪೧]ರ ಜುಲೈ ತಿಂಗಳಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಸಂಸ್ಥೆಯ ಉದ್ದೇಶವೆಂದರೆ, ಉತ್ಪಾದಕ ಚಟುವಟಿಕೆಗಳಿಗೆ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ, ಪುನರ್‌ಧನ ಸೌಲಭ್ಯವನ್ನು ಅಪೆಕ್ಸ್ ಬ್ಯಾಂಕ್ ಮೂಲಕ ರಾಜ್ಯ ಮಟ್ಟದಲ್ಲಿ, ಗ್ರಾಮೀಣ ಬ್ಯಾಂಕ್‌ಗಳ ಮೂಲಕ ಗ್ರಾಮ ಮಟ್ಟದಲ್ಲಿ ಆರ್.ಬಿ.ಐ.ನಿಂದ ಅಂಗೀಕರಿಸಲ್ಪಟ್ಟಂತಹ ಸಂಸ್ಥೆಗಳಿಗೆ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿಯ ಸಾಲನ್ನು ಒದಗಿಸುವುದಾಗಿದೆ.

ಆರ್.ಬಿ.ಐ.ಯು ಗ್ರಾಮೀಣ ಬ್ಯಾಂಕುಗಳಿಗೆ ನಬಾರ್ಡ್ ಮೂಲಕ ಪ್ರತಿಶತ ೫೦ರಷ್ಟು ಪುನರ್‌ಧನ ಸೌಲಭ್ಯವನ್ನು ವಾರ್ಷಿಕ ಬಡ್ಡಿಯ ದರ ೬ ರಂತೆ ಒದಗಿಸುವ ಸೌಲಭ್ಯವನ್ನು ಕಲ್ಪಿಸಿತು. ಯಾವ ಗ್ರಾಮೀಣ ಬ್ಯಾಂಕುಗಳು ೧೯೮೪ ಜುಲೈ ಹೊತ್ತಿಗೆ ೫ ವರ್ಷ ಪೂರೈಸಿರುತ್ತದೋ ಅಂತಹ ಬ್ಯಾಂಕುಗಳಿಗೆ ನಬಾರ್ಡ್ (೧೯೮೨) ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲವನ್ನೊದಗಿಸುವ ಅವಕಾಶವನ್ನು ಕಲ್ಪಿಸಿತು. ನಬಾರ್ಡ್‌ನ ರಾಷ್ಟ್ರೀಯ ಗ್ರಾಮೀಣ ನಿಧಿಯಿಂದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಗೆ ಸಾಲ ದೊರೆಯುತ್ತದೆ. ಗ್ರಾಮೀಣ ಬ್ಯಾಂಕುಗಳು ತಮ್ಮ ವ್ಯವಹಾರಕ್ಕನುಗುಣವಾಗಿ ಪ್ರತಿಶತ ೪೦ ರಿಂದ ೫೦ರಷ್ಟು ಪುನರ್‌ಧನ ಸೌಲಭ್ಯವನ್ನು ಪಡೆಯುತ್ತವೆ. ನಬಾರ್ಡ್ ಗ್ರಾಮೀಣ ಬ್ಯಾಂಕುಗಳಿಗೆ ಪತ್ತಿನ ಅನುಮೋದನೆ ಕೊಡುವ ಮೊದಲು, ಹಿಂದಿನ ವರ್ಷದ ಮರುಪಾವತಿಯನ್ನು ಪರಿಶೀಲಿಸಿ ನಂತರ ಹೊಸ ಪತ್ತಿಗೆ ಮಂಜುರಾತಿ ನೀಡುತ್ತದೆ. ಆದರೆ ಪ್ರತಿಶತ ೬೦ರಷ್ಟು ಬಾಕಿ ಇರುವ ಬ್ಯಾಂಕುಗಳಿಗೆ ಹೊಸ ಪತ್ತಿನ ಅನುಮೋದನೆಯನ್ನು ನೀಡುವುದಿಲ್ಲ.

೧೯೮೪ರಲ್ಲಿ ವಿವಿಧ ಗ್ರಾಮೀಣ ಬ್ಯಾಂಕುಗಳು ನಬಾರ್ಡ್‌ನಿಂದ ೩೪೬.೮ ಕೋಟಿ ರೂಪಾಯಿಗಳ ವಿವಿಧ ರೀತಿಯ ಸಾಲವನ್ನು ಪಡೆದಿವೆ.[೪೨] ೧೯೯೭ರಲ್ಲಿ ೩೪೬೮ ಕೋಟಿ ರೂಪಾಯಿಗಳನ್ನು ನಬಾರ್ಡ್‌ನಿಂದ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಅಲ್ಪಾವಧಿ, ಮಧ್ಯಮಾವಧಿ ಹಾಗೂ ದೀರ್ಘಾವಧಿ ಸಾಲವನ್ನು

ಪಡೆದಿವೆ. ಈ ಅಂಶಗಳಿಂದ ಸ್ಪಷ್ಟವಾಗುವುದೇನೆಂದರೆ ನಬಾರ್ಡ್ ಒದಗಿಸುತ್ತಿರುವ ಪುನರ್‌ಧನ ಸೌಲಭ್ಯವು ಗ್ರಾಮೀಣಾಭಿವೃದ್ಧಿ ಸಹಾಯಕವಾಗಿದೆ ಎನ್ನಬಹುದು. ೧೯೮೪ರಿಂದ ೧೯೯೭ರವರೆಗಿನ ಕಾಲಾವಧಿಯಲ್ಲಿ ಪ್ರತಿಶತ ೧೦೦೨ ಪಟ್ಟು ಪತ್ತು ಅಧಿಕವಾಗಿರುವುದನ್ನು ಅಂಕಿ ಅಂಶಗಳ ಮೂಲಕ ಕಂಡುಕೊಳ್ಳಬಹುದಾಗಿದೆ.

**೩.೩. ಕರ್ನಾಟಕದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪ್ರಗತಿ ಹಾಗೂ ಉದ್ದೇಶ**

ಕರ್ನಾಟಕ ರಾಜ್ಯವು ೨೯ ಜಿಲ್ಲೆಗಳು ಹಾಗೂ ೧೭೫ ತಾಲೂಕುಗಳನ್ನು ಒಳಗೊಂಡು ಅಭಿವೃದ್ಧಿ ಹೊಂದುತ್ತಿರುವ ರಾಜ್ಯವಾಗಿದೆ. ಬೆಂಗಳೂರು ನಗರ ಜಿಲ್ಲೆಯನ್ನು ಹೊರತುಪಡಿಸಿ ಉಳಿದೆಲ್ಲಾ ಜಿಲ್ಲೆಗಳು ಕೃಷಿ ಆಧಾರಿತವಾಗಿವೆ. ಲೆಕ್ಕ ಪರಿಶೋಧಕರ (೧೯೭೫) ಪ್ರಕಾರ[೪೩] ರಾಜ್ಯದಲ್ಲಿರುವ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರಿ ಸಂಘಗಳು ಅಧಿಕ ಪ್ರಮಾಣದಲ್ಲಿ ಮುಚ್ಚುವ ಕಡೆಗೆ ಸಾಗಿವೆ.

ಸಣ್ಣ/ಅತಿಸಣ್ಣ ರೈತರು, ಕೈಕಸಬುದಾರರು, ಸಣ್ಣ ವ್ಯಾಪಾರಸ್ಥರು ಇನ್ನೂ ಮುಂತಾದ ದುರ್ಬಲ ವರ್ಗದವರು ಸಾಲದ ವೇದನೆಯನ್ನು ಅನುಭವಿಸುತ್ತಿದ್ದರು. ಇವರನ್ನು ಸಾಲದ ವ್ಯಾಪ್ತಿಗೆ ಒಳಪಡಿಸಿ, ಅವರನ್ನು ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗುವಂತೆ ಹಾಗೂ ಅವರಲ್ಲಿನ ಉಳಿತಾಯ ಮನೋಭಾವನೆಯನ್ನು ಸುಧಾರಿಸುವುದಕ್ಕಾಗಿ ಸರಕಾರವು ೬ನೇ ಪಂಚವಾರ್ಷಿಕ ಯೋಜನೆಯಲ್ಲಿ ಎಲ್ಲಾ ಜಿಲ್ಲೆಗಳಿಗೆ ಅನ್ವಯವಾಗುವಂತೆ ಗ್ರಾಮೀಣ ಪ್ರದೇಶಗಳಲ್ಲಿ ಈ ಬ್ಯಾಂಕುಗಳನ್ನು ಸ್ಥಾಪಿಸುವುದಕ್ಕೆ ಯೋಜನೆಯನ್ನು[೪೪] ರೂಪಿಸಿತು.

ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ ಕಾಯ್ದೆಯನ್ವಯ ರಾಜ್ಯದಲ್ಲಿ ೧೩ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದವು. ಈ ಬ್ಯಾಂಕುಗಳು ರಾಷ್ಟ್ರೀಕರಣಗೊಂಡಂತಹ ಕೆನರಾ ಬ್ಯಾಂಕು, ಸಿಂಡಿಕೇಟ್ ಬ್ಯಾಂಕುಗಳು ತಲಾ ೪ ಗ್ರಾಮೀಣ ಬ್ಯಾಂಕುಗಳಿಗೆ ಎಸ್.ಬಿ.ಎಂ. ೨ ಗ್ರಾಮೀಣ ಬ್ಯಾಂಕುಗಳಿಗೆ, ಕಾರ್ಪೋರೇಷನ್ ಬ್ಯಾಂಕು, ಸ್ಟೇಟ್ ಬ್ಯಾಕ್ ಆಫ್ ಇಂಡಿಯಾ ಹಾಗೂ ವಿಜಯ ಬ್ಯಾಂಕು ತಲಾ ಒಂದೊಂದು ಗ್ರಾಮೀಣ ಬ್ಯಾಂಕುಗಳಿಗೆ ಪ್ರೇರಕ ಬ್ಯಾಂಕಾಗಿ ಕಾರ್ಯನಿರ್ವಹಿಸುತ್ತಿವೆ. ಈ ಬ್ಯಾಂಕುಗಳು ಬಹುದೂರದ ಗ್ರಾಮೀಣ ಪ್ರದೇಶಗಳಿಗೆ ಪತ್ತಿನ ವ್ಯವಸ್ಥೆಯನ್ನು ಕಲ್ಪಿಸಿಕೊಡಲು ಅಸ್ತಿತ್ವಕ್ಕೆ ಬಂದವು. ಈ ಬ್ಯಾಂಕುಗಳು ಸ್ಥಾಪನೆಯಾದ ವರ್ಷ ಕೇಂದ್ರ ಸ್ಥಾನ ಜಿಲ್ಲೆ ಮತ್ತು ಪ್ರವರ್ತಕ ಬ್ಯಾಂಕುಗಳ ಬಗ್ಗೆ ಮಾಹಿತಿಯನ್ನು ಪಟ್ಟಿಯ ೨ರ ಮೂಲಕ ಪಡೆದುಕೊಳ್ಳಬಹುದು.

## ಪಟ್ಟಿ ೨

### ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆಯಾದ ವರ್ಷ ಜಿಲ್ಲೆ ಮತ್ತು ಪ್ರವರ್ತಕ ಬ್ಯಾಂಕ್

| ಕ್ರ.ಸಂ. | ಪ್ರಾ.ಗ್ರಾ.ಬ್ಯಾಂಕ್ ಹೆಸರು, ಕೇಂದ್ರ ಸ್ಥಾನ | ಸ್ಥಾಪನೆಯ ವರ್ಷ | ಪ್ರವರ್ತಕ ಬ್ಯಾಂಕ್ | ಕಾರ್ಯಗತ ಜಿಲ್ಲೆಗಳು | ವ್ಯಾಪಿಸಿದ ಜಿಲ್ಲೆಗಳ ಸಂಖ್ಯೆ |
|---|---|---|---|---|---|
| ೦೧. | ತುಂಗಭದ್ರಾ ಗ್ರಾಮೀಣ ಬ್ಯಾಂಕ್, ಬಳ್ಳಾರಿ | ೨೬.೦೧.೭೬ | ಕೆನರಾ ಬ್ಯಾಂಕ್ | ಬಳ್ಳಾರಿ ರಾಯಚೂರು | ೨ |
| ೦೨. | ಮಲಪ್ರಭಾ ಗ್ರಾಮೀಣ ಬ್ಯಾಂಕ್, ಧಾರವಾಡ | ೩೦.೦೮.೭೬ | ಸಿಂಡಿಕೇಟ್ ಬ್ಯಾಂಕ್ | ಧಾರವಾಡ ಬೆಳಗಾಂ | ೨ |
| ೦೩. | ಕಾವೇರಿ ಗ್ರಾಮೀಣ ಬ್ಯಾಂಕ್, ಮೈಸೂರು | ೦೨.೧೦.೭೬ | ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | ಮೈಸೂರು ಹಾಸನ | ೨ |
| ೦೪. | ಕೃಷ್ಣ ಗ್ರಾಮೀಣ ಬ್ಯಾಂಕ್, ಗುಲ್ಬರ್ಗಾ | ೦೧.೧೨.೭೮ | ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ | ಗುಲ್ಬರ್ಗಾ ಬೀದರ | ೨ |
| ೦೫. | ಚಿತ್ರದುರ್ಗ ಗ್ರಾಮೀಣ ಬ್ಯಾಂಕ್, ಚಿತ್ರದುರ್ಗ | ೦೫.೦೮.೮೧ | ಕೆನರಾ ಬ್ಯಾಂಕ್ | ಚಿತ್ರದುರ್ಗ | ೧ |
| ೦೬. | ಕಲ್ಪತರು ಗ್ರಾಮೀಣ ಬ್ಯಾಂಕ್, ತುಮಕೂರು | ೩೧.೦೩.೮೨ | ಸ್ಟೇಟ್ ಬ್ಯಾಂಕ್ ಆಫ್ ಮೈಸೂರು | ಬೆಂಗಳೂರು ಗ್ರಾಮಾಂತರ ತುಮಕೂರು | ೨ |
| ೦೭. | ಕೋಲಾರ ಗ್ರಾಮೀಣ ಬ್ಯಾಂಕ್, ಕೋಲಾರ | ೧೬.೦೨.೮೩ | ಕೆನರಾ ಬ್ಯಾಂಕ್ | ಕೋಲಾರ | ೧ |
| ೦೮. | ಬಿಜಾಪುರ ಗ್ರಾಮೀಣ ಬ್ಯಾಂಕ್, ಬಿಜಾಪುರ | ೩೧.೦೩.೮೪ | ಸಿಂಡಿಕೇಟ್ ಬ್ಯಾಂಕ್ | ಬಿಜಾಪುರ | ೧ |
| ೦೯. | ಚಿಕ್ಕಮಗಳೂರು ಮತ್ತು ಕೊಡಗು ಗ್ರಾಮೀಣ ಬ್ಯಾಂಕ್, ಚಿಕ್ಕಮಗಳೂರು | ೨೮.೦೪.೮೪ | ಕಾರ್ಪೋರೇಷನ್ ಬ್ಯಾಂಕ್ | ಚಿಕ್ಕಮಗಳೂರು ಕೊಡಗು | ೨ |
| ೧೦. | ಸಹ್ಯಾದ್ರಿ ಗ್ರಾಮೀಣ ಬ್ಯಾಂಕ್, ಶಿವಮೊಗ್ಗ | --- | ಕೆನರಾ ಬ್ಯಾಂಕ್ | ಶಿವಮೊಗ್ಗ | ೧ |
| ೧೧. | ವೇದ ಗ್ರಾಮೀಣ ಬ್ಯಾಂಕ್, ಉತ್ತರ ಕನ್ನಡ | ೧೦.೧೦.೮೪ | ಸಿಂಡಿಕೇಟ್ ಬ್ಯಾಂಕ್ | ಉತ್ತರ ಕನ್ನಡ | ೧ |
| ೧೨. | ನೇತ್ರಾವತಿ ಗ್ರಾಮೀಣ ಬ್ಯಾಂಕ್, ದಕ್ಷಿಣ ಕನ್ನಡ | ೧೦.೧೦.೮೪ | ಸಿಂಡಿಕೇಟ್ ಬ್ಯಾಂಕ್ | ದಕ್ಷಿಣ ಕನ್ನಡ | ೧ |
| ೧೩. | ವಿಶ್ವೇಶ್ವರಯ್ಯ ಗ್ರಾಮೀಣ ಬ್ಯಾಂಕ್, ಮಂಡ್ಯ | ೨೭.೯೩.೮೫ | ವಿಜಯ ಬ್ಯಾಂಕ್ | ಮಂಡ್ಯ | ೧ |
| | (ಒಟ್ಟು, ಜಿಲ್ಲೆಗಳ ಸಂಖ್ಯೆ : ೧೯೯೭-೯೮ ರ ಪೂರ್ವದಲ್ಲಿ) | | | | ೧೧ |

**ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಮುಖ್ಯ ಉದ್ದೇಶಗಳು**

೧. ಗ್ರಾಮೀಣ ಪ್ರದೇಶದಲ್ಲಿ ಕೃಷಿ, ವ್ಯಾಪಾರ, ವಾಣಿಜ್ಯ, ಉದ್ದಿಮೆ ಮತ್ತು ಇತರ ಉತ್ಪಾದಕ ಚಟುವಟಿಕೆಗಳ ಅಭಿವೃದ್ಧಿಗಾಗಿ ಸಣ್ಣ/ಅತಿಸಣ್ಣ ರೈತರಿಗೆ, ದುರ್ಬಲ ವರ್ಗದವರಿಗೆ ಭೂರಹಿತ ಕೃಷಿ ಕಾರ್ಮಿಕರಿಗೆ, ಕರ-ಕುಶಲಕರ್ಮಿಗಳಿಗೆ ಮತ್ತು ಚಿಕ್ಕ ವ್ಯಾಪಾರಸ್ಥರಿಗೆ ಸಾಲ ಮತ್ತು ಇತರ ಸೌಲಭ್ಯಗಳನ್ನು ಒದಗಿಸಿ ಕೊಡುವುದು ಗ್ರಾಮೀಣ ಬ್ಯಾಂಕುಗಳ ಮುಖ್ಯ ಉದ್ದೇಶವಾಗಿದೆ.

೨. ಸ್ಥಳೀಯ ರೈತರನ್ನು ಸಾಹುಕಾರ ಮತ್ತು ವ್ಯವಹಾರಸ್ಥರ ಶೋಷಣೆಯಿಂದ ತಪ್ಪಿಸುವುದು.

೩. ಗ್ರಾಮೀಣ ಬಡಜನರ ಮತ್ತು ಹಿಂದುಳಿದ ವರ್ಗದವರ ಹೆಚ್ಚುತ್ತಿರುವ ಹಣದ ಅವಶ್ಯಕತೆಯನ್ನು ಪೂರೈಸುವುದು.

೪. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ನೀಡುವ ಹಣಕಾಸಿನ ಸೌಲಭ್ಯಗಳು ನೇರವಾಗಿ ಅಭಿವೃದ್ಧಿ ಕಾರ್ಯಗಳಿಗೆ ಉಪಯೋಗವಾಗುವಂತೆ ಮೇಲ್ವಿಚಾರಣೆ ನಡೆಸುವುದು.

೫. ಸರ್ಕಾರದ ವಿವಿಧ ಯೋಜನೆಗಳು ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ ಮೂಲಕ ದೊರೆಯುವಂತೆ ಮಾಡುವುದು.

೬. ಜನಪದರಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡುವುದು ಮತ್ತು ಸಂಘಟನಾ ಸಾಮರ್ಥ್ಯವನ್ನು ಹೆಚ್ಚಿಸುವುದು.

೭. ಜನರಲ್ಲಿ ಉಳಿತಾಯ ಮಾಡುವ ಮನೋಭಾವನೆಯನ್ನು ಹೆಚ್ಚಿಸುವುದು.

೮. ಗ್ರಾಮೀಣ ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗಾವಕಾಶಗಳನ್ನು ಕಲ್ಪಿಸಲು ಪ್ರಯತ್ನಿಸುವುದು.

೯. ವಾಣಿಜ್ಯ ಬ್ಯಾಂಕಿನಂತೆ ಗ್ರಾಮೀಣ ಬ್ಯಾಂಕುಗಳಲ್ಲೂ ಎಲ್ಲಾ ಸೌಲಭ್ಯವನ್ನು ಜನರಿಗೆ ಒದಗಿಸುವುದು.

ಈ ಎಲ್ಲಾ ಉದ್ದೆಶಗಳನಿಟ್ಟುಕೊಂಡು ಗ್ರಾಮೀಣ ಜನಪದರಿಗೆ ಬೇಕಾದ ಹಣಕಾಸಿನ ನೆರವು ದೊರೆಯುವಂತೆ ಮಾಡುವುದೇ ಗ್ರಾಮೀಣ ಬ್ಯಾಂಕುಗಳ ಗುರಿಯಾಗಿತ್ತು.

ರಾಜ್ಯದಲ್ಲಿ ೧೯೭೬ರಲ್ಲಿ ಮೂರು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಆರಂಭಗೊಂಡು ೨೮ ಶಾಖೆಗಳನ್ನು ಒಳಗೊಂಡಿದ್ದವು. ೧೯೮೭ರ ಮಾರ್ಚ್‌ನಲ್ಲಿ ರಾಜ್ಯದಲ್ಲಿ ೧೩ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೨೦ ಜಿಲ್ಲೆಗಳ ವ್ಯಾಪ್ತಿಯಲ್ಲಿ ೧೧೧೩ ಶಾಖೆಗಳನ್ನು ಒಳಗೊಂಡಿತ್ತು. ೨೦೦೪ ಮಾರ್ಚ್ ಕೊನೆಗೆ ೨೭ ಜಿಲ್ಲೆಗಳ ವ್ಯಾಪ್ತಿಯಲ್ಲಿ ೧೧೨೪ ಶಾಖೆಗಳು ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ೧೯೭೬ ರಿಂದ ೨೦೦೮ರ ಮಾರ್ಚ್‌ರವರೆಗೆ ಗ್ರಾಮೀಣ ಬ್ಯಾಂಕುಗಳ ಶಾಖೆಗಳು ಪ್ರತಿಶತ ೪೬೦೭ ಪಟ್ಟು ಅಧಿಕವಾಗಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು.

### ಪಟ್ಟಿ ೩

### ರಾಜ್ಯದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕ್‌ಗಳ ಪ್ರಗತಿ

| ವರ್ಷಗಳು | ಗ್ರಾಮೀಣ ಬ್ಯಾಂಕುಗಳ ಸಂಖ್ಯೆ | ಶಾಖೆಗಳ ಸಂಖ್ಯೆ | ಒಟ್ಟು ಠೇವಣಿಗಳು | ಒಟ್ಟು ಮುಂಗಡಗಳು | ಸಿ.ಡಿ ಅನುಪಾತ |
|---|---|---|---|---|---|
| ೧೯೭೬ | ೩ | ೨೮ | ೪೮.೨೮ (ಲಕ್ಷ) | ೬೬.೧೬ (ಲಕ್ಷ) | ೧೩೭ |
| ೧೯೮೭ | ೧೩ | ೧೦೦೮ | ೧೧೫.೩೬ (ಕೋಟಿ) | ೨೦೯.೪೭ (ಕೋಟಿ) | ೧೮೧ |
| ೧೯೯೧ | ೧೩ | ೧೦೭೪ | ೨೭೪.೮೭ (ಕೋಟಿ) | ೩೪೩.೫೩ (ಕೋಟಿ) | ೧೨೫ |
| ೧೯೯೬ | ೧೩ | ೧೦೭೪ | ೯೬೪.೪೩ (ಕೋಟಿ) | ೮೯೨ (ಕೋಟಿ) | ೯೩ |
| ೨೦೦೦ | ೧೩ | ೧೦೯೬ | ೧೯೮೯.೯೨ (ಕೋಟಿ) | ೧೬೩೯.೪೪ (ಕೋಟಿ) | ೮೧.೧೭% |
| ೨೦೦೪ | ೧೩ | ೧೧೧೩ | ೩೪೮೬.೭೬ (ಕೋಟಿ) | ೨೯೦೦.೯೧ (ಕೋಟಿ) | ೮೩.೨೦ |
| ೨೦೦೫ | ೭ | ೧೧೧೨ | ೪೦೯೧.೨೯ (ಕೋಟಿ) | ೩೭೫೧.೩೪ (ಕೋಟಿ) | ೯೧.೬೯ |
| ೨೦೦೮ | ೭ | ೧೨೯೦ | ೮೦೪೨ (ಕೋಟಿ) | ೮೧೪೪ (ಕೋಟಿ) | ೧೦೧.೨೭ |

**ಆಧಾರ :** ಎಕಾನಾಮಿಕ್ ಸರ್ವೆ, ೧೯೯೮, ೨೦೦೦, ೨೦೦೧, ೨೦೦೮ ಅನುಬಂಧ ೭.೨, ಯೋಜನಾ ಇಲಾಖೆ, ಕರ್ನಾಟಕ ಸರಕಾರ, ಬೆಂಗಳೂರು ೧.

ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ ವಿವಿಧ ರೀತಿಯ ಠೇವಣಿಗಳನ್ನು ಪರಿಚಯಿಸಿದೆ. ಆ ಠೇವಣಿಗಳೆಂದರೆ, ಅಲ್ಪ ವರಮಾನವನ್ನು ಹೊಂದಿರುವವರು ಕೂಡ ಉಳಿತಾಯ ಮಾಡಿ ಠೇವಣಿಗಳನ್ನಿಡಲು ಅನುಕೂಲವಾಗುವಂತಹವುಗಳು. ಕಾಮಧೇನು, ಬಾಲಕ್ಷೇಮ, ರಿಕರಿಂಗ್, ನಿತ್ಯನಿಧಿ ಮುದ್ದತಿ, ಉಳಿತಾಯ ಮತ್ತು ಚಾಲ್ತಿ ಖಾತೆಗಳನ್ನು ಹೊಂದಿವೆ. ೧೯೭೬ರಲ್ಲಿ ಠೇವಣಿಯ ಪ್ರಮಾಣವು ೪೮.೨೮ ಲಕ್ಷಗಳಿಂದ ೧೯೯೧ ಜೂನ್ ಹೊತ್ತಿಗೆ ೨೭೪.೮೭ ಕೋಟಿ ರೂಪಾಯಿಗಳಿಗೆ ಅಧಿಕವಾಯಿತು. ೨೦೦೮ ಜೂನ್ ಹೊತ್ತಿಗೆ ೮೦೪೨ ಕೋಟಿ ರೂಪಾಯಿಗಳಿಗೆ ಹೆಚ್ಚಾಗಿದೆ. ೧೯೭೬ ರಿಂದ ೧೯೯೧ ಕಾಲಾವಧಿಯಲ್ಲಿ ಠೇವಣಿಯು ಪ್ರತಿಶತ ೮೯೨ರಷ್ಟು ಅಧಿಕವಾಗಿದೆ. ಹಾಗೆಯೇ ೧೯೯೧ ರಿಂದ ೨೦೦೮ರ ಕಾಲಾವಧಿಯಲ್ಲಿ ಠೇವಣಿಯು ಪ್ರತಿಶತ ೨೯೩೫ರಷ್ಟು ಅಧಿಕವಾಗಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು. ಅಂದರೆ ಜನಪದರ ಠೇವಣಿಯ ಪ್ರಮಾಣ ಉತ್ತಮವಾಗಿದೆಯೆಂದು ಹೇಳಬಹುದು.

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಕೃಷಿ ಮತ್ತು ಅವಲಂಬಿತ ಚಟುವಟಿಕೆಗಳಿಗೆ ಹಾಗೂ ಕೃಷಿಯೇತರ ಚಟುವಟಿಕೆಗಳಾದ ಸಣ್ಣಕೈಗಾರಿಕೆ, ವ್ಯಾಪಾರ, ಸೇವೆ, ಕರಕುಶಲಗಾರರಿಗೂ ಸಾಲವನ್ನು ಒದಗಿಸುತ್ತವೆ. ತಮ್ಮ ವ್ಯಾಪ್ತಿಯಲ್ಲಿ ಬರುವ ದುರ್ಬಲ ಸಹಕಾರಿ ಸಂಘ ಸಂಸ್ಥೆಗಳಿಗೆ ಹಣಕಾಸಿನ ನೆರವನ್ನು ಒದಗಿಸುತ್ತವೆ. ಈ ಬ್ಯಾಂಕು ಆರಂಭವಾದಾಗ ೧೯೭೬ರಲ್ಲಿ ೬೬.೧೬ ಲಕ್ಷ ರೂಪಾಯಿಗಳ

ಸಾಲವನ್ನು ಒದಗಿಸಿತ್ತು. ೧೯೯೧ರ ಜೂನ್ ಅಂತ್ಯಕ್ಕೆ ೮೧೪೪ ಕೋಟಿ ರೂಪಾಯಿಗಳ ಪತ್ತನ್ನು ಒದಗಿಸಿತ್ತು. ೨೦೦೮ೀ ಜೂನ್ ಕೊನೆಯ ಹೊತ್ತಿಗೆ ರಾಜ್ಯದಾದ್ಯಂತ ೮೧೪೪ ಕೋಟಿ ರೂಪಾಯಿಗಳ ಸಾಲವನ್ನು ವಿತರಿಸಿತ್ತು. ೧೯೯೧ ರಿಂದ ೨೦೦೮ರ ಕಾಲಾವಧಿಯಲ್ಲಿ ಪ್ರತಿಶತ ೨೩.೭೪ರಷ್ಟು ಪತ್ತು ಅಧಿಕವಾಗಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು. ಈ ಬ್ಯಾಂಕು ರಾಜ್ಯದ ಅಭಿವೃದ್ಧಿಯಲ್ಲಿ ತಮ್ಮದೇ ಕಾರ್ಯಕ್ರಮಗಳನ್ನು ಕೈಗೊಂಡು ಕಾರ್ಯನಿರ್ವಹಿಸುತ್ತದೆ.

೧೯೭೬ರ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೪೮.೨೮ ಲಕ್ಷ ರೂಪಾಯಿಗಳ ಠೇವಣಿ ಸಂಗ್ರಹಿಸಿದ್ದವು ಮತ್ತು ೧೬.೧೬ ಲಕ್ಷ ಸಾಲ ಮತ್ತು ಮುಂಗಡ ನೀಡಿದ್ದವು. ಸಾಲ ಮತ್ತು ಠೇವಣಿಯ ಅನುಪಾತವು ೧೩.೭ರಷ್ಟು ಇತ್ತು. ೨೦೦೮ರ ಜೂನ್ ವೇಳೆಗೆ ೮೦೪೨ ಕೋಟಿ ರೂಪಾಯಿಗಳ ಠೇವಣಿಯನ್ನು ಸಂಗ್ರಹಿಸಿದ್ದವು. ಹಾಗೆಯೇ ೮೧೪೪ ಕೋಟಿ ರೂಪಾಯಿಗಳ ಸಾಲವನ್ನು ವಿತರಿಸಿದ್ದವು. ಸಿ.ಡಿ. ಅನುಪಾತವು ೧೦೧.೨೭ರಷ್ಟಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು. ಇದೇ ಕಾಲಾವಧಿಯಲ್ಲಿ ಪ್ರತಿಶಾಖೆಯ ಸರಾಸರಿ ಠೇವಣಿಯು ೩೬೭.೯೨ ಲಕ್ಷ ಹಾಗೂ ತಲಾವಾರು ಠೇವಣಿ ೧೦೩೦ ರೂ.ಗಳು. ಶಾಖೆಯ ಸರಾಸರಿ ಮುಂಗಡಗಳು ೩೩೭.೩೫ ಲಕ್ಷ ರೂಪಾಯಿಗಳು ತಲಾವಾರು ಮುಂಗಡ ೯೪೪.೯೨ೀ ರೂಪಾಯಿಗಳಾಗಿದ್ದಿತು ಎಂದು ಅಂಕಿ-ಅಂಶಗಳು ತಿಳಿಸುತ್ತವೆ.

### ೩.೪. ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ದೃಷ್ಟಿ

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಇಂದು ಬ್ಯಾಂಕಿಂಗ್ ಕಾರ್ಯನಿರ್ವಹಿಸುವ ಸಂಸ್ಥೆಗಳಾಗಿರದೇ ಗ್ರಾಮೀಣ ಸಮಾಜವನ್ನು ಮುನ್ನಡೆಸುವ ಕಾರ್ಯಕ್ರಮಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ ಎನ್ನಬಹುದಾಗಿದೆ. ಸಮಾಜಮುಖಿಯಾಗಿ ದೃಷ್ಟಿಯನ್ನು ಇಟ್ಟುಕೊಂಡು ಸಮಾಜದ ಏಳಿಗೆಗಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಕಾರ್ಯನಿರ್ವಹಿಸುತ್ತಿವೆ ಎನ್ನಬಹುದು. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಗಮನಿಸಬಹುದಾಗಿದೆ.

೧. ಬ್ಯಾಂಕಿನ ವ್ಯವಹಾರವು ತಲುಪದೇ ಇರುವ ಪ್ರದೇಶ ಮತ್ತು ವ್ಯಕ್ತಿಗಳಿಗೆ ಬ್ಯಾಂಕಿನ ಸೌಲಭ್ಯ ಒದಗಿಸುವುದು.

೨. ಸಮಾಜದಲ್ಲಿನ ಪ್ರತಿಯೊಬ್ಬರಿಗೂ ಬ್ಯಾಂಕಿನ ಸೌಲ ಸೌಲಭ್ಯವನ್ನು ಪಡೆದುಕೊಳ್ಳುವಂತೆ ಪ್ರಯತ್ನಿಸುವುದು.

೩. ಗ್ರಾಮೀಣ ಪ್ರದೇಶದಲ್ಲಿನ ಜನಪದರಿಗೆ ತರಬೇತಿ ಒದಗಿಸಿ, ಉದ್ಯೋಗಾವಕಾಶಗಳನ್ನು ಕಲ್ಪಿಸುವುದರ ಜೊತೆಗೆ ಅವರ ವರಮಾನ ಮತ್ತು ಜೀವನಮಟ್ಟ ಸುಧಾರಿಸುವುದು.

೪. ಹೆಣ್ಣು ಮಕ್ಕಳಿಗೆ ಬ್ಯಾಂಕಿನಲ್ಲಿ ಪ್ರತ್ಯೇಕ ವಿಭಾಗ ತೆರೆದು ಅವರನ್ನು ಸ್ವಾವಲಂಬಿಗಳಾಗಿ ಬೆಳೆಯುವಂತೆ ಪ್ರೇರೇಪಿಸುವುದು.

೫. ಗ್ರಾಮೀಣ ಪ್ರದೇಶದಲ್ಲಿನ ಸ್ವಸಹಾಯ ಗುಂಪುಗಳಿಗೆ ಇನ್ನು ಹೆಚ್ಚಿನ ಪ್ರೋತ್ಸಾಹ ನೀಡುವುದು.

೬. ಸಮಾಜದಲ್ಲಿನ ಕೃಷಿಯೇತರ ಚಟುವಟಿಕೆಗಳಿಗೆ ಯಾವುದೇ ಭದ್ರತೆಗಳಿಲ್ಲದೆ ೨೫,೦೦೦ರೂ. ಗಳವರೆಗೆ ಸಾಲ ಮಂಜೂರು ಮಾಡುವುದು.

೭. ಗ್ರಾಮೀಣ ಪ್ರದೇಶದಲ್ಲಿನ ಕರಕುಶಲ ಮತ್ತು ಗುಡಿಕೈಗಾರಿಕೆಗಳ ಬೆಳವಣಿಗೆಗೆ ಹಾಗೂ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಲು ಜಿಲ್ಲಾ ಕೈಗಾರಿಕಾ ಕೇಂದ್ರಗಳ ಮೂಲಕ ಇಂತಹ ಕೈಗಾರಿಕೆಗಳಿಗೆ ರಿಯಾಯಿತಿಯನ್ನು ಒದಗಿಸುವುದು.

೮. ಕೃಷಿ ಚಟುವಟಿಕೆಗಳಿಗೆ ೫೦,೦೦೦ದವರೆಗೆ ಜಾಮೀನು ರಹಿತ ಸಾಲವನ್ನು ಒದಗಿಸುವ ದೃಷ್ಟಿಯನ್ನು ಹೊಂದಿದೆ.

೯. ಸಮಾಜದಲ್ಲಿನ ಜನಪದರಲ್ಲಿ ಉಳಿತಾಯದ ಮನೋಭಾವನೆಯನ್ನು ಉತ್ತಮಪಡಿಸುವ ಸಲುವಾಗಿ ಶೂನ್ಯ ಅಥವಾ ಕನಿಷ್ಠ ಮೊತ್ತದ ಉಳಿತಾಯ ಖಾತೆಗಳನ್ನು ತೆರೆಯುವಂತೆ ಮಾಡುವುದು. ಅಲ್ಲದೆ ಸಮಾಜದಲ್ಲಿನ ಪ್ರತಿಯೊಬ್ಬ ವ್ಯಕ್ತಿಯು ಬ್ಯಾಂಕಿನ ಖಾತೆಯನ್ನು ಹೊಂದುವಂತೆ ಜನಪದರನ್ನು ಪ್ರೋತ್ಸಾಹಿಸುವುದು.

೧೦. ಸಮಾಜದಲ್ಲಿನ ದುರ್ಬಲ ವರ್ಗದವರಿಗೆ ತನ್ನ ಸಹಾಯ ಹಸ್ತ ನೀಡುವುದು, ಅದರಲ್ಲೂ ಮುಖ್ಯವಾಗಿ ಅಂಗವಿಕಲ ಮಕ್ಕಳಿಗೆ ಆಹಾರ, ಬಟ್ಟೆ, ವಸತಿ ಸೌಲಭ್ಯವನ್ನೊದಗಿಸುವ ಪ್ರಯತ್ನ ಮಾಡುವುದು.

೧೧. ಗ್ರಾಮೀಣ ಜನಪದರು ತಾವು ಬೆಳೆದಂತಹ ಬೆಳೆಯನ್ನು ಸಂರಕ್ಷಿಸುವ ಸಲುವಾಗಿ ಗೋದಾಮುಗಳನ್ನು ಸೃಷ್ಟಿಸುವುದು.

೧೨. ರೈತರು ತಾವು ಬೆಳೆದಂತಹ ಬೆಳೆಯನ್ನು ಸುಗ್ಗಿಯ ಕಾಲದಲ್ಲಿ ಮಾರಿದರೆ ಬೆಲೆ ಕಡಿಮೆ ಇದ್ದು, ನಷ್ಟ ಅನುಭವಿಸಬೇಕಾದ ಸಂದರ್ಭಗಳಲ್ಲಿ, ಈ ಬ್ಯಾಂಕು ಅಂತಹವರ ದವಸ ಮತ್ತು ಧಾನ್ಯಗಳನ್ನಿಟ್ಟುಕೊಂಡು ಅವರಿಗೆ ಸಾಲದ ವ್ಯವಸ್ಥೆ ಮಾಡುತ್ತದೆ. ಅಲ್ಲದೆ ಬೆಳೆ ಅಧಿಕವಾದಾಗ ಆ ದಾಸ್ತಾನನ್ನು ಮಾರಾಟ ಮಾಡಿ ಉಳಿದ ಹಣವನ್ನು ಆ ಜನಪದರಿಗೆ ತಲುಪುವಂತೆ ಮಾಡುತ್ತದೆ.

೧೩. ಗೃಹಕೃತ್ಯದ ಸಲುವಾಗಿ ಅನುಭೋಗಿ ಮತ್ತು ಮದುವೆ, ಮನೆ ಇತ್ಯಾದಿಗಳಿಗೆ ಮನೆ ಇನ್ನಿತರ ಆಭರಣಗಳನ್ನು ಆಧಾರವಾಗಿಟ್ಟುಕೊಂಡು ಸಾಲ ಮಂಜೂರು ಮಾಡುವುದು.

೧೪. ಸ್ವ-ಸಹಾಯ ಸಂಘಗಳ ಸದಸ್ಯರಿಗೆ ವೈದ್ಯಕೀಯ ವಿಮೆಯನ್ನು ಒದಗಿಸುವ ಸಲುವಾಗಿ 'ಆರೋಗ್ಯ ವಿಮೆ' ಮಾಹಿತಿಯನ್ನು ಜಾರಿಗೆ ತರಲು ಪ್ರಯತ್ನಿಸುವುದು.

೧೫. ಬ್ಯಾಂಕಿನ ಮತ್ತೊಂದು ಪ್ರಮುಖ ಧ್ಯೇಯವೆಂದರೆ "ಸಾಲ ನೀಡುವ ಸಾಹುಕಾರರಿಂದ ಮುಕ್ತ ಗ್ರಾಮ" ಎಂಬ ಪರಿಕಲ್ಪನೆಯನ್ನು ಜಾರಿಗೆ ತಂದು ಗ್ರಾಮೀಣ ಪ್ರದೇಶಗಳನ್ನು ಜನಪದರನ್ನು ಸಾಹುಕಾರರ ಸಾಲದಿಂದ ಋಣ ಮುಕ್ತಗೊಳಿಸುವುದು.

೧೬. ಕೃಷಿ ವಾಣಿಜ್ಯ ಮತ್ತು ಕೃಷಿ ಆಧಾರಿತ ಉದ್ಯಮಗಳ ಬಗ್ಗೆ ಕೃಷಿ ಮತ್ತು ಆಹಾರ ಸಂಸ್ಥೆಯಿಂದ ಗ್ರಾಮೀಣ ಜನಪದರಿಗೆ ಮಾಹಿತಿಯನ್ನು ಒದಗಿಸುವುದು.

೧೭. ದಾಳಿಂಬೆ ಬೇಸಾಯದ ಬಗ್ಗೆ ಕೃಷಿ ಸಂಶೋಧನಾ ಕೇಂದ್ರ ಹಗರಿ ಮತ್ತು ಬ್ಯಾಂಕ್ ಸಹಯೋಗದೊಂದಿಗೆ ಬೆಳೆಯ ಬಗ್ಗೆ ಮಾಹಿತಿಯನ್ನು ಒದಗಿಸುವುದು.

೧೮. "ನೈಸರ್ಗಿಕ ಕೃಷಿ ಮತ್ತು ಮಣ್ಣಿನ ಉಪಯೋಗ"ದ ಬಗ್ಗೆ ಕೆಲವು ರಾಸಾಯನಿಕ ಕಂಪನಿಗಳ ಸಹಯೋಗದೊಂದಿಗೆ ರೈತರಿಗೆ ಮಾಹಿತಿಯನ್ನು ಒದಗಿಸುವುದು.

೧೯. ಒಣಭೂಮಿ ಅಭಿವೃದ್ಧಿಯ ಬಗ್ಗೆ ಮಾಹಿತಿ ಸಂಗ್ರಹಿಸಿ ಅದರ ಅಭಿವೃದ್ಧಿಗಾಗಿ ಜಲಾನಯನ ಪ್ರದೇಶ ಅಭಿವೃದ್ಧಿಗಾಗಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು.

೨೦. ಇಂದಿನ ಯುಗದಲ್ಲಿ ಔಷಧಿ ಗಿಡ ಮೂಲಿಕೆಗಳಿಗೆ ದೇಶದಾದ್ಯಂತ ಬಹಳಷ್ಟು ಬೇಡಿಕೆ ಇರುವುದರಿಂದ ಅಂತಹ ಸಸ್ಯಗಳನ್ನು ಬೆಳೆಯುವ ರೈತರಿಗೆ ಬೇಕಾದ ಹಣಕಾಸಿನ ನೆರವನ್ನು ಬ್ಯಾಂಕು ಒದಗಿಸುತ್ತದೆ.

೨೧. ಗ್ರಾಮೀಣ ಕರಕುಶಲ ಉದ್ಯಮಕ್ಕೆ ಹಾಗೂ ಸೇವಾ ವಲಯಕ್ಕೆ ಬೇಕಾದ ಹಣಕಾಸಿನ ನೆರವನ್ನು ಒದಗಿಸುವುದು.

೨೨. ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಗಳನ್ನು ಆಚರಿಸುವುದು.

೨೩. ಬಡ್ಡಿಯ ದರಗಳನ್ನು ಕಾಲಕ್ಕೆ ತಕ್ಕಂತೆ ಪರಿಷ್ಕರಿಸುವುದು.

೨೪. ಸಹಕಾರಿ, ಸರ್ಕಾರಿ ಮತ್ತು ಖಾಸಗಿ ವಲಯದ ಉದ್ಯೋಗದಾತರಿಗಾಗಿ ಆದಾಯಕರ ವಿನಾಯಿತಿ ಪಡೆಯಲು ಈ ಬ್ಯಾಂಕು ಟ್ಯಾಕ್ಸ್ (Tax Saver) ಠೇವಣಿ ಯೋಜನೆಯನ್ನು ಜಾರಿಗೆ ತಂದು ಅವರ ಉಳಿತಾಯದ ಮನೋಭಾವನೆ ಉತ್ತಮಗೊಳಿಸುವುದು.

೨೫. ಸ್ವ-ಸಹಾಯ ಗುಂಪುಗಳನ್ನು ಉದ್ದಿಮೆಗಳ ಮಟ್ಟಕ್ಕೆ ಬೆಳೆಸುವುದು.

೨೬. ಬ್ಯಾಂಕಿನ ಮಹಾಪ್ರಬಂಧಕರು, ಹಿರಿಯ ವ್ಯವಸ್ಥಾಪಕರು ಬ್ಯಾಂಕಿನ ಕಾರ್ಯಕ್ಷೇತ್ರದಲ್ಲಿನ ಹಲವಾರು ಹಳ್ಳಿಗಳಿಗೆ ಭೇಟಿ ನೀಡಿ ಗ್ರಾಹಕರಿಂದ ಮಾಹಿತಿ ಸಂಗ್ರಹಿಸುವುದು ಮತ್ತು ಮಾಹಿತಿಯನ್ನು ಇತರ ಜನಪದರಿಗೆ ಒದಗಿಸುವುದು.

೨೭. ಎಲ್ಲಾ ಗ್ರಾಮೀಣ ಬ್ಯಾಂಕುಗಳನ್ನು ಸಂಪೂರ್ಣ ಗಣಕೀಕೃತಗೊಳಿಸುವುದು. ಭವಿಷ್ಯದಲ್ಲಿ ಕಾಗದ ರಹಿತ ವ್ಯವಹಾರವನ್ನು ನಿರ್ವಹಿಸುವುದು.

೨೮. ಎನಿವೇರ್ ಬ್ಯಾಂಕಿಂಗ್, ಅಂತರ್‌ಜಾಲ ಬ್ಯಾಂಕಿಂಗ್ ಮುಂತಾದ ಸೌಲಭ್ಯವನ್ನು ಗ್ರಾಹಕರಿಗೆ ಒದಗಿಸುವುದು.

೨೯. ಬ್ಯಾಂಕಿನ ವ್ಯವಹಾರದಲ್ಲಿ ದಕ್ಷತೆಯನ್ನು ತರಲು ಬ್ಯಾಂಕಿನ ಸಿಬ್ಬಂದಿಗೆ BIRDನ ಸಹಕಾರದಿಂದ ವ್ಯವಹಾರದಲ್ಲಿ ಬದಲಾವಣೆ ವ್ಯವಹಾರದ ಬಗ್ಗೆ ತರಬೇತಿಯನ್ನು ಒದಗಿಸುವುದು.

೩೦. ಆಡಳಿತದಲ್ಲಿ ಪಾರದರ್ಶಕತೆಯನ್ನು ಹೊಂದುವುದು.

೩೧. ರೈತರ ಉಪಯೋಗಕ್ಕಾಗಿ "ಮರಳಿ ಮಣ್ಣಿನ ಹೊದಿಕೆ" ಎಂಬ ಕಾರ್ಯಕ್ರಮದ ಮೂಲಕ ಮಾಹಿತಿ ಒದಗಿಸುವುದು.

೩೨. ಮಹಿಳಾ ಸಬಲೀಕರಣಕ್ಕೆ ಪ್ರೋತ್ಸಾಹ ನೀಡುವುದು.

೩೩. ಇದರೊಂದಿಗೆ ಇನ್ನಿತರ ಚಟುವಟಿಕೆಗಳಾದ ಗ್ರಾಹಕರಿಗೆ ಭದ್ರತಾ ಪೆಟ್ಟಿಗೆಯ ಸೌಲಭ್ಯ ಒದಗಿಸುವುದು, ವಿದ್ಯುಚ್ಛಕ್ತಿ ಬಿಲ್ಲು ಪಾವತಿ ಮುಂತಾದವುಗಳನ್ನು ನಿರ್ವಹಿಸುವ ದೃಷ್ಟಿಯನ್ನಿಟ್ಟುಕೊಂಡು ಬ್ಯಾಂಕುಗಳು ಕಾರ್ಯನಿರ್ವಹಿಸುತ್ತವೆ.

ಈ ಮೇಲಿನ ಎಲ್ಲಾ ಅಂಶಗಳ ಜೊತೆಗೆ ಆರ್.ಬಿ.ಐ. ೨೦೦೬ರಲ್ಲಿ ಕರ್ಮಾಕರವರ ಅಧ್ಯಕ್ಷತೆಯಲ್ಲಿ ನೇಮಿಸಿದ ಟಾಸ್ಕ್ ಫೋರ್ಸ್ (TASK FORCE) ಸಮಿತಿಯು ಕೂಡ ಕೆಲವೊಂದು ದೃಷ್ಟಿಕೋನವನ್ನಿಟ್ಟುಕೊಂಡು ಈ ಕೆಳಗಿನ ಅಂಶಗಳನ್ನು ಶಿಫಾರಸ್ಸು ಮಾಡಿತು.

ಭಾರತೀಯ ರಿಸರ್ವ ಬ್ಯಾಂಕು ಕರ್ಮಾಕರ್‌ರವರ ಅಧ್ಯಕ್ಷತೆಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಮಂಡಳಿಗಳ ಕಾರ್ಯನಿರ್ವಹಣೆಯ ಬಗ್ಗೆ ತಿಳಿಯಲು ಟಾಸ್ಕ್ ಫೋರ್ಸ್ (TASK FORCE) ಸಮಿತಿಯನ್ನು ಸೆಪ್ಟೆಂಬರ್ ೨೦೦೬ ರಂದು ರಚಿಸಿತು. ಆ ಸಮಿತಿಯು ಈ ಕೆಳಗಿನ ಶಿಫಾರಸ್ಸುಗಳನ್ನು ಮಾಡಿತು.

೧. ಮಂಡಳಿಗಳಿಗೆ ಸ್ವತಂತ್ರವಾಗಿ ಹೂಡಿಕೆ, ವ್ಯಾಪಾರದಲ್ಲಿ ಅಭಿವೃದ್ಧಿ, ಸಿಬ್ಬಂದಿ ಸಂಖ್ಯೆ, ಬಡ್ತಿ, ಹೊಸ ನೇಮಕಾತಿ, ಕಾರ್ಯಗಳ ಬಗ್ಗೆ ಸ್ವತಂತ್ರ್ಯ ತೀರ್ಮಾನ ಕೈಗೊಳ್ಳಲು ಅವಕಾಶ ಕಲ್ಪಿಸಬೇಕು.

೨. ಬ್ಯಾಂಕುಗಳ ಒಗ್ಗೂಡುವಿಕೆಯಿಂದ, ಅದರ ವ್ಯಾಪ್ತಿ ವಿಸ್ತಾರವಾಗುವುದರಿಂದ ಮಂಡಳಿಯ ಸದಸ್ಯರ ಸಂಖ್ಯೆಯನ್ನು ೧೫ಕ್ಕೆ ಹೆಚ್ಚಿಸುವುದು.

೩. ಅಧ್ಯಕ್ಷರನ್ನು ಆಯ್ಕೆ ಮಾಡುವಾಗ ಇರುವವರಲ್ಲೇ ಅತ್ಯುತ್ತಮ ಗುಣಗಳನ್ನು ಹೊಂದಿರುವ ವ್ಯಕ್ತಿಯನ್ನು ಆಯ್ಕೆ ಮಾಡಬೇಕು.

೪. ನಾಮ ನಿರ್ದೇಶಿತ ಸದಸ್ಯರಿಗೆ ೨ ವರ್ಷ ಮಾತ್ರ ಸದಸ್ಯತ್ವವನ್ನು ಕಲ್ಪಿಸಬೇಕು.

**ಪ್ರಾದೇಶಿಕ ಗ್ರಾಮೀಣ ಬ್ಯಾಂಕು ಈ ಕೆಳಗಿನ ಸಮಿತಿಗಳನ್ನು ಹೊಂದಿರಲೇಬೇಕು**

೧. ಗಂಡಾಂತರಗಳ ಸಮಿತಿ

೨. ವ್ಯವಸ್ಥಾಪನಾ ಸಮಿತಿ

೩. ಹೂಡಿಕೆ, ಮಾನವ ಸಂಪನ್ಮೂಲ ಮತ್ತು ಮಾಹಿತಿ ತಂತ್ರಜ್ಞಾನ ಸಮಿತಿಗಳು

೪. ಅಡಿಟ್ ಸಮಿತಿಗಳನ್ನು ಹೊಂದಿರಲೇಬೇಕು.

ಎಲ್ಲಾ ಪ್ರಾದೇಶಿಕ ಗ್ರಾಮೀಣ ಬ್ಯಾಂಕ್ ಕಂಪ್ಯೂಟರೈಜೇಷನ್ ಮಾಡಬೇಕು. ವ್ಯವಸ್ಥಾಪನಾ, ಮಾಹಿತಿ ವ್ಯವಸ್ಥೆ, ಶಾಖೆಗಳ ಹಿಡಿತ ಮುಂತಾದವುಗಳನ್ನು ಮೂರು ವರ್ಷಗಳಲ್ಲಿ ಮುಖ್ಯ ಕಛೇರಿ ಪೂರ್ಣಗೊಳಿಸಬೇಕು.

**ಹಾಗೆಯೇ**

೧. ಗ್ರಾಮೀಣ ಬ್ಯಾಂಕುಗಳು ಯಾವ ಜಿಲ್ಲೆಯಲ್ಲಿ ಇಲ್ಲವೋ ಅಂತಹ ಪ್ರದೇಶಗಳಲ್ಲಿ ಈ ಬ್ಯಾಂಕುಗಳ ವಿಸ್ತರಣೆಗೆ ಅವಕಾಶ ಕಲ್ಪಿಸುವುದು.

೨. ಈ ಬ್ಯಾಂಕುಗಳು ಪರಿಣಾಮಕಾರಿಯಾಗಿ CRR ಕಾಪಾಡಿಕೊಂಡು ಬರುವುದರ ಜೊತೆಗೆ ಒಟ್ಟು ಬೇಡಿಕೆ ೪ ಹೊಣೆಗಾರಿಕೆಗಳು ಪ್ರತಿಶತ ೩ಕ್ಕಿಂತ ಕಡಿಮೆ ಇರಬೇಕು.

೩. ವ್ಯಕ್ತಿಗತವಾಗಿ ಗೃಹ ನಿರ್ಮಾಣಕ್ಕೆ ೨೦ ಲಕ್ಷ ಸಾಲವನ್ನು ಗೃಹ ಒತ್ತೆ ಆಧಾರದ ಮೇಲೆ ನೀಡಬೇಕು.

೪. ಗ್ರಾಮೀಣಬ್ಯಾಂಕುಗಳು ಮುಂದಿನ ದಿನಗಳಲ್ಲಿ ಉಪಗ್ರಹ ಆಧಾರವಾದ ಕಛೇರಿಗಳನ್ನು ಹೊಂದುವಂತಾಗಬೇಕು ಎಂದು ಶಿಫಾರಸ್ಸು ಮಾಡಿದರು.

**ಅಡಿಟಿಪ್ಪಣಿಗಳು**


೧. ಗೌರ್ನಮೆಂಟ್ ಆಫ್ ಇಂಡಿಯಾ, ರಿಪೂರ್ಟ್ ಆಫ್ ದಿ ಆಲ್ ಇಂಡಿಯಾ ರೂರಲ್ ಕ್ರೆಡಿಟ್ ಸರ್ವೆ ಕಮಿಟಿ, ೧೯೫೪, ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೂ ಕಮಿಟಿ ೧೯೬೯, ಆರ್.ಬಿ.ಐ. ರಿಪೋರ್ಟ್ ಆಫ್ ದಿ ಕಮಿಟಿ ಆನ್ ಇಂಟಿಗ್ರೇಷನ್ ಆಫ್ ಕೋ-ಅಪರೇಟಿವ್ ಕ್ರೆಡಿಟ್ ಇನ್ಸಟಿಟ್ಯೂಷನ್, ಬಾಂಬೆ, ೧೯೭೬.

೨. ನರಸಿಂಹನ್ ಎಂ., ರೂರಲ್ ಕ್ರೆಡಿಟ್ ಅಂಡ್ ರೂರಲ್ ಬ್ಯಾಂಕ್ಸ್, ಕೊ-ಅಪರೇಟಿವ್ ನ್ಯೂ ಡೈಜೆಸ್ಟ್ ವ್ಯಾಲೂಮ್ ೫೬ ನಂ. ೨೨, ಡಿಸೆಂಬರ್ ೧೯೭೫, ಪು. ೧೭೮.

೩. ಆಲ್ ಇಂಡಿಯಾ ರೂರಲ್ ಕ್ರೆಡಿಟ್ ಸರ್ವೆ ಕಮಿಟಿ, ೧೯೫೪, ಪು. ೩೧.

೪. ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೂ ಕಮಿಟಿ, ೧೯೬೯, ಪು. ೧೭೨.

೫. ನರಸಿಂಹನ್ ಎಂ. ಆಪಸಿಟ್, ಪುಟ. ೧೭೮.

೬. ಗೌರ್ನಮೆಂಟ್ ಆಫ್ ಇಂಡಿಯಾ, ಇನ್‌ಟರ್ಮ ರಿಪೂರ್ಟ್ ಆನ್ ನ್ಯಾಶನಲ್ ಕಮಿಷನ್ ಆನ್ ಅಗ್ರಿಕಲ್ಚರ್, ನ್ಯೂಡೆಲ್ಲಿ, ೧೯೭೧, ಪು. ೨೭.

೭. ವಾದವ ಸಿ.ಡಿ - ರೂರಲ್ ಬ್ಯಾಂಕ್ಸ್ ಫಾರ್ ರೂರಲ್ ಡೆವಲಪ್‌ಮೆಂಟ್ ಮ್ಯಾಕ್‌ಮಿಲನ್ ಕಂಪನಿ ಲಿ., ನ್ಯೂಡೆಲ್ಲಿ, ೧೯೮೦, ಪು. ೯.

೮. ನಬಾರ್ಡ - ಕೊ-ಆಪರೇಟಿವ್ ಮೂಮೆಂಟ್ ಇನ್ ಇಂಡಿಯಾ, ೧೯೯೪-೯೫, ಪು. XV.

೯. ನರಸಿಂಹನ್ ಎಂ. ಆಪಸಿಟ್, ಪು. ೧೦.

೧೦. ಗೌರ್‍ನಮೆಂಟ್ ಆಫ್ ಇಂಡಿಯಾ, ಎಕನಾಮಿಕ್ ಸರ್ವೆ, ೧೯೯೮-೯೯, ಮಿನಿಸ್ಟ್ರಿ ಆಫ್ ಫೈನಾನ್ಸ್, ಪು. ೫-೬೦.

೧೧. ರಿಪೋರ್ಟ್ ಆಫ್ ದಿ ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೂ ಕಮಿಟಿ, ೧೯೬೯.

೧೨. ರಿಪೋರ್ಟ್ ಆಫ್ ದಿ ಬ್ಯಾಂಕಿಂಗ್ ಕಮಿಷನ್ ೧೯೭೨.

೧೩. ರಿಪೋರ್ಟ್ ಆಫ್ ದಿ ಕಮಿಟಿ ಆನ್ ರೂರಲ್ ಬ್ಯಾಂಕ್ಸ್, ೧೯೭೫, ಪು. ೨, ೪, ೬.

೧೪. ರಿಪೋರ್ಟ್ ಆಫ್ ದಿ ಬ್ಯಾಂಕಿಂಗ್ ಕಮಿಷನ್, ೧೯೭೨, ಪು. ೧೭೪.

೧೫. ಇಬಿಡ - ಪು. ೪೯೦.

೧೬. ಇಬಿಡ - ಪು. ೪೯೧.

೧೭. ಆರ್.ಬಿ.ಐ. ರಿಪೋರ್ಟ್ ಆಫ್ ದಿ ಕಮಿಟಿ ಆನ್ ರೂರಲ್ ಬ್ಯಾಂಕ್ಸ್, ಪು. ೨೪೩.

೧೮. ಇಬಿಡ - ಪು. ೫.

೧೯. ಇಬಿಡ - ಪು. ೫.

೨೦. ಇಬಿಡ - ಪು. ೪೩.

೨೧. ಇಬಿಡ - ಪು. ೧೧.

೨೨. ಇಬಿಡ - ಪು. ೧೨.

೨೩. ಗೌರ್‍ನಮೆಂಟ್ ಆಫ್ ಇಂಡಿಯಾ, ರೀಜನಲ್ ರೂರಲ್ ಬ್ಯಾಂಕ್ಸ್ ಆಕ್ಟ್, ನ್ಯೂಡೆಲ್ಲಿ, ೧೯೭೬, ಪು. ೧.

೨೪. ಇಬಿಡ - ಪು. ೧.

೨೫. ಇಂಡಿಯಾ - ೨೦೦೦, ಪು. ೩೪೩.

೨೬. ವಾದವಾ - ಸಿಡಿ, ಪು. ೧೩೮-೧೩೯.

೨೭. ಆರ್.ಬಿ.ಐ. ರಿಪೋರ್ಟ್ ಆಫ್ ದಿ ರಿವ್ಯೂ ಕಮಿಟಿ ಆನ್ ರೀಜನಲ್ ರೂರಲ್ ಬ್ಯಾಂಕ್ಸ್, ಬಾಂಬೆ, ೧೯೭೮, ಪು. ೬೯.

೨೮. ಇಬಿಡ - ಪು. ೭೧.

೨೯. ಇಬಿಡ - ಪು. ೭೫.

೩೦. ಇಬಿಡ - ಪು. ೭೫.

೩೧. ಇಬಿಡ - ಪು. ೭೨.

೩೨. ಗೌರ್ನಮೆಂಟ್ ಆಫ್ ಇಂಡಿಯಾ, ೧೯೮೬, ರಿಪೋರ್ಟ್ ಆಫ್ ದಿ ವರ್ಕಿಂಗ್ ಗ್ರೂಫ್ ಆನ್ ರೀಜನಲ್ ರೂರಲ್ ಬ್ಯಾಂಕ್ಸ್ ನ್ಯೂಡೆಲ್ಲಿ.

೩೩. ಆರ್.ಬಿ.ಐ. ಅಗ್ರಿಕಲ್ಚರ್ ಕ್ರೆಡಿಟ್ ರಿವ್ಯೂ ಕಮಿಟಿ ರಿಪೋರ್ಟ್, ಪು. ೬೯೫-೯೬.

೩೪. ರಿಪೋರ್ಟ್ ಆಫ್ ದಿ ನರಸಿಂಹನ್ ಕಮಿಟಿ ಆನ್ ಫೈನಾಷಿಯಲ್ ಸಿಸ್ಟಮ್, ೧೯೯೧.

೩೫. ಆರ್.ಬಿ.ಐ. ರಿಸರ್ವ ಬ್ಯಾಂಕ್ ಆಫ್ ಇಂಡಿಯಾ, ಬುಲಿಟಿನ್, ಅಕ್ಟೋಬರ್-ನವೆಂಬರ್, ೧೯೯೫.

೩೬. ಆರ್.ಬಿ.ಐ. (೨೦೦೪-೦೫) ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ಪು. ೨೯.

೩೭. ಇಬಿಡ - ಪು. ೨೯.

೩೮. ಇಬಿಡ - ಪು. ೩೦.

೩೯. ಆರ್.ಬಿ.ಐ. ರಿಪೋರ್ಟ್ ಆನ್ ದಿ ಕರೆನ್ಸಿ ಅಂಡ್ ಫೈನಾನ್ಸ್, ಬಾಂಬೆ, ೧೯೯೦-೯೧.

೪೦. ಕ್ವಾಟರ್ಲಿ ಸ್ಟಾಟಿಸ್ಟಿಕ್ಸ್ ಆಫ್ ಶೆಡ್ಯೂಲ್ಡ್ ಕಮರ್ಷಿಯಲ್ ಬ್ಯಾಂಕ್....ಜೂನ್ ೨೦೦೭.

೪೧. ಆರ್.ಬಿ.ಐ. ದಿ ಎಸ್ಟಾಬ್ಲಿಷ್‌ಮೆಂಟ್ ಆಫ್ ನಬಾರ್ಡ ದಿ ರಿಪೋರ್ಟ್ ಆಫ್ ದಿಪಿಕಾರ್ಡ್, ಪು. ೫೭.

೪೨. ಆರ್.ಬಿ.ಐ. ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೧೯೯೦-೯೮, ಪು. ೫೮.

೪೩. ಕರ್ನಾಟಕ ಸರಕಾರ, ದಿ ರಿಪೋರ್ಟ್ ಆಫ್ ದಿ ಸ್ಟೇಟ್ ಕೋ-ಅಪರೇಟಿವ್ ಅಪೆಕ್ಸ್ ಬ್ಯಾಂಕಲಿ., ಬೆಂಗಳೂರು, ೧೯೭೪-೭೫, ಪು. ೩೮.

೪೪. ಕರ್ನಾಟಕ ಸರಕಾರ, ಎಕಾನಾಮಿಕ ಸರ್ವೆ, ೧೯೮೨-೮೩, ಬೆಂಗಳೂರು, ಪು. ೧೧೧. ೨೦೦೫-೨೦೦೮

೪೫. ಕರ್ನಾಟಕ ಸರಕಾರ, ಎಕನಾಮಿಕ ಸರ್ವೆ, ೨೦೦೦-೦೧, ಅನುಬಂಧ ೭.೨.

೪೬. ಇಬಿಡ - ಪು. ೭೨.

೪೭. ಇಬಿಡ - ಪು. ೭೨, ಕರ್ನಾಟಕ ಅಂಕಿ-ಅಂಶಗಳ ನೋಟ.

೪೮. ಇಬಿಡ - ಪು. ೭೨.

೪೯. ಇಬಿಡ - ಪು. ೭೨.

೫೦. ಆರ್.ಬಿ.ಐ. ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೋಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ, ೨೦೦೬-೦೭, ಡಿಸೆಂಬರ್ ೨೦೦೭, ಪು. ೧೧೨-೧೧೩.

# ಅಧ್ಯಾಯ ನಾಲ್ಕು

# ಬಳ್ಳಾರಿ ಜಿಲ್ಲೆಯ ಚರಿತ್ರೆ, ಭೌಗೋಳಿಕತೆ ಮತ್ತು ಬ್ಯಾಂಕಿಂಗ್ ವ್ಯವಸ್ಥೆ

೪.೧. ಬಳ್ಳಾರಿ ಜಿಲ್ಲೆಯ ಚರಿತ್ರೆ

೪.೨. ಭೌಗೋಳಿಕ ಲಕ್ಷಣಗಳು

೪.೩. ಬ್ಯಾಂಕಿಂಗ್ ವ್ಯವಸ್ಥೆ

೪.೪. ಜನಪದರ ಮೇಲೆ ಗ್ರಾಮೀಣ ಬ್ಯಾಂಕುಗಳ ಪತ್ತಿನ ಪ್ರಭಾವ

## ಅಧ್ಯಾಯ ನಾಲ್ಕು

# ಬಳ್ಳಾರಿ ಜಿಲ್ಲೆಯ ಚರಿತ್ರೆ, ಭೌಗೋಳಿಕತೆ ಮತ್ತು ಬ್ಯಾಂಕಿಂಗ್ ವ್ಯವಸ್ಥೆ

### ೪.೧. ಬಳ್ಳಾರಿ ಜಿಲ್ಲೆಯ ಚರಿತ್ರೆ

ರಾಷ್ಟ್ರದ ಇತಿಹಾಸದ ಪರಂಪರೆಯಲ್ಲಿ ಕರ್ನಾಟಕ ಸಂಸ್ಕೃತಿಗೆ ಪ್ರಮುಖ ಸ್ಥಾನವಿದೆ. ಕರ್ನಾಟಕ ರಾಜ್ಯದ ಇತಿಹಾಸದ ನೋಟದಲ್ಲಿ ಬಳ್ಳಾರಿ ಜಿಲ್ಲೆ ವಿಶ್ವಪರಂಪರೆಯಲ್ಲಿ ಪ್ರಮುಖ ಸ್ಥಾನ ಪಡೆದಿದೆ. ವಿಜಯನಗರ ಸಾಮ್ರಾಜ್ಯವನ್ನು ಇಡೀ ವಿಶ್ವವೇ ಬೆರಗುಗಣ್ಣಿನಿಂದ ನೋಡಿದೆ. ವಿಜಯನಗರ ಸಾಮ್ರಾಜ್ಯದಲ್ಲಿ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಜನಪದ ಸಾಹಿತ್ಯಕ್ಕೆ ಸಂಬಂಧಪಟ್ಟ ಅಂಶಗಳು ಅತ್ಯಂತ ಮಹತ್ವ ಪಡೆದುಕೊಂಡಿದ್ದವು. ಈ ಜಿಲ್ಲೆಗೆ ಪ್ರಾಚೀನ ಶಿಲಾಯುಗದ ಮಾನವನಿಂದ ಹಿಡಿದು ಆಧುನಿಕ ಮಾನವನವರೆಗೆ ಒಂದು ಚಾರಿತ್ರಿಕ, ಜೀವಂತಿಕೆಯಿದೆ. ಪುರಾಣ ಮತ್ತು ಪುಣ್ಯಕಥೆಗಳಿಗೆ ನೆಲೆವೀಡಾಗಿದ್ದ, ಈ ಪ್ರದೇಶ, ಚರಿತ್ರೆಯಲ್ಲಿ ಹೊಸ ಮೈಲುಗಲ್ಲಾಗಿ ಮಹತ್ವದ ಪಾತ್ರವಹಿಸಿದೆ.

'ಬಳ್ಳಾರಿ' ಎಂಬುದು ಬಳರಿ, ಬಲ್ಲಹರಿ, ಬಳಾರಿ ಇತ್ಯಾದಿಯಾಗಿ ಅನೇಕ ಕಡೆ ಬಳಕೆಯಾಗಿದೆ. ಇಲ್ಲಿಯ 'ಬಳರಿ' ಎಂಬುದು ಕಾಳಿಯ ಮತ್ತೊಂದು ಹೆಸರು. 'ಬನದ ಬಳಾರಿ', 'ಬನದ ಬಳರಿ' ಎಂದು ಕರೆಯಿಸಿಕೊಳ್ಳುವುದರಿಂದ ಇದು ಬನದಲ್ಲೇ ಅಂದರೆ ಅಡವಿಯಲ್ಲಿ ಸ್ಥಾಪಿಸಲ್ಪಡುವ 'ಸ್ತ್ರೀ' ದೇವತೆಯಾಗಿರಬಹುದೆಂದು ಡಾ. ಎಂ.ಎಂ. ಕಲಬುರ್ಗಿಯವರು ಅಭಿಪ್ರಾಯಪಡುತ್ತಾರೆ.

'ಬಳರಿ'ಯೇ ಬಳ್ಳಾರಿಯ ಪ್ರಸಿದ್ಧ ದುರ್ಗಮ್ಮ ದೇವತೆಯಾಗಿರಬಹುದು, ಈ ಮಾಕಳಿ ಅಥವಾ ಬಳರಿ ಇಲ್ಲಿರುವುದರಿಂದ 'ಬಳ್ಳಾರಿ' ಎಂಬ ಹೆಸರು ಈ ಜಿಲ್ಲೆಗೆ ಅನ್ವರ್ಥವಾಗಿ ಬಂದಿರಬಹುದೆಂದು ಅಭಿಪ್ರಾಯ ಕೆಲವರದು. ಇದಕ್ಕೆ ಪೂರಕ ಎನ್ನುವಂತೆ ಡಾ. ಎಂ.ಎ. ಕಲುಬರ್ಗಿಯವರು ಕೋಲಾರದಲ್ಲಿ ಕೋಲಾರಮ್ಮ ಎಂಬ ಹೆಸರಿನ ದೇವತೆ ಇರುವುದರಿಂದ ಕೋಲಾರ ಎಂಬ ಹೆಸರು ಬಂದಂತೆ ಬಳ್ಳಾರಿಯಲ್ಲಿ ಬಳ್ಳಾರಿಯಮ್ಮನ ದೇವಸ್ಥಾನ ಇರುವುದರಿಂದ ಬಳ್ಳಾರಿ ಎಂಬ ಹೆಸರು ಬಂದಿರಬಹುದೆಂದು ತರ್ಕಿಸುತ್ತಾರೆ. ಕಿಟಲ್‌ರವರ ಪದಕೋಶದಲ್ಲಿ ಬಳಾರಿ ಎಂಬ ಪದದ ಅರ್ಥ 'The demon Balari Balarai' ಎಂದಿದೆ. ಕ್ರಿ.ಶ. ೧೪೫೦ರ ಚತುರಾಸ್ಯ ನಿಘಂಟುವಿನಲ್ಲಿ ಬಳಾರಿ ಮಹಾಕಾಳಿ ಎಂದು ಬಳಸಲಾಗಿದೆ. ಕ್ರಿ.ಶ. ೧೬೫೦ರ ರಾಜಶೇಖರ ವಿಳಾಸದ ಕೃತಿಯಲ್ಲಿ, ಒಬ್ಬ ಸೂಳೆಯು ಮೋಸ ಮಾಡಿದ ವ್ಯಕ್ತಿಯೊಬ್ಬನಿಗೆ "ಬಲಿಕಟ್ಟಿ ಮನ್ಮಥ ಬಳಾರಿಗೆ ದೊಡ್ಡ ಕುರಿ ಮಾಡಿ ಕಡಿಯುತ್ತೇನೆ" ಎನ್ನುವಳು. ಇಲ್ಲಿ ಬಳಾರಿಗೆ ಕುರಿ

ಬಲಿ ಕೊಟ್ಟಂತೆ ಕಡಿಯಬೇಕಾಗುತ್ತದೆ ಎಂಬುದರ ಜೊತೆಗೆ ಮನ್ಮಥ ಬಳಾರಿ ಎಂಬ ವಿಶಿಷ್ಟವಾದ ಪದದ ಬಳಕೆ ಕಂಡು ಬರುತ್ತದೆ.

**ಶಾಸನಗಳು**

ಈ ಶಾಸನಗಳ ಆಧಾರದಿಂದಲೂ ಬಳಾರಿ ಬಳಕೆಯನ್ನು ಗಮನಿಸಬಹುದು. ಬಳ್ಳಾರಿ ಜಿಲ್ಲೆಯ ಕುರುಗೋಡಿನಲ್ಲಿ ದೊರೆತ ಕ್ರಿ.ಶ. ೯೭೧ರ ಶಾಸನದಲ್ಲಿ ರಾಷ್ಟ್ರಕೂಟರ ಆಳ್ವಿಕೆಯಿತ್ತು ಎಂದು ತಿಳಿಯುತ್ತದೆ. ಕಪ್ಪಗಲ್ಲು ಗ್ರಾಮದ ಈಶ್ವರ ದೇವಾಲಯದ ಮುಂಭಾಗದಲ್ಲಿರುವ ಶಾಸನದಲ್ಲಿ ಚಾಲುಕ್ಯ ದೊರೆಯ ಸಾಮಂತ ಪಲ್ಲವರಸನು ಕಪ್ಪಗಲು ಗ್ರಾಮದ ಮಹಾದೇವರಿಗೆ ಎಂಟು ಮುತ್ತರು, ಮಠಕ್ಕೆ ಎಂಟು ಮತ್ತರು ಭೂಮಿಯನ್ನು ಜೇಷ್ಠ ರಾಶಿ ಬಳಾರಿಗೆ ದಾನ ಪೂರ್ವಕವಾಗಿ ಕೊಟ್ಟರು ಎಂಬ ಉಲ್ಲೇಖವಿದೆ. ಇದು ಮೊಟ್ಟ ಮೊದಲು ಬಳಾರಿ ಪದ ಬಳಕೆಯಾದ ಶಾಸನವಾಗಿದೆ. ಕ್ರಿ.ಶ. ೧೧೦೦-೧೧೪೧ ವೇಳೆಗೆ ಆಳಿದ ವಿಷ್ಣುವರ್ಧನನ ವಶದಲ್ಲಿದ್ದ ಹೊಯ್ಸಳರ ಮಾರ್ಗಗಳಲ್ಲಿ ಬಳಾರಿ ದುರ್ಗಮ್ಮ ಒಂದಾಗಿತ್ತೆಂದು ತಿಳಿದು ಬರುತ್ತದೆ. ಕಾಕಬಾಳು ಗ್ರಾಮರಸ್ತೆಯಲ್ಲಿನ ಕಂಪಿಲೆಪ್ಪನ ಗುಡ್ಡದಲ್ಲಿ ಅಪ್ರಕಟಿತ ಶಾಸನ ಒಂದರಲ್ಲಿ ಬಳಾರಿ ಸೀಮೆ ಎಂದಿದೆ. ಇದು ಸುಮಾರು ೧೨-೧೩ನೇ ಶತಮಾನದ್ದಿರಬೇಕೆಂದು ತಿಳಿದು ಬರುತ್ತದೆ. ಈ ಎಲ್ಲಾ ಶಾಸನಗಳಿಂದ ಬಳಾರಿ - ಬಳರಿ ಇದೆ ಎಂದು ತಿಳಿದು ಬರುತ್ತದೆ.

ಈ ಜಿಲ್ಲೆಯ ಸಂಗನಕಲ್ಲು, ನಿಟ್ಟೂರು ಹುಲಕುಂದಿಯ ಸ್ಥಳಗಳಲ್ಲಿ ಶಿಲಾಯುಗದ ಮಾನವನು ವಾಸಿಸುತ್ತಿದ್ದ ಗವಿಗಳು ಪತ್ತೆಯಾಗಿವೆ. ಹೀಗಾಗಿ ಈ ಪ್ರಾಂತ್ಯವು ಶಿಲಾಯುಗದ ಕಾಲದಿಂದಲೂ ಅಸ್ತಿತ್ವದಲ್ಲಿದ್ದ ಪ್ರದೇಶವಾಗಿದೆಂಬುದು ಸ್ಪಷ್ಟ.

**ದಂತ ಕತೆ**

ಹಿಂದೆ ಈ ಬಳ್ಳಾರಿ ಪ್ರದೇಶದಲ್ಲಿ ಬಳ್ಳಾಳನೆಂಬ ಪ್ರಸಿದ್ಧ ಶಿವಶರಣನಿದ್ದನು. ಅವನು ಸರ್ವಧರ್ಮ ಸಮನ್ವಯ ವ್ಯಕ್ತಿಯಾಗಿದ್ದನು. ಇವನು ಒಮ್ಮೆ ಭೇಟೆಯಾಡುತ್ತಾ ದುಷ್ಟಮೃಗಗಳನ್ನು ಕೊಂದು ಬಾಯಾರಿ ನೀರಿಗಾಗಿ ಅಲೆದಾಡುತ್ತಿದ್ದಾಗ ಬೆಟ್ಟದ ದೇವನಿಂದ ನಿರ್ಮಿತವಾದ ನೀರಿನ ಲೋಕದ ಸರಸ್ಸನ್ನು ಕಂಡು ತನ್ನ ತೃಷೆಯನ್ನು ನಿವಾರಿಸಿಕೊಂಡನು. ಈ ತಾಣದಲ್ಲಿ ಬಲಗುಡ್ಡದವರೆಗೂ ಪಟ್ಟಣ ನಿರ್ಮಿಸಿ, ಯೋಗ್ಯ ಸ್ಥಳವೆಂದು ಭಾವಿಸಿ ವಿಷ್ಣುದೇವಾಲಯ ಹಾಗೂ ಬಸದಿಗಳನ್ನು ಕಟ್ಟಿಸಿದನು (ಆರ್.ಎಸ್. ಪಂಚಮುಖಿ, ೧೯೬೭) ಎಂದು ತಿಳಿದು ಬರುತ್ತದೆ.

ಬಲ ಎನ್ನುವ ರಾಕ್ಷಸ ದೇವ ಕನ್ನಿಕೆಯರನ್ನು ಪೀಡಿಸುತ್ತಿದ್ದ ಸಮಯದಲ್ಲಿ ದುರ್ಗಮ್ಮ ಪ್ರತ್ಯಕ್ಷಳಾಗಿ 'ಬಲ' ಎನ್ನುವ ರಾಕ್ಷಸನನ್ನು ಸಂಹರಿಸಿ ದೇವ ಕನ್ನಿಕೆಯರನ್ನು ಕಾಪಾಡಿದಳಂತೆ, ಆ ಕೊಂದ ಸ್ಥಳವೇ (ಬಲ+ಹರಿ=ಬಲಹರಿ) ಬಳ್ಳಾರಿ ಎಂದಾಗಿದೆ. ಹಾಗೆಯೇ ಬಳ್ಳಾರಿಯಲ್ಲಿದ್ದ 'ಮಲ್ಲಯ್ಯ'ನೆಂಬ ಶಿವಭಕ್ತ, ಎಲ್ಲಿಯೇ ಇರಲಿ ಶಿವಪೂಜೆ ಮಾಡದೆ ಆಹಾರ ಸೇವಿಸುತ್ತಿರಲಿಲ್ಲ. ಒಮ್ಮೆ ವ್ಯಾಪಾರ ಮಾಡುತ್ತಾ

ಊರೂರು ಅಲೆಯುತ್ತಿರುವಾಗ ಆತನಿಗೆ ಕಣ್ಣು ಬೇನೆಯಿಂದ ಕಣ್ಣು ಕಾಣದಂತಾಗಲು ಲಿಂಗಪೂಜೆ ನಿಂತಿತು. ಇದನ್ನರಿತ ಆತನ ಭಾವಮೈದುನನು 'ಜೀವಮಂತ್ಯಜಿಸುನಂಧಕಭಾವ' ಎಂದು ಕಟಕಿಯಾಡಿ ಒಂದು ಹುಲ್ಲುಮಂಟಪವನ್ನು ಕಟ್ಟಿ ಅದರಲ್ಲಿ ಅಳೆಯುವ ಬಳ್ಳ (ಸೇರು) ತಂದಿರಿಸಿ ಶಿವಮಂದಿರವಿಲ್ಲಿದೆ ಬನ್ನಿ ಎಂದು ಕರೆತರಲು ಮಲ್ಲಯ್ಯ ಭಕ್ತಿಯಿಂದ 'ನಮಃಶಿವಾಯ' ಎಂದು ಲಿಂಗ (ಬಳ್ಳ)ವ ಪೂಜಿಸಿ ಪ್ರಸಾದ ಸೇವಿಸಿದ. ಆಗ ಆತನಭಾವ ಮೈದುನ ಮಲ್ಲ, ಭಾವಲಿಂಗವೆಂದು ಬಳ್ಳವನ್ನು ಪೂಜಿಸಿ ಹೊಟ್ಟೆಯಲಿರಿಯುವಂತೆ ಉಂಡ ಹುಲ್ಲು ಗುಡಿಸಲಲ್ಲಿಯ ಬಳ್ಳ ತನ್ನಿರೋ, ಅಳೆಯಲಿಕ್ಕೆ ಹಸಿವಿಗೆ ಆಪತ್ತಿಗೆ ಅದುವೇ ದೈವ ಎಂದು ಅಪಹಾಸ್ಯ ಮಾಡಿದನಂತೆ. ಅದನ್ನು ಕೇಳಿ ಎಲವೋ ಅದು ಬಳ್ಳವಲ್ಲ. ಸಾಕ್ಷಾತ್ ಶಿವಲಿಂಗ ನಡೆಯಿರಿ ತೋರಿಸುವೆ ಎಂದು ಮಲ್ಲಯ್ಯ ಅವರೊಂದಿಗೆ ಅಲ್ಲಿಗೆ ಬಂದನು. ಹುಲ್ಲು ಮಂಟಪ ದಿವ್ಯಮಂದಿರವಾಗಿತ್ತು. ಬಳ್ಳ 'ಲಿಂಗ'ವಾಗಿತ್ತು, ಆ ಲಿಂಗವೇ ಬಳ್ಳೇಶ್ವರ ಲಿಂಗ ಎಂದು ಹೆಸರು ಪಡೆಯಿತು. ಪವಾಡ ನಡೆದ (ಬಳ್ಳ+ಅರೆಯಾದ) ಸ್ಥಳವೇ ಬಳ್ಳಾರಿಯಾಗಿದೆ ಎನ್ನುತ್ತಾರೆ. ಹೀಗೆ ಈ ಪವಾಡ ನಡೆದ ಸ್ಥಳಕ್ಕೆ (ಬಳ್ಳ+ಅರೆ) (ಬಳ್ಳವಿದ್ದ ಕಲ್ಲು ಬಂಡೆ) ಬಳ್ಳಾರಿ ಎಂಬ ಹೆಸರಾಯಿತೆಂಬ ಸ್ಥಳ ಪುರಾಣವಿದೆ.

**ಪೌರಾಣಿಕ**

ಇಲ್ಲಿ ದೇವಿ ಪುರಾಣದ ಚಿತ್ರಣ, ರಾಮಾಯಣ ಮತ್ತು ಮಹಾಭಾರತದ ಪ್ರಸಂಗಗಳು ಕಂಡು ಬರುತ್ತವೆ. ದೇವಿ ಪುರಾಣಕ್ಕೆ ಸಂಬಂಧಿಸಿದಂತೆ ಬಳ್ಳಾರಿ ದುರ್ಗೆ ಒಂದು ದೇವಿಯ ಅವತಾರವಾಗಿ ನೆಲೆಸಿದ್ದಾಳೆ. ಇದರಿಂದಲೇ ಬಳ್ಳಾರಿ ಗ್ರಾಮದೇವತೆಯಾಗಿ ಕಂಡು ಬರುತ್ತದೆ. ರಾಮಾಯಣದ, ವಾಲಿ, ಸುಗ್ರೀವ ಮತ್ತು ಆಂಜನೇಯ ಮತ್ತು ಜಾಂಬುವಂತ ಇಲ್ಲಿಯ ಋಷ್ಯಮೂಕ ಪರ್ವತದ ಬಳಿ ಕಿಷ್ಕಿಂಧೆಯಲ್ಲಿದ್ದರೆಂದು ಪ್ರತೀತಿ. Sugreeva later devieen out of his Brother Vali was Vanaraking at the time of Kishkinda which has been Genarally acknowledge to have been near present Hampi Hospet Taluk (Gazetter).

ಹಂಪೆಯಲ್ಲಿ ಶಿವ ಮತ್ತು ಪಾರ್ವತಿಯರು ತಪಸ್ಸು ಮಾಡಿರುವುದಲ್ಲದೆ; ಇಲ್ಲಿಯೇ ಶಿವ ಪಾರ್ವತಿಯರ ವಿವಾಹ ಹಾಗೂ ಮನ್ಮಥನನ್ನು ಶಿವನು ಹಣೆಗಣ್ಣಿನಿಂದ ಸುಟ್ಟು ಭಸ್ಮ ಮಾಡಿದ ಸ್ಥಳ ಇದಾಗಿದೆಂದು ಸ್ಥಳ ಪುರಾಣದಿಂದ ತಿಳಿದು ಬರುತ್ತದೆ. ಬ್ರಹ್ಮನ ಮಗಳು ಪಂಪಾಳ ಹೆಸರಿನಲ್ಲಿ ಪ್ರಸಿದ್ಧವಾದ ಕ್ಷೇತ್ರವಾಗಿದ್ದಿತು. ವಿಜಯನಗರ ಸಾಮ್ರಾಜ್ಯದ ರಾಜಧಾನಿ ಪಂಪಾಕ್ಷೇತ್ರ, ಅದೇ ಹಂಪಿ. 'ಕೌಮುದಿ ಮಹೋತ್ಸವ'ವೆಂಬ ಸಂಸ್ಕೃತ ಗ್ರಂಥದಲ್ಲಿ ಮತ್ತು ಹರಿಶ್ಚಂದ್ರವೆಂಬ ಕನ್ನಡ ಗ್ರಂಥದಲ್ಲೂ ಪಂಪಾಕ್ಷೇತ್ರದ ವರ್ಣನೆಯಿದೆ. ಹೀಗೆ ಅನೇಕ ಅಂಶಗಳಿಂದ ಪ್ರಸ್ತಾಪಗೊಂಡಿರುವ ಈ ಪ್ರದೇಶ, ತನ್ನದೇ ಆದ ಮಹತ್ವ ಪಡೆದಿದೆ.

**ಚಾರಿತ್ರಿಕ ಹಿನ್ನೆಲೆ**

ಇಳೆಯೊಳ್ ಪೆರ್ಮಳೆಯಂ ಸಮಸ್ತ ಫಲಮುಂ

ಸಂತೋಷಮ್ಂ ಧರ್ಮಸಂ ।

ಕುಳಮುಂ ಸತ್ಯಮುಮೀಶ್ವರಾರ್ಚನೆಯಂ ಸೊಂಪುಂ

ಶ್ರೀ ಯಮಾಯುಂನಿರಾ

ಕುಳ ಮೇಂದು ನೆಲಸಿರ್ಪೂದೊಂದು ತೆರೆನಾ

ತಾಂ ಮಾಳ್ಕೆ ಸರ್ವೇಶ್ವರಿ ।

ವಿಳ ಸತ್ಸಂಗ ಸುಖಾಖ್ಯಶೀತ ಕಿರಣಂ ಪಂಪಾ ಪುರಾಧೀಶ್ವರ ॥ ಹರಿಹರ.

ಪ್ರಪಂಚಕ್ಕೆ ಯಥೇಚ್ಛವಾಗಿ, ಮಳೆ, ಬೆಳೆಗಳನ್ನು ಕೊಟ್ಟು ಸುಭಿಕ್ಷವನ್ನುಂಟು ಮಾಡಿ ಸತ್ಯ, ಧರ್ಮ, ಭಕ್ತಿ ಜ್ಞಾನಗಳು ನೆಲಸುವಂತೆಯೂ, ಸುಖ-ಸಂತೋಷ ಸೌಭಾಗ್ಯಗಳು ಲಭಿಸುವಂತೆ ಅನುಗ್ರಹಿಸಲೆಂದು ಬಳ್ಳಾರಿ ಜಿಲ್ಲೆಯ ಹರಿಹರ ಕವಿಗಳು ಆ ದೇವರನ್ನು ಪ್ರಾರ್ಥಿಸಿದ್ದಾರೆ. ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿಗಳು ಈ ಮಂಗಳ ಪ್ರಾರ್ಥನೆಯ ನಿಲುವಿನಲ್ಲಿ ವಿಜೃಂಭಿಸುತ್ತವೆ. ಪ್ರಕೃತಿದತ್ತವಾದ ಸಂಪನ್ಮೂಲಗಳಿಂದಲೂ ಆತ್ಮಪ್ರೇರಿತವಾದ ಆಶೋತ್ತರಗಳಿಂದಲೂ ಕೂಡಿ ಈ ಜಿಲ್ಲೆಯು ಪ್ರಸಿದ್ಧಿಗೊಂಡಿದೆ.

ಪ್ರಾಗೈತಿಹಾಸ ಕಾಲದ ಜನಪದರನ್ನು ಗಮನಿಸಿದರೆ, ಹಲವಾರು ಪ್ರಮುಖ ಅಂಶಗಳು ಕಂಡು ಬರುತ್ತವೆ. ಪುರಾತನ ಇತಿಹಾಸ ಘಟ್ಟಗಳಾದ ಪುರಾತನ ಶಿಲಾಯುಗ, ನವಶಿಲಾಯುಗ, ಕಬ್ಬಿಣದ ಯುಗ, ಹೀಗೆ ಎಲ್ಲಾ ಹಂತಗಳಲ್ಲಿ ಜಿಲ್ಲೆಯು ನಡೆದು ಬಂದಿರುವುದು ಗೋಚರವಾಗುತ್ತದೆ. ಗುಡೇಕೋಟೆ, ಜರಮಲೆ, ಕಪ್ಪಗಲ್ಲು, ಸಂಗನಕಲ್ಲು ಗಾದಿಗನೂರು ಇನ್ನೂ ಮುಂತಾದ ಸ್ಥಳಗಳಲ್ಲಿ ನಡೆಯಿಸಿದ ಪ್ರಾಚ್ಯ ಸಂಶೋಧನೆಯಿಂದ ಜಿಲ್ಲೆಯ ಮಹತ್ವ ತಿಳಿದು ಬರುತ್ತದೆ. ಭಾರತದ ಪೂರ್ವೇತಿಹಾಸದ ಸಂಶೋಧಕರಲ್ಲಿ ಒಬ್ಬರಾದ ಬ್ರೂಸ್‌ಪೇಟೆ ಅವರು ಈ ಜಿಲ್ಲೆಯಲ್ಲಿ ಚರಿತ್ರಾಪೂರ್ವದ ಸಂಸ್ಕೃತಿಗಳನ್ನು ಸೂಚಿಸುವ ೭೭ ಸ್ಥಳಗಳಿವೆಂದು ಹೇಳಿದ್ದಾರೆ.

ಚಾರಿತ್ರಿಕ ಯುಗಕ್ಕೆ ಬಂದರೆ, ಕ್ರಿ.ಪೂ. ೪ನೇ ಶತಮಾನದಲ್ಲಿ ನಂದರು, ತರುವಾಯ ಮೌರ್ಯರು ಜಿಲ್ಲೆಯನ್ನು ಆಳಿದ್ದರೆಂಬುದು ಅಶೋಕನ ಶಿಲಾಶಾಸನಗಳಿಂದ ತಿಳಿದು ಬರುತ್ತದೆ (ನಿಟ್ಟೂರಿನ ಶಿಲಾಶಾಸನ). ಆನಂತರದಲ್ಲಿ ಶಾತವಾಹನರು, ಕದಂಬರು ಆಳ್ವಿಕೆ ನಡೆಸಿದ್ದಾರೆ. ಕುರುಗೋಡಿನ ಶಾಸನವು ಬಾದಾಮಿ ಚಾಲುಕ್ಯರ ೨ನೇ ಪುಲಕೇಶಿಯು ಈ ಜಿಲ್ಲೆಯನ್ನಾಳಿರುವುದರ ಬಗ್ಗೆ ತಿಳಿಸುತ್ತದೆ.

ನಂತರದಲ್ಲಿ ರಾಷ್ಟ್ರಕೂಟರು, ನೊಳಂಬರು, ಗಂಗರು, ಕಲ್ಯಾಣಿ ಚಾಲುಕ್ಯರು, ಪಾಂಡ್ಯರು, ಕಲಚೂರರು, ಹೊಯ್ಸಳರು, ಸೇವುಣರು ಈ ಜಿಲ್ಲೆಯನ್ನು ಆಳಿದ್ದಾರೆ. ಕ್ರಿ.ಶ. ೧೩೨೭ರಲ್ಲಿ ಕಂಪ್ಲಿ ಕಂಪಣರಾಯ ಮತ್ತು ಅವನ ಮಗ ಗಂಡುಗಲಿ ಕುಮಾರ ರಾಮನು ತೊಘಲಖ್‌ರೊಡನೆ ಯುದ್ಧದಲ್ಲಿ ಹೋರಾಡಿ ಮಡಿದರು. ಜನಪದರು ಇವರ ಬಗ್ಗೆ ಅನೇಕ ಜನಪದ ಗೀತೆಗಳನ್ನು ರಚಿಸಿದ್ದಾರೆ. ಅವು

ಈಗಲೂ ಪ್ರಸಿದ್ಧವಾಗಿದೆ. ತೊಘಲಕ್‌ನ ಸೈನಕ್ಕೆ ಸೆರೆ ಸಿಕ್ಕವರಲ್ಲಿ ಹರಿಹರ ಮತ್ತು ಬುಕ್ಕ ಸಹೋದರರು ಇದ್ದರೆಂದೂ ಮುಂದೆ ಅವರೇ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದರೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಇವರ ಆಳ್ವಿಕೆಯಲ್ಲಿ ಕೃಷ್ಣದೇವರಾಯನ ಕಾಲ ಸುವರ್ಣಯುಗದಿಂದ ಕೂಡಿತ್ತೆಂದು ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ. ಇಂತಹ ಸಾಮ್ರಾಜ್ಯವು ೧೫೬೫ರ ಜನವರಿ ೨೩ ರಂದು ರಕ್ಕಸತಂಗಡಿ ಯುದ್ಧದಲ್ಲಿ ಪತನವಾಯಿತು.

ಈ ಪ್ರದೇಶವನ್ನು ೧೬೩೧ರವರೆಗೆ ಹನುಮಪ್ಪ ನಾಯಕ ಆಳುತ್ತಿದ್ದು, ಆತನು ತನ್ನ ಪಾಳೆಯ ಪಟ್ಟಿಗೆ ಬಳ್ಳಾರಿಯನ್ನು ಕೇಂದ್ರ ಸ್ಥಳವಾಗಿಸಿಕೊಂಡಿದ್ದನು. ಆನಂತರದಲ್ಲಿ ಮರಾಠರು, ಮೊಘಲರು, ನಿಜಾಮರು, ನಂತರ ಹೈದರಾಲಿ ಮತ್ತು ಟಿಪ್ಪುಸುಲ್ತಾನರ ಆಡಳಿತಕ್ಕೆ ಒಳಪಟ್ಟಿದ್ದು ನಂತರ ಬ್ರಿಟೀಷರ ವಶಕ್ಕೆ ಸೇರಿಕೊಂಡಿತು. ಸ್ವಾತಂತ್ರ್ಯದ ನಂತರದಲ್ಲಿ ೧೯೫೬ರಲ್ಲಿ ಕರ್ನಾಟಕ ರಾಜ್ಯದ ಒಂದು ಜಿಲ್ಲೆಯಾಗಿ (ಬಳ್ಳಾರಿ) ಅಸ್ತಿತ್ವಕ್ಕೆ ಬಂದಿತು.

### ೨.೨. ಭೌಗೋಳಿಕ ಲಕ್ಷಣಗಳು

ಜಿಲ್ಲೆಯ ಪಶ್ಚಿಮಕ್ಕೆ ಹಾವೇರಿ, ದಕ್ಷಿಣದಲ್ಲಿ ದಾವಣಗೆರೆ, ಉತ್ತರಕ್ಕೆ ರಾಯಚೂರು ಪೂರ್ವಕ್ಕೆ ಆಂಧ್ರ ಪ್ರದೇಶಗಳಿವೆ. ಪೂರ್ವ ಪಶ್ಚಿಮ ೧೬೧.೮ ಕಿ.ಮೀ. ಉತ್ತರ ದಕ್ಷಿಣ ೮೩.೭೮ ಕಿ.ಮೀ. ನೈರುತ್ಯ ಈಶಾನ್ಯ ೧೮೭೮ ಕಿ.ಮೀ. ಉದ್ದವಾಗಿದೆ. ಪೂರ್ವ ರೇಖಾಂಶ ೭೫'-೪೦° ಮತ್ತು ೭೭'-೧೧° ಪೂರ್ವರೇಖಾಂಶ ಮಧ್ಯದಲ್ಲಿದೆ. ಉತ್ತರ ರೇಖಾಂಶ ೧೪'-೧೩' ಮತ್ತು ೧೫-೫೦ ಅಕ್ಷಾಂಶದಲ್ಲಿದೆ. ಪ್ರಸ್ತುತ ಸನ್ನಿವೇಶದಲ್ಲಿ ೭ ತಾಲೂಕುಗಳನ್ನೊಳಗೊಂಡು ೨೭ ಹೋಬಳಿಗಳು ೧೮೯ ಗ್ರಾಮ ಪಂಚಾಯ್ತಿಗಳು ೫೨೪ ಗ್ರಾಮಗಳನ್ನೊಳಗೊಂಡಿರುವುದಲ್ಲದೆ, ೬ ಪಟ್ಟಣ ಪಂಚಾಯ್ತಿ, ೧೦ ನಗರ/ಪುರಸಭೆಗಳನ್ನೊಳಗೊಂಡ ಜಿಲ್ಲೆಯಾಗಿದೆ. ಜಿಲ್ಲೆಯ ವಿಸ್ತೀರ್ಣ ೮೪೨೦ ಚ.ಕಿ.ಮೀ. ಆಗಿದ್ದು ೨೦,೨೭೧೪೦ರಷ್ಟು ಜನಸಂಖ್ಯೆಯನ್ನು ಹೊಂದಿದೆ (೨೦೦೧ ಜನಗಣತಿ). ತುಂಗಭದ್ರಾ ನದಿಯು ನೈಸರ್ಗಿಕ ಮೇರೆಯಾಗಿದ್ದು, ಪಶ್ಚಿಮದಲ್ಲಿ ಕೊಪ್ಪಳ ಮತ್ತು ಹಾವೇರಿ ಜಿಲ್ಲೆಯನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಗಳನ್ನು ಪ್ರತ್ಯೇಕಿಸುತ್ತದೆ. ದಕ್ಷಿಣದಲ್ಲಿ ದಾವಣಗೆರೆ, ಚಿತ್ರದುರ್ಗ ಹಾಗೂ ಪೂರ್ವದಲ್ಲಿ ಆಂಧ್ರಪ್ರದೇಶದ ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ. ಸಂಡೂರು ತಾಲ್ಲೂಕಿನಲ್ಲಿ ಎತ್ತರವಾದ ಗುಡ್ಡಗಳಿದ್ದು, ಅವುಗಳ ಎತ್ತರವು ಸಮುದ್ರಮಟ್ಟಕ್ಕೆ ೩೪೦೦ ಅಡಿ ಎತ್ತರವಿದೆ.

### ಮಣ್ಣಿನ ನಮೂನೆ

ಜಿಲ್ಲೆಯಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನ ನಮೂನೆಗಳಿವೆ. ಕಪ್ಪು ಮಣ್ಣು ಮೂಲದಲ್ಲಿ ಫಲವತ್ತಾಗಿದ್ದು, ಹೆಚ್ಚಿನ ನೀರಿನ ಅಂಶವನ್ನು ಹಿಡಿದಿಟ್ಟುಕೊಳ್ಳುವ ಗುಣವನ್ನು ಹೊಂದಿದೆ. ಈ ಮಣ್ಣಿನ ಪ್ರದೇಶವು ಪ್ರತಿಶತ ೬೨ ರಷ್ಟು ಜೇಡಿಮಣ್ಣಿನಿಂದ ಕೂಡಿರುತ್ತದೆ. ಹೊಸಪೇಟೆ, ಹಡಗಲಿ, ಕೂಡ್ಲಿಗಿ ಮತ್ತು ಸಂಡೂರು ತಾಲ್ಲೂಕುಗಳಲ್ಲಿ ಉಸುಕು ಮಿಶ್ರಿತ ಕೆಂಪು ಮಣ್ಣು ಜಿಗಟು ಮಣ್ಣುಗಳು ದೊರೆಯುತ್ತವೆ

## ನದಿಗಳು

ಜಿಲ್ಲೆಯ ಪ್ರಮುಖ ನದಿ ತುಂಗಭದ್ರಾ. ಈ ನದಿಗೆ ಹೊಸಪೇಟೆ ಹತ್ತಿರ ಅಣೆಕಟ್ಟು ಕಟ್ಟಿದ್ದಾರೆ. ಈ ಜಲಾಶಯದ ನೀರನ್ನು ಕೃಷಿ, ಕೈಗಾರಿಕೆ, ಕುಡಿಯುವ ನೀರಿಗಾಗಿ ಬಳಸುತ್ತಿದ್ದಾರೆ. ಇದರ ಉಪನದಿಗಳು ಹಗರಿ ಮತ್ತು ಚಿಕ್ಕಹಗರಿ. ತುಂಗಭದ್ರಾ ನದಿಯು ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿ ಹರಿಯುತ್ತಿದ್ದು, ವರ್ಷದಲ್ಲಿ ಸದಾಕಾಲ ನೀರಿನಿಂದ ಕೂಡಿರುತ್ತದೆ. ಈ ನದಿಯು ಹಡಗಲಿ ತಾಲ್ಲೂಕಿನ ಕುರುವತ್ತಿ ಗ್ರಾಮದಲ್ಲಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಇದರ ನೀರು ಕುಡಿಯಲು ರುಚಿಕರವಾಗಿದ್ದು, ಗಂಗಾ ಸ್ನಾನ ತುಂಗಪಾನ ಎಂಬ ನಾಣ್ನುಡಿಯನ್ನು ಸ್ಮರಣೆಗೆ ತಂದುಕೊಡುತ್ತದೆ. ನಾರಿ ಹಳ್ಳ ಜಲಾಶಯವು ಸಂಡೂರು ತಾಲ್ಲೂಕಿನಲ್ಲಿದ್ದು ತಾರನಗರದ ಹತ್ತಿರ ಹಳ್ಳಕ್ಕೆ ಒಡ್ಡು ಹಾಕಿ ನೀರಾವರಿ ಸೌಲಭ್ಯ ಮಾಡಲಾಗಿದೆ. ಹಾಗೆಯೇ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಮಾಲವಿ ಎಂಬ ಗ್ರಾಮದ ಹತ್ತಿರ ಹಗರಿ ನದಿಗೆ ಚಿಕ್ಕ ಅಣೆಕಟ್ಟು ಕಟ್ಟಿ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿದೆ.

## ಹವಾಮಾನ

ಜಿಲ್ಲೆಯ ಹವಾಮಾನವು ವರ್ಷದಲ್ಲಿ ಹೆಚ್ಚಿನ ಭಾಗ ಶುಷ್ಕವಾಗಿದ್ದು ಬೇಸಗೆಯಲ್ಲಿ ಅತಿ ಹೆಚ್ಚು ಉಷ್ಣಾಂಶಗಳಿಂದ ಕೂಡಿರುತ್ತದೆ. ಡಿಸೆಂಬರ್‌ನಿಂದ ಫೆಬ್ರವರಿಯವರೆಗೆ ವಾತಾವರಣ ತಂಪಾಗಿರುತ್ತದೆ. ಚಳಿಗಾಲದಲ್ಲಿ ಕನಿಷ್ಟ ಉಷ್ಣಾಂಶವು ೯'-೧೦ ಸೆಂಟಿಗ್ರೇಡ ಇದ್ದು ಗರಿಷ್ಠ ೩೫' ವರೆಗೆ ಇರುತ್ತದೆ. ಬೇಸಗೆಯಲ್ಲಿ ಕನಿಷ್ಠ ೧೫'-೪೪' ಸೆಂಟಿಗ್ರೇಡವರೆಗೆ ಉಷ್ಣಾಂಶವು ಇರುತ್ತದೆ.

## ವಿಸ್ತೀರ್ಣ ಮತ್ತು ಆಡಳಿತ ವಿಭಾಗಗಳು

ಜಿಲ್ಲೆಯು ೮೪೨೦ ಚ.ಕಿ.ಮೀ. ವಿಸ್ತೀರ್ಣ ಹೊಂದಿದ್ದು, ರಾಜ್ಯದ ಒಟ್ಟು ಶೇಕಡಾ ೬ರಷ್ಟು ವಿಸ್ತೀರ್ಣ ಹೊಂದಿದ್ದು ೧೧ನೆಯ ಸ್ಥಾನದಲ್ಲಿದೆ. ಬಳ್ಳಾರಿ ತಾಲ್ಲೂಕು ಅತಿ ಹೆಚ್ಚು ೧೬೮೯ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದ್ದು, ಹೊಸಪೇಟೆ ತಾಲ್ಲೂಕು ಅತಿ ಕಡಿಮೆ ೯೩೪ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಜಿಲ್ಲೆಯ ಕೇಂದ್ರ ಸ್ಥಾನ ಬಳ್ಳಾರಿ. ಅದು ರಾಜ್ಯದ ರಾಜಧಾನಿಯಿಂದ ೩೦೪ ಕಿ.ಮೀ. ದೂರದಲ್ಲಿದೆ.

ಜಿಲ್ಲೆಯಲ್ಲಿ ಒಂದು ಮಹಾನಗರ ಪಾಲಿಕೆ (ಬಳ್ಳಾರಿ), ಒಂದು ನಗರ ಸಭೆ (ಹೊಸಪೇಟೆ), ಪುರಸಭೆ (ಕಂಪ್ಲಿ), ೭ ಪಟ್ಟಣ ಪಂಚಾಯತಿಗಳು ಸಿರುಗುಪ್ಪಾ, ಕಮಲಾಪುರ ತೆಕ್ಕಲಕೋಟೆ, ಹಡಗಲಿ, ಸಂಡೂರು, ಕೊಟ್ಟೂರು ಮತ್ತು ಕೂಡ್ಲಿಗಿಯಲ್ಲಿ ಇರುತ್ತವೆ.

## ಖನಿಜಗಳು

ಜಿಲ್ಲೆಯ ಕೈಗಾರಿಕಾ ಕ್ಷೇತ್ರದಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದೆ. ವಿಶ್ವದ ಮಾರುಕಟ್ಟೆಯಲ್ಲಿ ಇಲ್ಲಿನ ಖನಿಜಗಳು ಹೆಸರು ಮಾಡಿವೆ. ಜಿಲ್ಲೆಯ ಹೊಸಪೇಟೆ, ಬಳ್ಳಾರಿ ಮತ್ತು ಸಂಡೂರು ತಾಲೂಕುಗಳಲ್ಲಿ

ಕಬ್ಬಿಣದ ಅದಿರು, ಮ್ಯಾಂಗನೀಸ್, ರೆಡ್ಆಕ್ಸೈಡ್, ಇನ್ನು ಮುಂತಾದ ಅದಿರುಗಳು ದೊರಕುತ್ತಿದ್ದು, ಇವುಗಳ ರಫ್ತಿನಿಂದಾಗಿ ಅಧಿಕ ವರಮಾನ ಪಡೆಯುವ ಜಿಲ್ಲೆಯಾಗಿದೆ. ವಿಶ್ವಮಾನ್ಯತೆ ಪಡೆದ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಗಳು ಈ ಪ್ರದೇಶದಲ್ಲಿದ್ದು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ೧ ಲಕ್ಷಕ್ಕೂ ಹೆಚ್ಚು ಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿವೆ. ಆದರೆ ಪ್ರಪಂಚದ ಆರ್ಥಿಕತೆಯಲ್ಲಿನ ವ್ಯತ್ಯಾಸದಿಂದಾಗಿ ಇಲ್ಲಿನ ಗಣಿಗಾರಿಕೆ ಈಗ ಕುಂಠಿತಗೊಂಡಿದೆ ಎಂದು ಹೇಳಬಹುದು.

**೪.೩. ಬ್ಯಾಂಕಿಂಗ್ ವ್ಯವಸ್ಥೆ**

ಜಿಲ್ಲೆಯ ಅಭಿವೃದ್ಧಿಗೆ ಹಣಕಾಸು ಅತ್ಯಾವಶ್ಯಕ. ಇಂತಹ ಹಣಕಾಸು ವ್ಯವಹಾರವನ್ನು ಕ್ರಿ.ಪೂ. ೨ನೇ ಶತಮಾನದಿಂದಲೂ ನಿರ್ವಹಿಸಿಕೊಂಡು ಬಂದಿರುವವರೆಂದರೆ ಲೇವಾದೇವಿಗಾರರು. ಇವರು ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮೀಣ ಜನಪದರ ಹಣದ ಅವಶ್ಯಕತೆಯನ್ನರಿತು ಉತ್ಪಾದಕ ಮತ್ತು ಅನುತ್ಪಾದಕ ಚಟುವಟಿಕೆಗಳಿಗೆ ಹಣಕಾಸನ್ನು ಪೂರೈಸುತ್ತಿದ್ದರು. ಇವರುಗಳಲ್ಲಿ ಪ್ರಮುಖರಾದವರೆಂದರೆ ಮಾರ್ವಾಡಿಗರು (Marwadies) ಮತ್ತು ವೈಶ್ಯರು (Vysaru).

ಇವರು ಜಿಲ್ಲೆಯ ಬ್ಯಾಂಕಿಂಗ್ ವ್ಯವಸ್ಥೆಯ ನಿಧಾನ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇವರುಗಳು ತಮ್ಮಲ್ಲಿರುವ ಹೆಚ್ಚುವರಿಯಾದ ಹಣವನ್ನು ತಮ್ಮ ಲೇವಾದೇವಿಗೆ ತೊಡಗಿಸಿಕೊಂಡಿದ್ದರು. ರೈತರಿಗೆ ಅಧಿಕ ಪ್ರಮಾಣದ ಸಾಲವನ್ನು ಒದಗಿಸುತ್ತಿದ್ದರು. ಅತಿಹೆಚ್ಚು ಪ್ರಮಾಣದ ರೈತರು ಲೇವಾದೇವಿಗಾರರ ಸಾಲಗಾರರಾಗಿದ್ದರು. ಇವರುಗಳು ವಿಧಿಸುತ್ತಿದ್ದ ಬಡ್ಡಿಯದರವು ಪ್ರತಿಶತ ೧೮ ರಿಂದ ೫೦ರವರೆಗೂ ಇರುತ್ತಿತ್ತು. ಇವರುಗಳು ಸಾಲವನ್ನು ವಿತರಿಸುವಾಗ ವೈಯಕ್ತಿಕ ಭದ್ರತೆ ಮತ್ತು ಜಾಮೀನುದಾರರ ಸ್ಥಿರ ಆಸ್ತಿಗಳನ್ನು ಹಾಗೂ ವೈಯಕ್ತಿಕ ಪತ್ರಗಳ ಆಧಾರದ ಮೇಲೆ ಸಾಲವನ್ನು ಒದಗಿಸುತ್ತಿದ್ದರು. ರೈತರಿಗೆ ಅಲ್ಪಾವಧಿ ಸಾಲವನ್ನು ಒಂದರಿಂದ ಮೂರು ವರ್ಷಗಳ ಕಾಲಾವಧಿಗೆ ನೀಡುತ್ತಿದ್ದರು. ಆ ಅವಧಿಯಲ್ಲಿ ಸಾಲ ಪಡೆದವರು ಸಾಲ ಮರುಪಾವತಿ ಮಾಡಬೇಕಾಗಿತ್ತು. ಅವಧಿ ಮೀರಿದ ಸಾಲಕ್ಕೆ ಪುನಃ ಪ್ರತಿಶತ ೧೮ರಷ್ಟು  ಬಡ್ಡಿಯನ್ನು ದಂಡದ ರೂಪದಲ್ಲಿ ಕೊಡಬೇಕಾಗಿತ್ತು.

ಸಾಲಗಾರರು ತಮ್ಮ ಅವಶ್ಯಕತೆಗೆ ತಕ್ಕಂತೆ ಸಾಲ ಪಡೆಯುತ್ತಿದ್ದರು. ಅದರಂತೆ ಬಡ್ಡಿಯ ದರದ ಪ್ರಮಾಣವು ಅಧಿಕವಾಗುತ್ತಿತ್ತು. ಇವರುಗಳು ಸಾಂಸ್ಥಿಕ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯಲು ಹಲವಾರು ಕಷ್ಟಗಳಿರುವುದರಿಂದ ಜನಪದರು ನೇರವಾಗಿ ಲೇವಾದೇವಿಗಾರರಿಂದ ಹೆಚ್ಚಿನ ಬಡ್ಡಿಯ ದರಕ್ಕೆ ಸಾಲವನ್ನು ಪಡೆಯುತ್ತಿದ್ದರು. ಇವರಿಂದ ಸಾಲ ಪಡೆದವರು ತಮ್ಮ ಬಡತನ, ಮಕ್ಕಳ ಮದುವೆ-ಮುಂಜಿ, ಹಬ್ಬ-ಹರಿದಿನಗಳಿಂದ ಹಾಗೆಯೇ ಬರಗಾಲದ ಸನ್ನಿವೇಶ ತಮ್ಮ ದಿನನಿತ್ಯದ ವೆಚ್ಚಗಳಿಂದಾಗಿ ಸಾಲವನ್ನು ಸಕಾಲದಲ್ಲಿ ಮರುಪಾವತಿ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಸಾಲಗಾರನ ಸ್ಥಿರ ಆಸ್ತಿಯನ್ನು ಲೇವಾದೇವಿಗಾರರು ಮುಟ್ಟುಗೋಲು ಹಾಕಿಕೊಳ್ಳುತ್ತಿದ್ದರು. ಆಗ ಸಾಲ ಪಡೆದವರು ಸಾಲ ತೀರಿಸಲೋಸುಗ ಲೇವಾದೇವಿಗಾರರ ಮನೆಯ ಜೀತದಾಳುಗಳಾಗಿ ಸಾಲ ತೀರಿಸಬೇಕಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಜಿಲ್ಲೆಯ ರೈತರ ಸಾಲ ಹೆಚ್ಚಾಗಲು ಎರಡು ಕಾರಣಗಳನ್ನು ಕಾಣಬಹುದು.

೧. ಕೃಷಿ ಚಟುವಟಿಕೆಗಳಿಗೆ ಸಂಬಂಧಪಟ್ಟ ಅಂಶಗಳು

೨. ಕುಟುಂಬ ನಿರ್ವಹಣೆಯ ಅಂಶಗಳು

ಭೂಮಿಯಿಂದ ಬರುವ ವರಮಾನವು ಕಡಿಮೆಯಾಗಿ ಜೀವನ ನಿರ್ವಹಣೆ ಸಾಧ್ಯವಾಗದ ಸಂದರ್ಭ ಒಂದೆಡೆಯಾದರೆ, ವಂಶ ಪಾರಂಪರ್ಯ ಸಾಲ ಮತ್ತು ಮರುಪಾವತಿಗಳು ಮತ್ತೊಂದೆಡೆಯಾಗಿದೆ. ಜಿಲ್ಲೆಯ ಹಲವು ಪ್ರದೇಶಗಳು ನಿರಂತರವಾಗಿ ಬರಗಾಲವನ್ನೆದುರಿಸುತ್ತಾ ಬಂದಿದ್ದುದರಿಂದಾಗಿ ಕೃಷಿಕರ ವರಮಾನ ದಿನನಿತ್ಯದ ಚಟುವಟಿಕೆಗಳ ವೆಚ್ಚವನ್ನು ಕೂಡ ಭರಿಸಲಾಗದ ಸನ್ನಿವೇಶದಲ್ಲಿ, ಪುನಃ ಮುಂದಿನ ವರ್ಷದ ಕೃಷಿ ಚಟುವಟಿಕೆಗಳಿಗೆ ಅದೇ ಲೇವಾದೇವಿಗಾರರಿಂದ ಸಾಲ ಪಡೆಯುತ್ತಿದ್ದರು. ಹೀಗಾಗಿ ಕೃಷಿಕರು ಸಾಲ ಕೂಪದಲ್ಲಿ ಬೀಳುವುದು ಅನಿವಾರ್ಯವಾಗುತ್ತಿತ್ತು.

ಮಳೆಯ ಅನಿಶ್ಚಿತತೆ ಪದೇ ಪದೇ ಸಂಭವಿಸುವ ಬರಗಾಲಗಳು ಜೀವನ ನಿರ್ವಹಣೆಯ ವೆಚ್ಚದ ಹೆಚ್ಚಳದಿಂದಾಗಿ ರೈತರ ಸಾಲದ ಪ್ರಮಾಣವು ಗಣನೀಯ ಪ್ರಮಾಣದಲ್ಲಿ ಅಧಿಕವಾಗುತ್ತಾ ಬಂದಿತು. ಸಣ್ಣ ಮತ್ತು ಅತಿಸಣ್ಣ ರೈತರು ತಮ್ಮ ಕೃಷಿ ವರಮಾನ ಕಡಿಮೆಯಾದ ಸಂದರ್ಭಗಳಲ್ಲಿ, ಕೃಷಿ ಕಾರ್ಮಿಕರಾಗಿ ದುಡಿದು ತಮ್ಮ ವರಮಾನ ಸುಧಾರಿಸಿಕೊಳ್ಳಲು ಪ್ರಯತ್ನಿಸಿದರಾದರೂ ಸಾಲದ ಹೊರೆಯಿಂದ ಮುಕ್ತರಾಗಲಿಲ್ಲ.

ಭಾರತ ಸರ್ಕಾರವು ಲೇವಾದೇವಿ ವ್ಯವಹಾರದಾರರು ವಿಧಿಸುತ್ತಿದ್ದ ಬಡ್ಡಿಯ ದರವನ್ನು ಗಮನಿಸಿ ೧೮೮೫ರಲ್ಲಿ ಒಂದು ಸಮಿತಿಯನ್ನು ರಚಿಸಿತು. ಆ ಸಮಿತಿಯು ೫೦೦ ರೂಪಾಯಿಗಳಿಗಿಂತ ಕಡಿಮೆ ಮೊತ್ತದ ಸಾಲ ಪಡೆದವರು ಪ್ರತಿಶತ ೯ರಷ್ಟು ಬಡ್ಡಿಯನ್ನು ಕೊಡಬೇಕೆಂದು ಶಿಫಾರಸ್ಸು ಮಾಡಿತು. ಹಾಗೆಯೇ ಸರಕಾರವು ಅದನ್ನು ಕಾಯ್ದೆ ರೂಪದಲ್ಲಿ ಜಾರಿ ತಂದಿತು.

ಗ್ರಾಮೀಣ ಸಾಲದ ಬಗ್ಗೆ ಪ್ರಥಮ ಪ್ರಯತ್ನವೆಂಬತೆ ಮದ್ರಾಸ್ ಪ್ರೆಸಿಡೆನ್ಸಿ ಪೆಡ್ರಿಕ್‌ನಿಕಲ್‌ಸನ್ (೧೮೯೫) ಇವರು "ರೈತರು ತಾವು ಪಡೆದ ಸಾಲದ ಹೊರೆಯ ಮೇಲೆ ಬಡ್ಡಿಯ ದರ ಪ್ರತಿಶತ ೧೮ರಷ್ಟು ಇರುವುದು ಹಾಗೂ ಆ ಹಣವನ್ನು ಅನುತ್ಪಾದಕ ಚಟುವಟಿಕೆಗಳಿಗೆ ಬಳಸುತ್ತಾರೆ ಎಂಬ ಅಂಶವನ್ನು ಗುರುತಿಸಿದ್ದಾರೆ.

ಬಳ್ಳಾರಿ ಜಿಲ್ಲೆಯು ಕೃಷಿ ಆಧಾರಿತವಾಗಿದ್ದು, ಅವರ ಸ್ಥಿತಿಗತಿಗಳು ಹೇಳಿಕೊಳ್ಳುವಂತಹದ್ದಾಗಿರಲಿಲ್ಲ. ಗ್ರಾಮೀಣ ಜನಪದರಿಗೆ ಸಾಹುಕಾರರು, ಮಾರ್ವಡಿಗರು, ವೈಶ್ಯರುಗಳು ಹಣಕಾಸಿನ ವ್ಯವಸ್ಥೆಯನ್ನು ನಿರ್ವಹಿಸುತ್ತಿದ್ದರು. ಇವರು ಕೃಷಿ ಮತ್ತು ಕುಟುಂಬದ ನಿರ್ವಹಣೆಗಾಗಿ ಸಾಲವನ್ನು ಕೊಡುತ್ತಿದ್ದರು. ಸಾಲ ಮರುಪಾವತಿ ವಿಳಂಬವಾದಾಗ ಸಾಲ ಪಡೆದವರನ್ನು ಈ ಲೇವಾದೇವಿಗಾರರು ಆಗಾಗ್ಗೆ ಬೆದರಿಸುತ್ತಿದ್ದರು.

ಜಿಲ್ಲೆಯಲ್ಲಿ ೧೯೧೫ರಲ್ಲಿ ಪಟ್ಟಣ ಸಹಕಾರ ಬ್ಯಾಂಕ್ ಅಸ್ತಿತ್ವಕ್ಕೆ ಬಂದಿತು. ಅಂದಿನಿಂದಲೇ ನಿಜವಾದ ಸಹಕಾರ ಬ್ಯಾಂಕು ಆರಂಭವಾಯಿತೆನ್ನಬಹುದು. ೧೯೨೦ರಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು ಅಸ್ತಿತ್ವಕ್ಕೆ ಬಂದಿತು. ಈ ಬ್ಯಾಂಕು ಪ್ರಾಥಮಿಕ ಸಹಕಾರ ಸಂಘಗಳ ಮೂಲಕ ರೈತರಿಗೆ ಬೆಳೆ ಸಾಲವನ್ನು ನೀಡುತ್ತಾ ಬಂದಿದೆ. ೩೧.೩.೨೦೦೬ಕ್ಕೆ ೫೯೧ ಸಂಘಗಳಿದ್ದು ೪,೮೩೦ ಲಕ್ಷ ರೂ.ಗಳ ಅಲ್ಪಾವಧಿ, ಮಧ್ಯಮಾವಧಿ ಸಾಲವನ್ನು ಕೃಷಿಕರಿಗೆ ಹಾಗೂ ಗ್ರಾಮೀಣ ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದಿರುವ ಸ್ವಸಹಾಯ ಗುಂಪುಗಳಿಗೆ ಒದಗಿಸಿದೆ.

ಸಹಕಾರ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದರೂ ರೈತರ ಸಾಲದ ಬೇಡಿಕೆಯನ್ನು ಪೂರ್ಣ ಈಡೇರಿಸಲು ಸಾಧ್ಯವಾಗಲಿಲ್ಲ ಎನ್ನಬಹುದು. ಆ ಕಾರಣ ರೈತರು ಲೇವಾದೇವಿಗಾರರಿಂದ ಸಾಲ ಪಡೆಯುವುದು, ಶೋಷಣೆಗೆ ಒಳಗಾಗುವುದು ನಿರಂತರವಾಗಿದೆ. ಅದನ್ನು ನಿಯಂತ್ರಿಸಲು ೧೯೬೧ರಲ್ಲಿ ಕರ್ನಾಟಕ ಸರಕಾರ ಮನಿಲೆಂಡರ ಕಾಯ್ದೆಯನ್ನು ಪಾಸು ಮಾಡಿತು. ಈ ಕಾಯ್ದೆಯು ೧೯೬೬ರಲ್ಲಿ ಪೂರ್ಣ ಪ್ರಮಾಣದಲ್ಲಿ ಕಾರ್ಯಾಚರಣೆಗೆ ಬಂದಿತು. ಸರಕಾರವು ಮನಿಲೆಂಡರರವರಿಗೆ ಪ್ರತಿಶತ ೧೫ ರಷ್ಟು ಸರಳಬಡ್ಡಿ ಕೊಡಬೇಕೆಂದು ಕಾಯ್ದೆ ಮಾಡಿತು ಮತ್ತು ನಿರಂತರವಾಗಿ ಲೆಕ್ಕ ಪುಸ್ತಕದಲ್ಲಿ ಪ್ರತಿ ಸಾಲದ ಮುಂಗಡ ಮತ್ತು ಒಟ್ಟು ಮೊತ್ತವನ್ನು ತೋರಿಸಬೇಕೆಂದು ಒಂದು ಕಾಯ್ದೆಯನ್ನು ಜಾರಿಗೆ ತಂದಿತು.

ಸರಕಾರವು ರೈತರನ್ನು ಲೇವಾದೇವಿಗಾರರಿಂದ ಮುಕ್ತಗೊಳಿಸುವ ಸಲುವಾಗಿ ಮತ್ತು ಕೃಷಿ ಉತ್ಪಾದನೆಯನ್ನು ಸುಧಾರಿಸಲು ವಿವಿಧ ರೀತಿಯ ಕಾರ್ಯಕ್ರಮಗಳನ್ನು ಜಾರಿಗೆ ತಂದಿತು. ಅವುಗಳಲ್ಲಿ ನೀರಾವರಿ ಸಾಲ, ತಕ್ಕಾವಿ ಸಾಲ ಸೌಲಭ್ಯವನ್ನು ಸರ್ಕಾರವೇ ನೇರವಾಗಿ ರೈತರಿಗೆ ಒದಗಿಸುವ ಸೌಲಭ್ಯವನ್ನು ಕಲ್ಪಿಸಿತು.

ಆದರೂ ಸರ್ಕಾರ, ಸಹಕಾರ ಸಂಘಗಳು ನಂತರ ವಾಣಿಜ್ಯ ವ್ಯವಹಾರಗಳಿಗಾಗಿ ಅಸ್ತಿತ್ವಕ್ಕೆ ಬಂದಂತಹ ವಾಣಿಜ್ಯ ಬ್ಯಾಂಕುಗಳು ಸಹ ಗ್ರಾಮೀಣ ಜನಪದರ ಹಣಕಾಸಿನ ಅವಶ್ಯಕತೆಯನ್ನು ಪೂರೈಸಲು ಅಸಾಧ್ಯವಾದಾಗ, ಭಾರತ ಸರ್ಕಾರವು ಚಿಂತಿಸಿ ಗ್ರಾಮೀಣ ಬ್ಯಾಂಕುಗಳನ್ನು ೧೯೭೫ರಲ್ಲಿ ಅಸ್ತಿತ್ವಕ್ಕೆ ತಂದಿತು; ಆ ಸೌಲಭ್ಯದ ಫಲವಾಗಿ ಬಳ್ಳಾರಿ ಜಿಲ್ಲೆಯಲ್ಲಿ ೧೯೭೬ರಲ್ಲಿ ತುಂಗಭದ್ರಾ ಗ್ರಾಮೀಣ ಬ್ಯಾಂಕನ್ನು ಎರಡು ಜಿಲ್ಲೆಗಳ ವ್ಯಾಪ್ತಿಯಲ್ಲಿ ಅಸ್ತಿತ್ವಕ್ಕೆ ತರಲಾಯಿತು. ೧೯೯೭ರವರೆಗೂ ಎರಡು ಜಿಲ್ಲೆಗಳಲ್ಲಿ ಪೂರ್ಣ ಪ್ರಮಾಣದಲ್ಲಿ ನಂತರ ದಾವಣಗೆರೆ, ಕೊಪ್ಪಳ ಜಿಲ್ಲೆಗಳಲ್ಲಿ ಭಾಗಶಃವಾಗಿ ಕಾರ್ಯನಿರ್ವಹಿಸುತ್ತಾ ಬಂದ ಈ ಬ್ಯಾಂಕಿನ ವ್ಯಾಪ್ತಿ, ೨೦೦೫ರ ನಂತರದಲ್ಲಿ ಕರ್ನಾಟಕ ರಾಜ್ಯದ ೯ ಜಿಲ್ಲೆಗಳಲ್ಲಿ ಹರಡಿರುವಂತಹ ಗ್ರಾಮೀಣ ಬ್ಯಾಂಕುಗಳ ಸಮೀಕರಣವಾಗಿ ಏಕ ಹೆಸರಿನೊಂದಿಗೆ ಪ್ರಗತಿ ಗ್ರಾಮೀಣ ಬ್ಯಾಂಕಾಗಿ ಕಾರ್ಯನಿರ್ವಹಿಸುತ್ತಿದೆ.

**ಜನಪದರ ಮೇಲೆ ಪ್ರಗತಿ ಗ್ರಾಮೀಣ ಬ್ಯಾಂಕಿನ ಪತ್ತಿನ ಪ್ರಭಾವ (ಬಳ್ಳಾರಿ ಜಿಲ್ಲೆಯಲ್ಲಿ)**

ಅಭಿವೃದ್ಧಿ ಸತತವಾಗಿ ನಡೆಯುವ ಪ್ರಕ್ರಿಯೆ. ಇದರಲ್ಲಿ ಸಮಗ್ರ ಆರ್ಥಿಕ ಚಟುವಟಿಕೆಗಳು ಬದಲಾವಣೆಯಾಗುತ್ತವೆ. ಬ್ಯಾಂಕುಗಳು ಹಣಕಾಸಿನ ಸಂಸ್ಥೆಗಳಾಗಿದ್ದು, ಹಣಕಾಸಿನ ಮೂಲ ಸೌಲಭ್ಯವನ್ನು ಅಭಿವೃದ್ಧಿಗೆ ಒದಗಿಸುತ್ತವೆ. ಈ ಸೌಲಭ್ಯ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಅವಶ್ಯಕವಾಗಿರುತ್ತದೆ. ಬ್ಯಾಂಕುಗಳು ಕೇವಲ ಹಣ ವಿತರಣಾ ಪ್ರತಿನಿಧಿಗಳಾಗಿರದೆ ಇಡೀ ಅರ್ಥವ್ಯವಸ್ಥೆಯಲ್ಲಿ ಬದಲಾವಣೆ ತರುವ ಸಂಸ್ಥೆಗಳಾಗಿವೆ.

ಗ್ರಾಮೀಣ ಅರ್ಥವ್ಯವಸ್ಥೆಯಲ್ಲಿ ಗ್ರಾಮೀಣ ಬ್ಯಾಂಕುಗಳು ಹೇಗೆ ಅಭಿವೃದ್ಧಿಯನ್ನು ಸಾಧಿಸಿವೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವಾಗಿದೆ. ದಕ್ಷಿಣ ಭಾರತದಲ್ಲಿ ಪ್ರಪ್ರಥಮವಾಗಿ ಕರ್ನಾಟಕದ ಬಳ್ಳಾರಿ ಜಿಲ್ಲೆಯಲ್ಲಿ ೨೫.೧.೧೯೭೬ರಂದು ತುಂಗಭದ್ರಾ ಗ್ರಾಮೀಣ ಬ್ಯಾಂಕು ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಗಳ ಕಾರ್ಯವ್ಯಾಪ್ತಿಯನ್ನು ಒಳಗೊಂಡು ಅಸ್ತಿತ್ವಕ್ಕೆ ಬಂದಿತು. ಜಿಲ್ಲಾ (೧೯೯೭) ಪುನರ್‌ವಿಂಗಡಣಾ ಸಂದರ್ಭದಲ್ಲಿ ಬಳ್ಳಾರಿ ಮತ್ತು ರಾಯಚೂರು ಜಿಲ್ಲೆಯ ಕೆಲವೊಂದು ತಾಲೂಕುಗಳು ಬೇರೆ ಜಿಲ್ಲೆಗೆ ವರ್ಗಾವಣೆಯಾಗಿ ಕಾರ್ಯವ್ಯಾಪ್ತಿಯ ಬಾಹುಳ್ಯ ದಾವಣಗೆರೆ ಮತ್ತು ಕೊಪ್ಪಳ ಜಿಲ್ಲೆಗೂ ವ್ಯಾಪಿಸಿತು.

ಕೇಂದ್ರ ಸರ್ಕಾರ ಮತ್ತು ಆರ್‌ಬಿಐ ಆದೇಶದಂತೆ ರಾಜ್ಯದಲ್ಲಿ ಒಂದೇ ಪ್ರಾಯೋಜಿತ ಕೆನರಾ ಬ್ಯಾಂಕಿನಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಚಿತ್ರದುರ್ಗ, ತುಂಗಭದ್ರಾ, ಕೋಲಾರ, ಸಹ್ಯಾದ್ರಿ ಗ್ರಾಮೀಣ ಬ್ಯಾಂಕುಗಳನ್ನು ಒಟ್ಟುಗೂಡಿಸಿ (೨೦೦೫ ಸೆಪ್ಟೆಂಬರ್) ಪ್ರಗತಿ ಗ್ರಾಮೀಣ ಬ್ಯಾಂಕು ಅಸ್ತಿತ್ವಕ್ಕೆ ಬಂದಿತು. ಪ್ರಸ್ತುತ ಬ್ಯಾಂಕು ೪೫೧ ಶಾಖೆಗಳೊಂದಿಗೆ ಏಳು ಜಿಲ್ಲೆಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಪ್ರಗತಿ ಗ್ರಾಮೀಣ ಬ್ಯಾಂಕು ಕಾರ್ಯನಿರ್ವಹಿಸುತ್ತಿರುವ ೭ ಜಿಲ್ಲೆಗಳ ಪೈಕಿ, ಬಳ್ಳಾರಿ ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಯಿತು. ಅಧ್ಯಯನಕ್ಕೆ ಜಿಲ್ಲೆಯಲ್ಲಿರುವ ೭ ತಾಲೂಕುಗಳಲ್ಲಿ ತಲಾ ಒಂದೊಂದು ಗ್ರಾಮೀಣ ಬ್ಯಾಂಕನ್ನು ಆಯ್ಕೆಮಾಡಿಕೊಳ್ಳಲಾಯಿತು. ೧೯೭೬ರಲ್ಲಿ ಅಸ್ತಿತ್ವಕ್ಕೆ ಬಂದಂತಹ ತುಂಗಭದ್ರಾ ಗ್ರಾಮೀಣ ಬ್ಯಾಂಕು (ಇಂದು ಪ್ರಗತಿ ಗ್ರಾಮೀಣ ಬ್ಯಾಂಕು) ಗ್ರಾಮೀಣ ಪ್ರದೇಶದಲ್ಲಿನ ಸಣ್ಣ/ಅತಿಸಣ್ಣ ರೈತರು, ಕರಕುಶಲ ಕರ್ಮಿಗಳು, ಭೂರಹಿತ ಕಾರ್ಮಿಕರು ಚಿಲ್ಲರೆ ವ್ಯಾಪಾರಿಗಳು, ದುರ್ಬಲ ವರ್ಗದವರ ಮೇಲೆ ಹೇಗೆ ತನ್ನ ಹಣಕಾಸಿನ ಪ್ರಭಾವದಿಂದ ಅಭಿವೃದ್ಧಿಪಡಿಸಿದೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಸಮೀಕ್ಷಿಸಲಾಗಿದೆ.

ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಪ್ರತಿ ಕ್ಷೇತ್ರದಲ್ಲಿನ ಪ್ರಗತಿ ಗ್ರಾಮೀಣ ಬ್ಯಾಂಕಿನ ಶಾಖೆಯನ್ನು ಅದರ ಗರಿಷ್ಠ ಸಾಲ ಮತ್ತು ಮುಂಗಡಗಳನ್ನೊಳಗೊಂಡ ಶಾಖೆಗಳನ್ನು ಗಣನೆಗೆ ತೆಗೆದುಕೊಂಡು, ಅದೇ ಶಾಖೆಯ ಕಾರ್ಯನಿರ್ವಹಣೆಯ ಬಗ್ಗೆ ಆ ಪ್ರದೇಶದಲ್ಲಿನ ಕುಟುಂಬಗಳನ್ನು ಸಮೀಕ್ಷೆಮಾಡಿ ಅಧಿಕ ಪತ್ತು ವಿತರಣೆಯಾಗಿರುವುದನ್ನು ಪರಿಗಣಿಸಲಾಯಿತು. ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಿರುವ ಪ್ರಗತಿ ಗ್ರಾಮೀಣ ಬ್ಯಾಂಕುಗಳ ೭ ಶಾಖೆಗಳ ಮತ್ತು ಕ್ಷೇತ್ರಗಳ ಪೂರ್ಣ ವಿವರಗಳನ್ನು ಕೆಳಗಿನ ಪಟ್ಟಿಯಲ್ಲಿ ಕಾಣಬಹುದು.

| ಕ್ರ.ಸಂ. | ಆಯ್ಕೆಮಾಡಿಕೊಂಡ ಕ್ಷೇತ್ರಗಳು | ಆಯ್ಕೆಮಾಡಿಕೊಂಡ ತಾಲ್ಲೂಕುಗಳು | ಪಿ.ಜಿ.ಬ್ಯಾಂಕಿನ ಶಾಖೆಗಳು | ಆಯ್ಕೆಯಾದ ಗ್ರಾಮಗಳು |
|---|---|---|---|---|
| ೦೧. | ಬಳ್ಳಾರಿ | ಬಳ್ಳಾರಿ | ಬಾಣಾಪುರ | ಬಾಣಾಪುರ, ಸಿಂಧವಾಳ |
| ೦೨. | ಸಿರಗುಪ್ಪಾ | ಸಿರಗುಪ್ಪಾ | ರಾರಾವಿ | ರಾರಾವಿ, ಚಣಕನೂರು |
| ೦೩. | ಸಂಡೂರು | ಸಂಡೂರು | ದರೋಜಿ | ದರೋಜಿ ಮತ್ತು ತಾಂಡ |
| ೦೪. | ಹೊಸಪೇಟೆ | ಹೊಸಪೇಟೆ | ಮರಿಯಮ್ಮನಹಳ್ಳಿ | ಮರಿಯಮ್ಮನಹಳ್ಳಿ ಚಿಲಕನಹಟ್ಟಿ |
| ೦೫. | ಹಗರಿಬೊಮ್ಮನಹಳ್ಳಿ | ಹಗರಿಬೊಮ್ಮನಹಳ್ಳಿ | ಹಂಪಾಸಾಗರ | ಹಂಪಸಾಗರ, ಕೋಡಿತಾಂಡ |
| ೦೬. | ಕೂಡ್ಲಿಗಿ | ಕೂಡ್ಲಿಗಿ | ಕಾನಹೊಸಪಳ್ಳಿ | ಖಾನಹೊಸಹಳ್ಳಿ, ಆಲೂರು |
| ೦೭. | ಹೂವಿನಹಡಗಲಿ | ಹೂವಿನಹಡಗಲಿ | ಸೋಗಿ | ಸೋಗಿ ಮತ್ತು ಅಡವಿ ಮಲ್ಲನಕೇರಿ |

ಪ್ರಗತಿ ಗ್ರಾಮೀಣ ಬ್ಯಾಂಕಿನ ಪ್ರಭಾವವನ್ನು ಆಯ್ಕೆಯಾದ ಸೂಚಕಗಳೊಂದಿಗೆ ಪರೀಕ್ಷಿಸಲಾಗಿದೆ. ಆಸ್ತಿಯ ರಚನೆ, ಹೂಡುವಳಿ ವೆಚ್ಚ, ವರಮಾನ, ಸಣ್ಣ ಕೈಗಾರಿಕೆ, ವ್ಯಾಪಾರ ಮತ್ತಿತರ ಅಂಶಗಳನ್ನು ಪರಿಗಣಿಸಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಸಣ್ಣ/ಅತಿಸಣ್ಣ ರೈತರ, ಕರಕುಶಲ ಕರ್ಮಿಗಳ ಸಣ್ಣ ಉದ್ದಿಮೆದಾರರ ಭೂರಹಿತ ಕಾರ್ಮಿಕರ ಸಣ್ಣ ವ್ಯಾಪಾರಿಗಳ ಮೇಲೆ ಈ ಬ್ಯಾಂಕಿನ ಪತ್ತು ಹೇಗೆ ಪ್ರಭಾವಬೀರಿದೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

### ೧. ಬಳ್ಳಾರಿ ತಾಲ್ಲೂಕು : ಬಾಣಾಪುರ ಗ್ರಾಮೀಣ ಬ್ಯಾಂಕ್ ಶಾಖೆ

ದಕ್ಷಿಣ ಭಾರತದಲ್ಲಿ ಪ್ರಪ್ರಥಮ ಗ್ರಾಮೀಣ ಬ್ಯಾಂಕಾಗಿ ಅಸ್ತಿತ್ವಕ್ಕೆ ಬಂದಂತಹ ತುಂಗಭದ್ರಾ ಗ್ರಾಮೀಣ ಬ್ಯಾಂಕ್‌ಶಾಖೆ ಬಾಣಾಪುರದಲ್ಲಿ ಅಸ್ತಿತ್ವಕ್ಕೆ ಬಂದಿತು. ಶಾಖೆಯ ವ್ಯಾಪ್ತಿಯಲ್ಲಿ ೧೨ ಗ್ರಾಮಗಳನ್ನು ಹೊಂದಿದ್ದು, ಎಲ್ಲಾ ಗ್ರಾಮಗಳು ಸಂಪೂರ್ಣವಾಗಿ ನೀರಾವರಿ ಪ್ರದೇಶಗಳನ್ನು ಒಳಗೊಂಡಿವೆ.

ಈ ಶಾಖೆಯು ಬಾಣಾಪುರ ಮತ್ತು ಸಿಂಧವಾಳ ಗ್ರಾಮಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಪತ್ತಿನ ಕಾರ್ಯನಿರ್ವಹಿಸುತ್ತಿದೆ. ಎರಡೂ ಗ್ರಾಮಗಳಿಂದ ೬೦ ಫಲಾನುಭವಿಗಳನ್ನು ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಈ ಫಲಾನುಭವಿಗಳಲ್ಲಿ ೩೬ ಸಣ್ಣ/ಅತಿಸಣ್ಣ ರೈತರು, ೨೪ ಸಣ್ಣ ಉದ್ದಿಮೆದಾರರು ಕರಕುಶಲ ಕರ್ಮಿಗಳು ೨೦ ಗ್ರಾಮೀಣ ವ್ಯಾಪಾರಿಗಳು, ೧೦ ಭೂರಹಿತ ಕೃಷಿ ಕಾರ್ಮಿಕರನ್ನು ಸಮೀಕ್ಷೆಗೆ ಒಳಪಡಿಸಲಾಯಿತು. ಅವರಲ್ಲಿ ಸಾಕ್ಷರಸ್ಥರ ಪ್ರಮಾಣ, ಉದ್ಯೋಗ, ಮನೆಗಳ ವಿಧ, ಅವಲಂಬಿಸಿರುವವರ ಸಂಖ್ಯೆ ಮುಂತಾದ ಅಂಶಗಳ ಬಗ್ಗೆ ಅವರಿಂದಲೇ ಪಡೆದ ಮಾಹಿತಿಯನ್ನು ಪಟ್ಟಿ ೧ರಲ್ಲಿ ಕಾಣಬಹುದು.

ಪಟ್ಟಿ ೧

ಸಾಮಾನ್ಯ ಮಾಹಿತಿ

| ಕ್ರಸಂ | ವರ್ಗಗಳು | ಕುಟುಂಬಗಳ ಸಂಖ್ಯೆ | ಸರಾಸರಿ ಸದಸ್ಯರು | ಸಾಕ್ಷರಸ್ಥ ಸಂಖ್ಯೆ | ದುಡಿಯುವ ಸಂಖ್ಯೆ | ಗುಡಿಸಲು ಗಳು | ಮನೆಗಳ ವಿಧಗಳು: ಮಾಳಿಗೆ ಮನೆ | ಹೆಂಚಿನ ಮನೆ | ತಗಡಿನ ಮನೆ | ಜನತಾ ಮನೆ | ಆರ್.ಸಿ.ಸಿ ಮನೆ |
|---|---|---|---|---|---|---|---|---|---|---|---|
| ೦೧ | ಸಣ್ಣ/ಅತಿಸಣ್ಣ ರೈತರು | ೩೬ | ೬ | ೪ | ೩ | ೧ | ೨೫ | .... | ... | ೦೬ | ೪ |
| ೦೨ | ಗ್ರಾಮೀಣ ಕುಶಲ/ಸಣ್ಣ ಉದ್ದಿಮೆದಾರರು | ೨೪ | ೫ | ೪ | ೩ | .... | ೨೦ | ... | ... | ೩ | ೧ |
| ೦೩. | ಸಣ್ಣ ವ್ಯಾಪಾರಿಗಳು | ೨೦ | ೬ | ೫ | ೨ | ... | ೧೦ | ೨ | ... | ೬ | ೨ |
| ೦೪. | ಭೂ ರಹಿತ ಕಾರ್ಮಿಕರು | ೧೦ | ೬ | ೩ | ೩ | ೨ | ೨ | ... | ... | ೬ | ... |
| | ಒಟ್ಟು | ೯೦ | | | | ೦೩ | ೫೭ | ೦೨ | | ೨೧ | ೭ |

ಪಟ್ಟಿ ೧ರಲ್ಲಿ ಅವಲೋಕಿಸಿದಾಗ ಭೂರಹಿತ ಕಾರ್ಮಿಕರಲ್ಲಿ ಸಾಕ್ಷರತೆ ಪ್ರಮಾಣ ಕಡಿಮೆ ಇದ್ದು, ಇತರ ವರ್ಗಗಳಲ್ಲಿ ಸಾಕ್ಷರತೆ ಪ್ರಮಾಣ ಹೆಚ್ಚಾಗಿದೆ. ೯೦ ಕುಟುಂಬಗಳಲ್ಲಿ ೦೩ ಕುಟುಂಬಗಳು ಗುಡಿಸಲುಗಳಲ್ಲಿ ೫೭ ಕುಟುಂಬಗಳು ಮಾಳಿಗೆ ಮನೆಗಳಲ್ಲಿ, ೨ ಕುಟುಂಬಗಳು ಹೆಂಚಿನ ಮನೆಗಳಲ್ಲಿ ೨೧ ಕುಟುಂಬಗಳು ಜನತಾ/ಸರ್ಕಾರ ನಿರ್ಮಿಸಿಕೊಟ್ಟಿರುವ ಮನೆಗಳಲ್ಲಿ ೭ ಕುಟುಂಬಗಳು ಆರ್.ಸಿ.ಸಿ. ಮನೆಗಳಲ್ಲಿ ವಾಸವಾಗಿದ್ದಾರೆ. ಪಟ್ಟಿಯಲ್ಲಿ ತೋರಿಸಿದಂತೆ ದುಡಿಯುವವರ ಸಂಖ್ಯೆ ೩ ವರ್ಗಗಳಲ್ಲಿ ತಲಾ ೩ ಜನರಿದ್ದು ಕೊನೆಯ ಒಂದು ವರ್ಗದಲ್ಲಿ ಇಬ್ಬರು ಮಾತ್ರ ದುಡಿಯುತ್ತಾರೆ. ಇವರು ವಾಸಿಸುವ ಮನೆಗಳನ್ನಾಧರಿಸಿ ಅವರ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳನ್ನು ಪರಿಗಣಿಸಬಹುದಾಗಿದೆ.

### ೧. ಆಸ್ತಿಗಳು

ಗ್ರಾಮೀಣ ನಿವಾಸಿಗಳು ತಮ್ಮದೇ ಆದ ಆಸ್ತಿಯನ್ನು ಹೊಂದಿರುತ್ತಾರೆ. ಕೃಷಿ ಚಟುವಟಿಕೆಗಳಿಗೆ ಬೇಕಾದ, ಕೃಷಿ ಉಪಕರಣಗಳು, ಕೃಷಿ ಅನುಭವದ ವ್ಯಕ್ತಿಗಳು, ದನಕರಗಳು ಹಾಗೆಯೇ ಮನೆಯಲ್ಲಿನ ಉಪಯುಕ್ತ ವಸ್ತುಗಳಾದ ಟಿ.ವಿ. ಸೈಕಲ್, ಮೋಟಾರು ಸೈಕಲ್, ಬಂಡಿ ಮತ್ತು ಕುರಿ, ಕೋಳಿ, ಆಡು ಇತ್ಯಾದಿಗಳನ್ನು ಹೊಂದಿರುತ್ತಾರೆ.

## ಪಟ್ಟಿ ೨

## ವಿವಿಧ ವರ್ಗಗಳ ಸರಾಸರಿ ಆಸ್ತಿಯ ಮೌಲ್ಯ

ಮೊತ್ತ ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಆಸ್ತಿಯ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿ ಸಣ್ಣ ರೈತರು | ೩೬ | ೧೦,೦೦೦ | ೫೦,೦೦೦ | ೪೦,೦೦೦ | ೪೦೦ |
| ೦೨. | ಕುಶಲ/ಗ್ರಾಮೀಣ ಉದ್ದಿಮೆದಾರರು | ೨೪ | ೮೦೦೦ | ೪೦,೦೦೦ | ೩೨,೦೦೦ | ೪೦೦ |
| ೦೩. | ಗ್ರಾಮೀಣ ವ್ಯಾಪಾರಿಗಳು | ೨೦ | ೧೦೦೦ | ೩೬,೦೦೦ | ೨೯೦೦೦ | ೪೧೪ |
| ೦೪. | ಭೂರಹಿತ ಕಾರ್ಮಿಕರು | ೧೦ | ೩೦೦೦ | ೧೫,೦೦೦ | ೧೨,೦೦೦ | ೪೦೦ |
| | | ೯೦ | ೭೦೦೦ | ೩೫೨೫೦ | ೨೮೨೫೦ | ೪೦೩ |

ಮೇಲಿನ ಪಟ್ಟಿಯಲ್ಲಿ ೯೦ ಕುಟುಂಬಗಳು ಸರಾಸರಿ ಆಸ್ತಿಯ ಮೌಲ್ಯವನ್ನು ನೋಡಬಹುದಾಗಿದೆ. ನಾಲ್ಕು ವರ್ಗಗಳಲ್ಲಿ ಭೂರಹಿತ ಕಾರ್ಮಿಕರು ಕಡಿಮೆ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಇನ್ನುಳಿದ ವರ್ಗಗಳು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಭೂ ರಹಿತ ಕಾರ್ಮಿಕರನ್ನು ಹೊರತುಪಡಿಸಿ, ಇನ್ನುಳಿದ ವರ್ಗಗಳು ಗ್ರಾಮೀಣ ಬ್ಯಾಂಕ್ ಸಾಲದ ಪೂರ್ವದಲ್ಲೇ ಅಧಿಕ ಆಸ್ತಿಯನ್ನು ಹೊಂದಿದ್ದರು. ಆದರೆ ಬ್ಯಾಂಕ್ ಸಾಲದ ನಂತರದಲ್ಲಿ ನಾಲ್ಕು ವರ್ಗಗಳಲ್ಲಿ ಆಸ್ತಿಯ ಪ್ರಮಾಣವು ಅಧಿಕವಾಗಿದೆ ಎಂಬುದನ್ನು ಗಮನಿಸಬಹುದಾಗಿದೆ. ನಾಲ್ಕು ವರ್ಗಗಳಲ್ಲಿ ಸರಾಸರಿಯಾಗಿ ನಿವ್ವಳ ಹೆಚ್ಚಳ ೨೮,೨೫೦ ರೂಪಾಯಿಗಳಿಗೆ ಅಧಿಕವಾಗಿದ್ದು, ಅದು ಪ್ರತಿಶತ ೪೦೩ರಷ್ಟಾಗಿರುವುದನ್ನು ಕಾಣಬಹುದು.

### ೨. ಭೂ ಹಿಡುವಳಿ

ಗ್ರಾಮೀಣ ನಿವಾಸಿಗಳ ಜೀವನಾಧಾರಿತ ವೃತ್ತಿಯೆಂದರೆ ಕೃಷಿ. ಈ ಪ್ರದೇಶವು ಸಂಪೂರ್ಣವಾಗಿ ನೀರಾವರಿಯಾಧಾರಿತವಾಗಿದೆ. ಭೂ ಹಿಡುವಳಿಯನ್ನು ಎರಡು ವರ್ಗಗಳಲ್ಲಿ ಇವರ ಕಾಣಬಹುದು. ಸಣ್ಣ ಮತ್ತು ಅತಿಸಣ್ಣ ರೈತರು, ಗ್ರಾಮೀಣ ವ್ಯಾಪಾರಸ್ಥರು ಗ್ರಾಮೀಣ ಬ್ಯಾಂಕಿನ ಅಸ್ತಿತ್ವದ ಪೂರ್ವದಲ್ಲಿ ಭೂ ಹಿಡುವಳಿ ೨.೨೫ ಎಕರೆ ಇದ್ದುದು ಸಾಲದ ನಂತರದಲ್ಲಿ ಸರಾಸರಿ ೪.೫. ಎಕರೆ ಪ್ರದೇಶಕ್ಕೆ ವಿಸ್ತರಿಸಿಕೊಂಡಿದ್ದಾರೆ.

ಪಟ್ಟಿ ೩

ಸರಾಸರಿ ಭೂ ಹಿಡುವಳಿಯ ಗಾತ್ರ

| ಕ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಹಿಡುವಳಿ ಸಾಲದ ಪೂರ್ವ | ಹಿಡುವಳಿ ಸಾಲದ ನಂತರ | ಹಿಡುವಳಿ ಹೆಚ್ಚಳ | ಶೇಕಡವಾರು ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೩೬ | ೨.೫ ಎಕರೆ | ೫.೦೦ ಎಕರೆ | ೨.೫ ಎಕರೆ | ೧೦೦ |
| ೦೨. | ಗ್ರಾಮೀಣ ವ್ಯಾಪಾರಸ್ಥರು | ೨೦ | ೨.೦ ಎಕರೆ | ೪.೦ ಎಕರೆ | ೨.೦ ಎಕರೆ | ೧೦೦ |
| | | ೫೬ | ೨.೨೫ ಎಕರೆ | ೪.೫ ಎಕರೆ | ೨.೨೫ ಎಕರೆ | ೧೦೦ |

ಬಾಣಾಪುರ ಪ್ರದೇಶವು ಸಂಪೂರ್ಣವಾಗಿ ನೀರಾವರಿ ಪ್ರದೇಶವಾದ್ದರಿಂದ ಕೃಷಿ ಭೂಮಿಯ ಬೆಳೆಗಳು ಅತ್ಯಧಿಕವಾಗಿವೆ. ಇಲ್ಲಿನ ಕೃಷಿಕರು ವಾರ್ಷಿಕವಾಗಿ ಎರಡು ಬೆಳೆಯನ್ನು ಬೆಳೆಯುತ್ತಿರುವುದರಿಂದ ಇವರಿಗೆ ತಮ್ಮ ವರಮಾನ ಹೆಚ್ಚಳದಿಂದಾಗಿ ತಮ್ಮ ಕೃಷಿ ಹಿಡುವಳಿ ಪ್ರದೇಶದ ವಿಸ್ತಾರವನ್ನು ಪ್ರತಿಶತ ೧೦೦ಪಟ್ಟು ಹೆಚ್ಚು ಮಾಡಿಕೊಂಡಿರುತ್ತಾರೆ. ೩೬ ಸಣ್ಣ/ಅತಿಸಣ್ಣ ರೈತರು ಮತ್ತು ೨೦ ಗ್ರಾಮೀಣ ವ್ಯಾಪಾರಸ್ಥರು ತಮ್ಮ ಕೃಷಿ ಹಿಡುವಳಿಯನ್ನು ಗ್ರಾಮೀಣ ಬ್ಯಾಂಕ್ ಸಾಲದ ನಂತರ ವಿಸ್ತರಿಸಿಕೊಂಡಿರುವುದನ್ನು ಪಟ್ಟಿ ಮೂರರಲ್ಲಿ ಗಮನಿಸಬಹುದಾಗಿದೆ.

## ೩. ಕೃಷಿ ಹೂಡುವಳಿ ವೆಚ್ಚ

ಕೃಷಿಕರ ಹೂಡುವಳಿ ವೆಚ್ಚವು ಕೃಷಿ ಭೂಮಿಯನ್ನು ಹದಮಾಡುವುದರಿಂದ, ಸುಗ್ಗಿಯ ಕಾಲದವರೆಗೆ ವಿವಿಧ ಹಂತಗಳ ವೆಚ್ಚಗಳನ್ನು ಒಳಗೊಂಡಿರುತ್ತದೆ. ಅವುಗಳನ್ನು ಪ್ರಮುಖವಾಗಿ ೩ ಹಂತಗಳಲ್ಲಿ . ಕಾಣಬಹುದು.

೧. ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳ ಮೇಲಿನ ವೆಚ್ಚ

೨. ಕೃಷಿ ಕಾರ್ಮಿಕರ ಕೂಲಿ, ಜಾನುವಾರುಗಳ ನಿರ್ವಹಣಾ ವೆಚ್ಚ

೩. ಧಾನ್ಯಗಳನ್ನು ಕಟಾವು, ಸಾಗಣೆ, ಒಕ್ಕವುದು, ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳು

ಬಾಣಾಪುರ ವ್ಯಾಪ್ತಿಯಲ್ಲಿ ೫೬ ಕೃಷಿ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಕಡಿಮೆ ಪ್ರಮಾಣದಲ್ಲಿ ಪಿ.ಜಿ.ಬ್ಯಾಂಕ್ ಸಾಲದ ಪೂರ್ವದಲ್ಲಿ ಉಪಯೋಗಿಸುತ್ತಿದ್ದರು. ಆದರೆ ಬ್ಯಾಂಕಿನಿಂದ ಸಾಲ ಪಡೆದ ನಂತರದಲ್ಲಿ ಬ್ಯಾಂಕ್ ಅಧಿಕಾರಿಗಳ ಮಾರ್ಗದರ್ಶನದಂತೆ ಅಧಿಕ ಇಳುವರಿ ಕೊಡುವ ಭತ್ತ ಮತ್ತು ಕಬ್ಬಿನ ತಳಿಗಳನ್ನು ಹಾಗೂ ಆಧುನಿಕ ರಸಾಯನಿಕ ಗೊಬ್ಬರ ಹಾಗೂ ಕ್ರಿಮಿನಾಶಕಗಳನ್ನು ಬಳಸಲಾರಂಭಿಸಿದರು. ಇದರಿಂದಾಗಿ ಬೀಜ, ಗೊಬ್ಬರ ಹಾಗೂ ಕ್ರಿಮಿನಾಶಕಗಳ ವೆಚ್ಚದ ಪ್ರಮಾಣವು ಅಧಿಕವಾಯಿತು. ಎರಡನೆ ಹಂತದಲ್ಲಿ ಭತ್ತವನ್ನು

ನಾಟಿಮಾಡಿದ ೨೦ ರಿಂದ ೪೦ ದಿನಗಳ ಒಳಗಾಗಿ ಅದರಲ್ಲಿನ ಕಳೆಯನ್ನು ನಾಶಪಡಿಸಲು ಕೃಷಿ ಕಾರ್ಮಿಕರನ್ನು ದಿನಗೂಲಿಯಾಧಾರಿದ ಮೇಲೆ ಕೆಲಸಕ್ಕೆ ತೊಡಗಿಸಿಕೊಳ್ಳುತ್ತಾರೆ. ಕೂಲಿಯ ಪ್ರಮಾಣವು ದಿನಕ್ಕೆ ೧೦೦ ರಿಂದ ೧೪೦ ರೂಪಾಯಿಗಳಾಗಿವೆ. ಈ ಮೊದಲು ಕೂಲಿಯ ಪ್ರಮಾಣವು ಕಡಿಮೆ ಇದ್ದು ಇತ್ತೀಚಿನ ದಿನಗಳಲ್ಲಿ ಕೂಲಿಯು ಅಧಿಕವಾಗಿದೆ. ಏಕೆಂದರೆ ಈ ಭಾಗದಲ್ಲಿ ಕೂಲಿ ಕಾರ್ಮಿಕರ ಬೇಡಿಕೆಯು ಅತ್ಯಧಿಕವಾಗಿರುವುದರಿಂದ ಕೂಲಿಯು ಅಧಿಕವಾಗಿದೆ ಎನ್ನಬಹುದು.

ಸದರಿ ೫೬ ಕುಟುಂಬಗಳಲ್ಲಿ ಸ್ವಂತ ಎತ್ತುಗಳನ್ನು ಕೇವಲ ೩೦ ಕುಟುಂಬಗಳು ಹೊಂದಿರುತ್ತವೆ. ಇನ್ನುಳಿದ ೨೬ ಕುಟುಂಬಗಳು ಟ್ರಾಕ್ಟರ್ ಸಹಾಯದಿಂದ ಭೂಮಿಯನ್ನು ಹದಗೊಳಿಸಿಕೊಳ್ಳುತ್ತಾರೆ. ೩೦ ಕುಟುಂಬಗಳು ತಮ್ಮ ಎತ್ತುಗಳ ನಿರ್ವಹಣೆಗೆ ಹಣವನ್ನು ವೆಚ್ಚಮಾಡಿಕೊಳ್ಳಬೇಕಾಗುತ್ತದೆ. ಹಾಗೆಯೇ ಇನ್ನುಳಿದ ಕುಟುಂಬಗಳು ಆಧುನಿಕ ರೀತಿಯ ಯಂತ್ರೋಪಕರಣಗಳ ಉಪಯೋಗಕ್ಕಾಗಿ ಬಾಡಿಗೆಯನ್ನು ನೀಡಬೇಕಾಗುತ್ತದೆ. ಇಲ್ಲಿ ಕೃಷಿಯನ್ನು ನಿರ್ವಹಣೆ ಮಾಡಲು ಎತ್ತುಗಳು ಮತ್ತು ಟ್ರಾಕ್ಟರ್ ಸಹಾಯವನ್ನು ಪಡೆಯುತ್ತಾರೆ. ಎತ್ತುಗಳನ್ನು ಹೊಂದಿದವರು ಅವುಗಳ ನಿರ್ವಹಣೆಗೆ ಹಣವನ್ನು ವೆಚ್ಚಮಾಡುತ್ತಾರೆ. ಟ್ರಾಕ್ಟರ್ ಸಹಾಯದಿಂದ ಭೂಮಿಯನ್ನು ಉಳುಮೆಮಾಡಿಸಿದವರು ಬಾಡಿಗೆಯನ್ನು ನೀಡಬೇಕಾಗುತ್ತದೆ. ಇವೆರಡರ ವೆಚ್ಚವು ಪ್ರತಿಎಕರೆಗೆ ೧೫೦೦ರೂ ನಿಂದ ೨೫೦೦ರೂ. ಹಾಗೆಯೇ ಜಾನುವಾರಗಳ ನಿರ್ವಹಣೆಗೆ ಮೇವು, ಶೇಂಗಾ, ಭತ್ತದ, ಹತ್ತಿಕಾಳು ಹಿಂಡಿ ಮುಂತಾದವುಗಳ ವೆಚ್ಚಕ್ಕೆ ಒಳಗಾಗುತ್ತಾರೆ. ಇವುಗಳ ಬೆಲೆಗಳು ಅಧಿಕವಾಗಿರುವುದರಿಂದ ಅವುಗಳ ನಿರ್ವಹಣಾ ವೆಚ್ಚವು ಹೆಚ್ಚಾಗಿರುವುದನ್ನು ಕಾಣಬಹುದು.

ಮೂರನೆ ಹಂತದಲ್ಲಿ ಭತ್ತನಾಟಿ ಮಾಡಿದ ನಾಲ್ಕು ತಿಂಗಳಿಗೆ, ಕಬ್ಬುನಾಟಿ ಮಾಡಿದ ೧೨ ತಿಂಗಳಿಗೆ ಕೊಯ್ಯುವ ಹಂತಕ್ಕೆ ಬರುತ್ತದೆ. ಈ ಸಂದರ್ಭದಲ್ಲಿ ಕೂಲಿ ಕಾರ್ಮಿಕರ ಅಭಾವದಿಂದಾಗಿ ಬೆಳೆಯನ್ನು ಆಧುನಿಕ ಯಂತ್ರಗಳ ಸಹಾಯದಿಂದ ಕಟಾವು ಮಾಡಿಸುತ್ತಾರೆ. ಆದರೆ ಕಬ್ಬನ್ನು ಕಟಾವು ಮಾಡಲಿಕ್ಕೆ ಕೃಷಿ ಕಾರ್ಮಿಕರೇ ಬೇಕಾಗುತ್ತದೆ. ಇಂದು ಭತ್ತವನ್ನು ಯಂತ್ರಗಳ ಮೂಲಕ ಕಟಾವು ಮಾಡಿಸಲು ಪ್ರತಿ ಎಕರೆಗೆ ೧೮೦೦ರೂಗಳಿಂದ ೨೦೦೦ರೂಗಳವರೆಗೆ ಹಣವನ್ನು ನೀಡಬೇಕಾಗುತ್ತದೆ. ಬೆಳೆದ ಧಾನ್ಯವನ್ನು ಮಾರುಕಟ್ಟೆಗೆ ಸಾಗಿಸುವವರೆಗೂ ಹಾಗೂ ಇನ್ನಿತರ ವೆಚ್ಚಗಳಿಗೆ ಕೃಷಿಕರು ಒಳಗಾಗಬೇಕಾಗುತ್ತದೆ.

ಒಂದು ರೀತಿಯಲ್ಲಿ ಕೃಷಿ ಚಟುವಟಿಕೆಗಳಲ್ಲಿ ಇಲ್ಲಿನ ೩೬ ಕುಟುಂಬಗಳು ಪೂರ್ಣಪ್ರಮಾಣದಲ್ಲಿ ತೊಡಗಿಸಿಕೊಂಡರೆ ೨೪ ಕುಟುಂಬಗಳು ತಮ್ಮ ವ್ಯಾಪಾರದ ಜೊತೆಗೆ ಕೃಷಿಯಲ್ಲಿ ಭಾಗಶಃವಾಗಿ ತೊಡಗಿಸಿಕೊಂಡಿದ್ದಾರೆ. ೫೬ ಕುಟುಂಬಗಳ ಮೂರು ಹಂತದ ಸರಾಸರಿ ವೆಚ್ಚವು ಪಿ.ಜಿ. ಬ್ಯಾಂಕಿನ ಸಾಲದ ಪೂರ್ವದಲ್ಲಿ ಸರಾಸರಿಯಾಗಿ ೮೫೦೦ ರೂಪಾಯಿಗಳಾಗಿದ್ದು, ಸಾಲದನಂತರದಲ್ಲಿ ಅವರ ವೆಚ್ಚದ ಪ್ರಮಾಣವು ೪೬೦೦೦ರೂಪಾಯಿಗಳಷ್ಟು ಅಧಿಕವಾಗಿದೆ. ನಿವ್ವಳ ವೆಚ್ಚದ ಹೆಚ್ಚಳವು ೩೭೫೦೦ ರೂಪಾಯಿಗಳಾಗಿದ್ದು, ಅದು ಪ್ರತಿಶತ ೪೪೧ರಷ್ಟು ಅಧಿಕವಾಗಿರುವುದನ್ನು ಪಟ್ಟಿ ೪ರಲ್ಲಿ ಕಾಣಬಹುದಾಗಿದೆ. ಬಾಣಾಪುರ ಮತ್ತು ಸಿಂಧವಾಳದ ವ್ಯಾಪ್ತಿಯಲ್ಲಿನ ಫಲಾನುಭವಿಗಳನ್ನು ಸಮೀಕ್ಷಿಸಿದಾಗ ಬೆಳೆಸಾಲವನ್ನು

ಕಿಸಾನ್ ಕ್ರೆಡಿಟ್‌ಕಾರ್ಡುಗಳ ಮೂಲಕ ಪಡೆದಿದ್ದಾರೆ. ಇವರಿಗೆ ಬ್ಯಾಂಕು ಕನಿಷ್ಠ ೨೫,೦೦೦ ಮತ್ತು ಗರಿಷ್ಠ ೧,೫೦,೦೦೦ ಲಕ್ಷ ರೂಪಾಯಿಗಳವರೆಗೂ ಬೆಳಸಾಲವನ್ನು ನೀಡಿದೆ.

**ಪಟ್ಟಿ ೪**

**ಹೂಡುವಳಿ ವೆಚ್ಚ**

ರೂಪಾಯಿಗಳಲ್ಲಿ

| ಕ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಸರಾಸರಿ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೩೬ | ೧೦,೦೦೦ | ೫೦,೦೦೦ | ೪೦,೦೦೦ | ೪೦೦ |
| ೦೨. | ಗ್ರಾಮೀಣ ವ್ಯಾಪಾರಸ್ಥರು | ೨೦ | ೭೦೦೦ | ೪೨೦೦೦ | ೩೫೦೦೦ | ೫೦೦ |
| | | ೫೬ | ೮,೫೦೦ | ೪೬,೦೦೦ | ೩೭,೫೦೦ | ೪೦೦ |

ಈ ಹಿಂದೆ ರೈತರ ಬೆಳೆ ಸಾಲಕ್ಕೆ ಪ್ರತಿಶತ ೧೧.೫ಯಿಂದ ೧೨ ಬಡ್ಡಿಯದರವಿರುತಿತ್ತು ಮತ್ತು ವಾರ್ಷಿಕವಾಗಿ ಅವರು ಪಡೆಯುವ ಮೊತ್ತಕ್ಕೆ ಅನುಗುಣವಾಗಿ ಬಡ್ಡಿಧರ ನಿರ್ಧಾರವಾಗುತ್ತಿದ್ದವು. ಆದರೆ ೨೦೦೭ರಲ್ಲಿ ಈ ಬ್ಯಾಂಕ್‌ನ ಬಡ್ಡಿಯ ಧರ ಪ್ರತಿಶತ ೭ ಮಾತ್ರ ಇದೆ. ಹಾಗಾಗಿ ಈ ಬ್ಯಾಂಕ್‌ನಿಂದ ಸಾಲ ಪಡೆಯುವರ ಸಂಖ್ಯೆ ಅಧಿಕವಾಗಿದೆ. ರೈತರಿಗೆ ಮೂರು ಹಂತದ ವೆಚ್ಚಗಳು ಹೆಚ್ಚಾಗಿರುವುದಲ್ಲದೆ, ಹೂಡುವಳಿ ವೆಚ್ಚವು ಕೂಡ ಅಧಿಕವಾಗಿರುವುದನ್ನು ಕಾಣಬಹುದು.

**೪.ಉತ್ಪಾದನೆ**

ಮುಂಗಾರು ಮತ್ತು ಹಿಂಗಾರು ಬೆಳೆಗಳ ಉತ್ಪಾದನೆಯು ವರ್ಷದ ಸಮಗ್ರ ಉತ್ಪಾದನೆಯಾಗಿರುತ್ತದೆ. (ಬ್ಯಾಂಕ್ ಸಾಲದ ಪೂರ್ವ ಮತ್ತು ನಂತರ) ಇಲ್ಲಿನ ಕುಟುಂಬಗಳು ಹೆಚ್ಚಾಗಿ ಕಬ್ಬು ಮತ್ತು ಭತ್ತವನ್ನು ಅಧಿಕ ಪ್ರಮಾಣದಲ್ಲಿ ವಾಣಿಜ್ಯ ಬೆಳೆಯಾಗಿ ಮತ್ತು ಆಹಾರಕ್ಕೋಸ್ಕರವಾಗಿ ಬೆಳೆಯುತ್ತಾರೆ.

ಕೃಷಿಕರು ಬ್ಯಾಂಕು ಅಸ್ತಿತ್ವದ ಪೂರ್ವದಲ್ಲಿ ಹೆಚ್ಚಾಗಿ ಸಾಲವನ್ನು ಮಧ್ಯವರ್ತಿಗಳಿಂದ, ಸಾಹುಕಾರರಿಂದ, ಸಹಕಾರ ಸಂಘಗಳಿಂದ, ದಲ್ಲಾಳಿಗಳಿಂದ ಮತ್ತು ಜಮೀನ್ದಾರರಿಂದ ಪಡೆಯುತ್ತಿದ್ದರು. ಆ ಸಂದರ್ಭದಲ್ಲಿ ಹಣಕಾಸಿನ ವಹಿವಾಟನ್ನು ನಿರ್ವಹಿಸುವವರು ಅವರೇ ಆಗಿದ್ದರು. ಬ್ಯಾಂಕ್ ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಇವರ ವಹಿವಾಟು ಕಡಿಮೆಯಾಗಿದೆ. ಈ ಮೊದಲು ಕೃಷಿಕರು ಸಂಪ್ರದಾಯ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿದ್ದರು. ಬ್ಯಾಂಕ್ ಸಾಲದ ನಂತರದಲ್ಲಿ ಆಧುನಿಕ ಕೃಷಿ ಪದ್ಧತಿಯನ್ನು ಅಳಪಡಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದಾರೆ. ಇದರಿಂದಾಗಿ ಎಕರೆವಾರು ಉತ್ಪಾದನೆ ೩೫ ಚೀಲದಿಂದ ೪೦ ಚೀಲಗಳವರೆಗೆ ಭತ್ತವನ್ನು ಬೆಳೆಯುತ್ತಾರೆ. ಕಬ್ಬು ಎಕರೆಗೆ ೬೦ ರಿಂದ ೭೦ ಟನ್ನು ಬೆಳೆಯುತ್ತಾರೆ. ಇದರ ಜೊತೆಗೆ

ಮುಸುಕಿನ ಜೋಳ, ಗೋಧಿ, ಸಜ್ಜೆ, ಹತ್ತಿ, ಸೂರ್ಯಕಾಂತಿ, ಮೆಣಸಿನಕಾಯಿ ಮುಂತಾದವುಗಳನ್ನು ಬೆಳೆಯುತ್ತಾರೆ. ನೀರಾವರಿ ಪ್ರದೇಶವಾಗಿದ್ದರಿಂದ ಭತ್ತವನ್ನು ವಾರ್ಷಿಕವಾಗಿ ಎರಡು ಬೆಳೆ ತೆಗೆಯುತ್ತಾರೆ. ಇವರು ತಮ್ಮ ಹೂಡುವಳಿಯಿಂದ ಹುಟ್ಟುವಳಿಯನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

ಈ ಪ್ರದೇಶದಲ್ಲಿ ಬ್ಯಾಂಕು ಆರಂಭದಿಂದ ಇಲ್ಲಿಯವರೆಗೂ ಕೃಷಿಕರ ಹೂಡುವಳಿ ಮತ್ತು ಹುಟ್ಟುವಳಿಗಳೆರಡೂ ಅಧಿಕವಾಗಿವೆ. ೩೬ ಕುಟುಂಬಗಳ ವರಮಾನವು ಇನ್ನುಳಿದ ವರ್ಗಗಳ ಕುಟುಂಬಗಳಿಗಿಂತಲೂ ಅಧಿಕವಾಗಿವೆ. ಇವರು ತಮ್ಮನ್ನು ಪೂರ್ಣಪ್ರಮಾಣದಲ್ಲಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. ಆದರೆ ವ್ಯಾಪಾರಸ್ಥರಿಗೆ ತಮ್ಮ ವ್ಯವಹಾರವು ಮುಖ್ಯವಾಗಿರುವುದರಿಂದ ಕೃಷಿ ಚಟುವಟಿಕೆಗಳ ಗಮನ ಕಡಿಮೆಯಾಗಿವೆ. ಈ ವರ್ಗಗಳು ತಾವು ಬೆಳೆದ ಪದಾರ್ಥಗಳನ್ನು ವಿವಿಧ ಮಾರುಕಟ್ಟೆಗಳಲ್ಲಿ ವಿವಿಧ ಬೆಲೆಗಳಿಗೆ ಮಾರಾಟ ಮಾಡಿರುತ್ತಾರೆ. ಆ ಮೂಲಕ ತಮ್ಮ ವರಮಾನ ಹೆಚ್ಚಿಸಿಕೊಳ್ಳಲಿಕ್ಕೆ ಪ್ರಯತ್ನಿಸಿದ್ದಾರೆ.

ಪಟ್ಟಿ ೫

ಉತ್ಪಾದನೆ

| ಕ್ರಸಂ. | ವರ್ಗಗಳು | ಕುಟುಂಬಗಳ | ಟಿಜಿಬಿ ಸಾಲದ ಪೂರ್ವ | | ಟಿಜಿಬಿ ಸಾಲದ ನಂತರ | | ನಿವ್ವಳ ಹೆಚ್ಚುವರಿ | |
|---|---|---|---|---|---|---|---|---|
| | | ಸಂಖ್ಯೆ | ಪ್ರಮಾಣ ಕ್ವಿಂ | ಮೌಲ್ಯ ರೂ | ಪ್ರಮಾಣ ಕ್ವಿಂ | ಮೌಲ್ಯದಲ್ಲಿ ರೂ | ಪ್ರಮಾಣ ಕ್ವಿಂ | ಮೌಲ್ಯದಲ್ಲಿ ರೂ |
| ೦೧ | ಸಣ್ಣ/ಅತಿಸಣ್ಣ ರೈತರು | ೩೬ | ೫೦ | ೧೫೦೦೦ | ೨೦೦ | ೧೬೦೦೦೦ | ೧೫೦ (೩೦೦) | ೧೨೦೦೦೦ (೮೫೭) |
| ೦೨ | ಗ್ರಾಮೀಣ ವ್ಯಾಪಾರಸ್ಥರು | ೨೦ | ೪೫ | ೧೭೬೦೦ | ೧೫೦ | ೧೨೦೦೦೦ | ೧೦೫ (೩೩೩) | ೮೫೦೦೦ (೬೬೬) |
| | | ೫೬ | ೪೭.೫ | ೧೩೩೦೦ | ೧೭೫ | ೧೫೦೦೦೦ | ೧೨೭.೫ (೨೬೮) | ೧೦೨೦೦೦ (೭೬೭) |

೫೬ ಕುಟುಂಬಗಳ ಉತ್ಪಾದನೆಯು ಸಾಲದ ಪೂರ್ವದಲ್ಲಿ ೪೭.೫ ಕ್ವಿಂಟಲ್‌ನಷ್ಟಿದ್ದರೆ, ೨೦೦೭ರಲ್ಲಿ ಬ್ಯಾಂಕ್ ಸಾಲದ ನಂತರದಲ್ಲಿ ೧೭೫ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ. ನಿವ್ವಳ ಉತ್ಪಾದನೆಯ ಮೌಲ್ಯವು ೧೩,೩೦೦ರೂಗಳಿಂದ ೧,೪೦,೦೦ ರೂಪಾಯಿಗಳಿಗೆ ಅಧಿಕವಾಗಿದೆ. ಅದರ ನಿವ್ವಳ ಮೌಲ್ಯವು ೧೦೨೦೦೦ರೂಗಳಾಗಿದ್ದು ಪ್ರತಿಶತ ಮೌಲ್ಯವು ೭೬೭ರಷ್ಟು ಅಧಿಕವಾಗಿದೆ. ಸಣ್ಣ/ಅತಿಸಣ್ಣ ರೈತರ ಹುಟ್ಟುವಳಿಯು ೫೦ ಕ್ವಿಂಟಾಲ್‌ನಿಂದ ೨೦೦ ಕ್ವಿಂಟಾಲ್‌ನವರೆಗೂ ಹಾಗೆಯೇ ಗ್ರಾಮೀಣ ವ್ಯಾಪಾರಸ್ಥರ ಹುಟ್ಟುವಳಿಯು ೪೫ ಕ್ವಿಂಟಾಲ್‌ನಿಂದ ೧೫೦ ಕ್ವಿಂಟಾಲ್‌ನವರೆಗೂ ಅಧಿಕವಾಗಿದೆ ಎಂಬುದನ್ನು ಪಟ್ಟಿ

೫ರಲ್ಲಿ ಕಾಣಬಹುದು. ಭತ್ತ, ಮೆಣಸಿನಕಾಯಿ, ಗೋಧಿ ಇವುಗಳ ಉತ್ಪಾದನೆಯಲ್ಲಿ ತಮ್ಮ ಉಪಯೋಗಕ್ಕೆ ಬೇಕಾದಷ್ಟು ಪದಾರ್ಥಗಳನ್ನು ಇಟ್ಟುಕೊಂಡು ಉಳಿದುದನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಾರೆ.

ಕೃಷಿ ಹೂಡುವಳಿ ಮತ್ತು ಹುಟ್ಟುವಳಿಗಳೆರಡೂ ಬ್ಯಾಂಕ್ ಸಾಲದ ನಂತರದಲ್ಲಿ ಅಧಿಕವಾಗಿದೆ. ಕೃಷಿ ಹುಟ್ಟುವಳಿ ಮೌಲ್ಯ ೧೩,೩೦೦ರೂಗಳಿಂದ ೧,೪೦,೦೦೦ರೂಗಳಿಗೆ ಅಧಿಕವಾಗಿದೆ. ಹಾಗೆಯೇ ಹೂಡುವಳಿ ಕೂಡ ೮೫೦೦ರೂಗಳಿಂದ ೪೬,೦೦೦ರೂಗಳಿಗೆ ಏರಿದೆ. ವರಮಾನದ ಮೌಲ್ಯ ಪ್ರತಿಶತ ೭೬೭ರಷ್ಟು ಅಧಿಕವಾದರೆ ಹೂಡುವಳಿಯ ಮೌಲ್ಯ ಪ್ರತಿಶತ ೪೪೧ರಷ್ಟಾಗಿದೆ. ಕಳೆದ ೩೦ ವರ್ಷಗಳಲ್ಲಿ ಹೂಡುವಳಿ /ಹುಟ್ಟುವಳಿಗಳೆರಡೂ ಅಧಿಕವಾಗಿವೆ. ಏಕೆಂದರೆ ಈ ಪ್ರದೇಶವು ಸಂಪೂರ್ಣವಾಗಿ ನೀರಾವರಿಯಾಗಿರುವುದರಿಂದ, ಹೂಡುವಳಿಗಿಂತ ಹುಟ್ಟುವಳಿಯು ಪ್ರತಿಶತ ೩೧೬ರಷ್ಟು ಅಧಿಕವಾಗಿರುವುದನ್ನು ಕಾಣಬಹುದು.

## ೫. ವಿವಿಧ ವಲಯಗಳ ವರಮಾನ

ಪ್ರಗತಿ ಗ್ರಾಮೀಣ ಬ್ಯಾಂಕು ಸಮಾಜದಲ್ಲಿನ ದುರ್ಬಲ ವರ್ಗದವರಾದ, ಸಣ್ಣ/ಅತಿಸಣ್ಣ ರೈತರು, ಭೂರಹಿತ ಕಾರ್ಮಿಕರು, ಕರಕುಶಲ ಕರ್ಮಿಗಳು ಉದ್ದಿಮೆದಾರರು ಹಾಗೂ ಗ್ರಾಮೀಣ ವ್ಯಾಪಾರಸ್ಥರ, ಆದ್ಯತಾ ವಲಯದವರ, ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡ ಇನ್ನು ಮುಂತಾದವರ ಮೇಲೆ ಹೇಗೆ ಪತ್ತಿನ ಪ್ರಭಾವ ಬೀರಿದೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಿದೆ.

೧. **ಕೃಷಿ:** ಈ ಬ್ಯಾಂಕು ಸಾಲದ ಪೂರ್ವದಲ್ಲಿ ಕೃಷಿ ಚಟುವಟಿಕೆಗಳಿಂದ ಬಂದ ವರಮಾನವು ೧೩,೩೦೦ ರೂಪಾಯಿಗಳಾಗಿದ್ದು ೨೦೦೭ನೇ ಸಾಲಿನಲ್ಲಿ ಅವರ ವರಮಾನವು ೧,೪೦,೦೦೦ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಕಾಣಬಹುದು. ನಿವ್ವಳ ೧.೦೨೦೦೦ ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದು.

೨. **ಭೂ ರಹಿತ ಕಾರ್ಮಿಕರು:** ಇವರು ಕೃಷಿ ಕಾರ್ಮಿಕರಾಗಿ ತಮ್ಮ ಜೀವನ ನಿರ್ವಹಿಸುತ್ತಾರೆ. ಭೂ ರಹಿತ ಕಾರ್ಮಿಕರಾಗಿ ಆಡು, ಕುರಿ ಇತ್ಯಾದಿಗಳನ್ನು ಸಾಕಿಕೊಂಡು, ಅವುಗಳ ಜೊತೆಯಲ್ಲಿ ಹೊಲಗಳಲ್ಲಿ ದಿನಗೂಲಿಯಾಗಿ ದುಡಿದು ತಮ್ಮ ಜೀವನ ನಿರ್ವಹಿಸುತ್ತಿದ್ದಾರೆ. ಗ್ರಾಮೀಣ ಬ್ಯಾಂಕು ಸರ್ಕಾರದ ಕಾರ್ಯಕ್ರಮಗಳನ್ನು ತನ್ನ ಉದ್ದೇಶದ ಈಡೇರಿಕೆಗಾಗಿ ಆದ್ಯತಾವಲಯದಲ್ಲಿರುವ ಇವರಿಗೆ ಬೇಕಾದ ಹಣಕಾಸಿನ ಸೌಲಭ್ಯವನ್ನು ಒದಗಿಸುವುದರ ಮೂಲಕ ಅವರ ವರಮಾನ ಸುಧಾರಿಸಲು ಯತ್ನಿಸಿದವು. ಈ ಶಾಖೆಯು ಭೂರಹಿತ ಕಾರ್ಮಿಕರಿಗೆ ೨೦,೦೦೦ರೂಗಳವರೆಗೆ ವಿದೇಶಿ ತಳಿಗಳ ಹಸು/ಎಮ್ಮೆಗಳಿಗೆ ಸಾಲವನ್ನು ವಿತರಿಸಿದೆ. ಸಹಾಯಧನವಾಗಿ ೫೦೦೦ರೂಗಳನ್ನು ನೀಡಿದೆ. ವಿದೇಶಿ ತಳಿಗಳು ಗ್ರಾಮೀಣ ತಳಿಗಿಂತ ಅಧಿಕ ಪ್ರಮಾಣದ ಹಾಲನ್ನು ನೀಡುವುದರಿಂದ ಹೆಚ್ಚುವರಿ ಹಾಲನ್ನು ಡೈರಿಗೆ ಹಾಕುತ್ತಾರೆ. ಅದರಿಂದ ವರಮಾನ ಸೃಷ್ಟಿಯಾಗುತ್ತದೆ. ಪ್ರತಿದಿನ ೮ ರಿಂದ ೧೦ ಲೀಟರ್ ಹಾಲನ್ನು ಡೈರಿಗೆ ಹಾಕುವುದರಿಂದ ಅವರಿಗೆ ಪ್ರತಿನಿತ್ಯ ೮೦ ರಿಂದ ೧೦೦ರೂವರೆಗೆ ಆದಾಯಬರುತ್ತದೆ. ತಿಂಗಳಿಗೆ ೩೦೦೦ರೂ

ವರಮಾನ ಪಡೆಯುತ್ತಾರೆ. ಈ ಎಮ್ಮೆಗಳ ನಿರ್ವಹಣೆಗೆ ಕನಿಷ್ಠ ೫೦೦ರೂಗಳನ್ನು ಖರ್ಚು ಮಾಡುತ್ತಾರೆ. ಉಳಿದ ಹಣದಲ್ಲಿ ಪ್ರತಿ ತಿಂಗಳು ಬ್ಯಾಂಕಿನ ಕಂತು ಮತ್ತು ಜೀವನ ನಿರ್ವಹಣೆಗೆ ಸುಲಭ ಸಾಧ್ಯವಾಗುತ್ತದೆ. ಇದರಿಂದಾಗಿ ನಮಗೆ ನಿರುದ್ಯೋಗದ ಭೀತಿ ಇರುವುದಿಲ್ಲ. ವಾರ್ಷಿಕವಾಗಿ ತಮ್ಮ ವರಮಾನ ಎಮ್ಮೆ ಹಸು ನಿರ್ವಹಣಾ ವೆಚ್ಚ ತೆಗೆದು ೨೪ ರಿಂದ ೩೦ ಸಾವಿರದವರೆಗೂ ವರಮಾನ ಬರುತ್ತದೆ. ಇದರಿಂದಾಗಿ ಜೀವನಮಟ್ಟ ಸುಧಾರಿಸಿದೆ ಎಂದು ಭೂ ರಹಿತ ಕಾರ್ಮಿಕರು ತಿಳಿಸಿರುವರು.

೧೦ ಭೂ.ರ.ಕಾರ್ಮಿಕರನ್ನು ಸಮೀಕ್ಷೆಗೆ ಒಳಪಡಿಸಿದಾಗ ತಮಗೆ ಬ್ಯಾಂಕು ೨೦೦೫-೦೬ರಲ್ಲಿ ೨೦,೦೦೦ರೂಗಳನ್ನು ಎಮ್ಮೆ/ಹಸುಗಳಿಗೆ ಸಾಲವನ್ನು ನೀಡಿದ್ದಾರೆ. ಅದರಲ್ಲಿ ೫೦೦೦ರೂಪಾಯಿಗಳ ಸಹಾಯಧನ ಪಡೆದಿದ್ದು ೧೫,೦೦೦ರೂಗಳನ್ನು ಮಾತ್ರ ಸಾಲ ಮರುಪಾವತಿ ಮಾಡಬೇಕು. ಸಾಲವನ್ನು ಮರುಪಾವತಿಸಿದರೆ ಮತ್ತೆ ಹೊಸ ಸಾಲ ಸಿಗುತ್ತದೆ. ಇದರಿಂದಾಗಿ ವರಮಾನ ಮತ್ತು ಜೀವನ ಮಟ್ಟ ಉತ್ತಮವಾಗಿದೆ ಎಂದು ತಿಳಿಸಿದರು.

**ಪಟ್ಟಿ ೬**

**ರೂಪಾಯಿಗಳಲ್ಲಿ**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ಹೆಚ್ಚುವರಿ ವರಮಾನ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಭೂ ರಹಿತ ಕಾರ್ಮಿಕರು | ೧೦ | ೯೦೦ | ೨೮,೦೦೦ | ೨೭,೧೦೦ | ೩೦೧೧ |

ಈ ಬ್ಯಾಂಕು ಅಸ್ತಿತ್ವದ ಪೂರ್ವದಲ್ಲಿ ಇವರ ವರಮಾನ ೯೦೦ ರೂಪಾಯಿಗಳಾಗಿದ್ದು ಸಾಲದ ನಂತರದಲ್ಲಿ ಅಂದರೆ ೨೦೦೭ರ ನಂತರದಲ್ಲಿ ಅವರ ವರಮಾನ ೨೮,೦೦೦ ರೂಪಾಗಳಿಗೂ ಅಧಿಕವಾಗಿದೆ. ನಿವ್ವಳ ಹೆಚ್ಚುವರಿ ವರಮಾನವು ೨೭,೧೦೦ ರೂಪಾಯಿಗಳಾಗಿದ್ದು ಅದರ ಪ್ರತಿಶತ ಪ್ರಮಾಣವು ೩೦೧೧ ರಷ್ಟಾಗಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ಹಸು ಎಮ್ಮೆಗಳ/ನಿರ್ವಹಣೆಯಿಂದ ಅವರ ಜೀವನಕ್ಕೆ ತೊಂದರೆಯಿಲ್ಲ. ಜೀವನ ಮಟ್ಟ ಸುಧಾರಿಸಲಿಕ್ಕೆ, ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಲಿಕ್ಕೆ ಹಾಗೂ ನಿರುದ್ಯೋಗ ನಿವಾರಣೆಗೆ ಸಹಕಾರಿಯಾಗಿದೆ ಎಂದಿದ್ದಾರೆ.

**೩. ಸಣ್ಣ ಉದ್ದಿಮೆದಾರರು/ಕರಕುಶಲ ಕರ್ಮಿಗಳು**

ಈ ಪ್ರದೇಶದಲ್ಲಿ ಅನಾದಿ ಕಾಲದಿಂದಲೂ ಸಂಪ್ರದಾಯ ಬದ್ಧವಾದ ಕೆಲವು ಗ್ರಾಮೀಣ ಗುಡಿ ಕೈಗಾರಿಕೆಗಳಿದ್ದು, ಇಂದು ಅವು ನಶಿಸುತ್ತಾ ಬಂದಿವೆ. ಇವುಗಳಲ್ಲಿ ಕೆಲವೊಂದು ಕಸಬುಗಳು ಅಸ್ತಿತ್ವವನ್ನು ಉಳಿಸಿಕೊಂಡಿವೆ. ಕಾಲಕ್ಕೆ ತಕ್ಕಂತೆ ಉದ್ದಿಮೆಗಳೂ ಬದಲಾಗಿವೆ. ಹೋಟೆಲ್, ಬೇಕರಿ, ವೆಲ್ಡಿಂಗ್ ಷಾಪು, ಸೈಕಲ್ ಷಾಪ್, ಕೇಬಲ್ ನೆಟ್‌ವರ್ಕ, ಷಾಮಿಯಾನ, ಹಿಟ್ಟಿನ ಗಿರಣಿ ಇನ್ನು ಮುಂತಾದ ಕಸಬುಗಳನ್ನು ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು. ಇವರು ತಮ್ಮ ಉತ್ಪಾದನೆಯಿಂದ ವರಮಾನವನ್ನು

ಪಡೆಯುತ್ತಿದ್ದಾರೆ. ಇವರ ವರಮಾನವು ಸಾಲದ ಪೂರ್ವದಲ್ಲಿ ೧೦೦೦ ರೂಗಳಷ್ಟು ಇತ್ತು. ಆದರೆ ಬ್ಯಾಂಕು ಅಸ್ತಿತ್ವವಾದ ನಂತರದಲ್ಲಿ ಉತ್ಪನ್ನ ಮತ್ತು ಸೇವೆಯಿಂದ ವರಮಾನವು ಅಧಿಕವಾಗಿರುವುದನ್ನು ಕಾಣಬಹುದು. ಇವರು ಬ್ಯಾಂಕಿನಿಂದ ೧೦,೦೦೦ರೂಗಳಿಂದ ೩೫,೦೦೦ರೂಗಳವರೆಗೆ ಸಾಲವನ್ನು ಪಡೆದಿದ್ದಾರೆ. ೨೪ ಸಣ್ಣ ಉದ್ದಿಮೆದಾರರನ್ನು ಭೇಟಿ ಮಾಡಿದಾಗ ಬ್ಯಾಂಕು ಸಾಲದ ಪೂರ್ವದಲ್ಲಿ ಹಣಕಾಸಿನ ನೆರವನ್ನು ಖಾಸಗಿಯವರಿಂದ ಪಡೆಯುತ್ತಿದ್ದರು. ಆದರೆ ಬ್ಯಾಂಕು ಸಾಲದ ನಂತರದಲ್ಲಿ ಖಾಸಗಿಯವರ ಹಣಕಾಸಿನ ನೆರವನ್ನು ಬಿಟ್ಟಿದ್ದೇವೆ. ಹಾಗೂ ಅವರ ಬಡ್ಡಿಯ ಧರದಿಂದ ತಪ್ಪಿಸಿಕೊಂಡಿದ್ದೇವೆ ಎನ್ನುತ್ತಾರೆ. ಬ್ಯಾಂಕು ನಮಗೆ ಸಾಲವನ್ನಷ್ಟೇ ಅಲ್ಲ, ಮಾರ್ಗದರ್ಶನವನ್ನು ಕೂಡ ಮಾಡುತ್ತದೆ ಎಂದಿದ್ದಾರೆ. ಈಗ ಸಾಲ ಪಡೆಯುವುದು ಕಷ್ಟಕರವಾಗಿಲ್ಲವೆನ್ನುವುದು ಅವರ ಅಭಿಪ್ರಾಯ.

ಗ್ರಾಮೀಣ ಬ್ಯಾಂಕಿನಿಂದ ಸಾಲ ಪಡೆದು ನಮ್ಮ ಉದ್ದಿಮೆಗಳನ್ನು ಸ್ಥಾಪಿಸಿಕೊಂಡು ನಿರ್ವಹಿಸುತ್ತಿದ್ದೇವೆ. ಸಕಾಲಕ್ಕೆ ಸಾಲ ಮರುಪಾವತಿಮಾಡಿದರೆ, ಪುನಃ ಉದ್ದಿಮೆ ವಿಸ್ತರಣೆಗೆ ಬೇಕಾದ ಹಣಕಾಸಿನ ನೆರವು ದೊರೆಯುತ್ತದೆ. ಇದರಿಂದಾಗಿ ತಮ್ಮ ವರಮಾನ ವೃದ್ಧಿಯಾಗಿದ್ದು, ತಾವುಗಳು ಬ್ಯಾಂಕಿನ ವಿಶ್ವಾಸ ಗಳಿಸಿದ್ದೇವೆ ಎನ್ನುವ ಮಾತುಗಳು ಅವರ ಮನದಾಳದಿಂದ ಬರುತ್ತವೆ.

ವಿವಿಧ ಸಣ್ಣ ಉದ್ಯಮದವರು ವಿವಿಧ ರೀತಿಯ ವಸ್ತುಗಳನ್ನು ಉತ್ಪಾದಿಸುತ್ತಾರೆ. ತಮ್ಮ ಉತ್ಪನ್ನವನ್ನು ವಿವಿಧ ಬೆಲೆಗೆ ಮಾರಾಟ ಮಾಡಿರುತ್ತಾರೆ. ಇದರಿಂದಾಗಿ ಅವರ ವರಮಾನವನ್ನು ೩೭೦೦ರೂಗಳವರೆಗೆ ವೃದ್ಧಿಸಿಕೊಂಡಿದ್ದಾರೆ ಎಂಬುದನ್ನು ಸಮೀಕ್ಷೆಯಿಂದ ಕಂಡುಕೊಳ್ಳಲಾಯಿತು.

**ಪಟ್ಟಿ ೭**

**ಗ್ರಾಮೀಣ ಉದ್ದಿಮೆದಾರರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸ್ಣ್ಣ ಉದ್ದಿಮೆ ದಾರು/ಕುಶಲ ಕರ್ಮಿಗಳು | ೨೪ | ೧೦೦೦ | ೩೭೦೦೦ | ೩೬೦೦೦ | ೩೬೦೦ |

ಈ ಮೇಲಿನ ಪಟ್ಟಿಯನ್ನು ಗಮನಿಸಿದಾಗ ಕಾಲಕ್ಕೆ ತಕ್ಕಂತೆ ಉದ್ದಿಮೆಗಳನ್ನು ರೂಢಿಸಿಕೊಂಡು ಅವರ ವರಮಾನವನ್ನು ಬ್ಯಾಂಕು ಸಾಲದೊಂದಿಗೆ ೩೭,೦೦೦ರೂಗಳವರೆಗೆ ಹೆಚ್ಚಿಸಿಕೊಂಡಿದ್ದಾರೆಂಬುದು ತಿಳಿದುಬರುತ್ತದೆ. ನಿವ್ವಳ ಹೆಚ್ಚಳ ೩೬,೦೦೦ರೂಗಳಾದರೆ ನಿವ್ವಳ ಪ್ರತಿಶತ ಹೆಚ್ಚಳ ೩೬೦೦ಪಟ್ಟು ಹೆಚ್ಚಳವಾಗಿದೆ. ಬ್ಯಾಂಕ ಸ್ಥಾಪನೆಯಿಂದ ೧೯೭೬, ೨೦೦೭ರ ಕಾಲಾವಧಿಯಲ್ಲಿ ವಾರ್ಷಿಕವಾಗಿ ೧೨೦ ಪಟ್ಟು ಪ್ರಗತಿಯಾಗಿರುವುದನ್ನು ಕಾಣಬಹುದು. ಇದರಿಂದಾಗಿ ಗ್ರಾಮೀಣ ಪ್ರದೇಶದಲ್ಲಿನ ನಿರುದ್ಯೋಗ ಪ್ರಮಾಣ ಕಡಿಮೆಯಾಗಿ ಅವರ ಜೀವನ ಮಟ್ಟ ಸುಧಾರಣೆಯಾಗಿದೆ ಎನ್ನುತ್ತಾರೆ.

## ೪. ಗ್ರಾಮೀಣ ವ್ಯಾಪಾರಿಗಳು

ಈ ಪ್ರದೇಶದಲ್ಲಿ ವ್ಯವಹಾರಗಳೆಂದರೆ ಕಿರಾಣಿ ಅಂಗಡಿ, ಹಾಲಿನ ವ್ಯಾಪಾರ, ಹೂವಿನ, ತರಕಾರಿ ವ್ಯಾಪಾರ, ಬಟ್ಟೆ ವ್ಯಾಪಾರ, ಸೀಮೆಎಣ್ಣೆ ವ್ಯಾಪಾರ ಇನ್ನು ಮುಂತಾದ ವ್ಯಾಪಾರಗಳು ನಡೆಯುತ್ತವೆ. ಇವರೆಲ್ಲರೂ ನಡೆಸುವ ವ್ಯವಹಾರಗಳು ಜನಪದರ ಜೀವನಾವಶ್ಯಕ ವಸ್ತುಗಳಿಗೆ ಸಂಬಂಧಿಸಿವೆ. ಈ ಬ್ಯಾಂಕ್ ಅಸ್ತಿತ್ವದ ಪೂರ್ವದಲ್ಲಿ ಖಾಸಗಿ ಹಣಕಾಸು ಸಂಸ್ಥೆಗಳಿಂದ ಸಾಲವನ್ನು ಪಡೆಯುತ್ತಿದ್ದರು. ಆದರೆ ಬ್ಯಾಂಕ್ ಅಸ್ತಿತ್ವದ ನಂತರದಲ್ಲಿ ಖಾಸಗಿ ಹಣಕಾಸು ಸಂಸ್ಥೆಗಳಿಂದ ಸಾಲಪಡೆಯುವುದನ್ನು ಕಡಿಮೆಮಾಡಿದ್ದಾರೆ. ಬಡ್ಡಿಯ ಧರದಲ್ಲೂ ವ್ಯತ್ಯಾಸವಿದ್ದು, ಬ್ಯಾಂಕಿನ ಬಡ್ಡಿಯ ಧರವೂ ಅತ್ಯಂತ ಕಡಿಮೆಯಿರುವುದರಿಂದ ಬ್ಯಾಂಕಿನಿಂದ ಸಾಲ ಪಡೆಯುತ್ತಿರುವವರ ಸಂಖ್ಯೆ ಅಧಿಕವಾಗಿದೆ. ಇವರು ತಮಗೆ ಬೇಕಾದ ಬಂಡವಾಳವನ್ನು ಬ್ಯಾಂಕಿನಿಂದ ಪಡೆದು ತಮ್ಮ ವ್ಯವಹಾರವನ್ನು ವೃದ್ಧಿಸಿಕೊಂಡಿದ್ದಾರೆ. ಇವರುಗಳು ಹತ್ತಿರದ ಪಟ್ಟಣದಲ್ಲಿ ಸರಕುಗಳನ್ನು ಸಗಟು ವ್ಯಾಪಾರಿಗಳ ಹತ್ತಿರ ಕೊಂಡು, ಅವುಗಳ ಬೆಲೆಯನ್ನು ಪ್ರತಿಶತ ೧೦ ರಿಂದ ೨೫ರಷ್ಟು ಅಧಿಕಗೊಳಿಸಿಕೊಂಡು ತಮ್ಮ ಗ್ರಾಮದಲ್ಲಿ ವ್ಯಾಪಾರ ನಿರ್ವಹಿಸುತ್ತಾರೆ. ಇವರು ಬ್ಯಾಂಕಿನಿಂದ ೧೦,೦೦೦ದಿಂದ ೬೦,೦೦೦ರೂಪಾಯಿಗಳವರೆಗೆ ಸಾಲ ಪಡೆದಿದ್ದಾರೆಂದು ಬ್ಯಾಂಕಿನ ಲೆಕ್ಕಪತ್ರಗಳು ತಿಳಿಸುತ್ತವೆ. ಇವರ ವರಮಾನವು ಬ್ಯಾಂಕು ಸಾಲದ ಪೂರ್ವದಲ್ಲಿ ೫೫೦೦ರೂಗಳಷ್ಟು ಇದ್ದುದು ೨೦೦೬-೦೭ರಲ್ಲಿ ವಾರ್ಷಿಕವಾಗಿ ೪೦,೦೦೦ರೂಗಳವರೆಗೆ ತಮ್ಮ ವರಮಾನವನ್ನು ವೃದ್ಧಿಸಿಕೊಂಡಿದ್ದಾರೆ. ಈ ಅಂಶವನ್ನು ಸಮೀಕ್ಷೆಯ ಮೂಲಕ ಕಂಡುಕೊಳ್ಳಲಾಗಿದೆ.

ಪಟ್ಟಿ ೮

ಗ್ರಾಮೀಣ ವ್ಯಾಪಾರಿಗಳು

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ವ್ಯಾಪಾರಿಗಳು | ೨೦ | ೫೫೦೦ | ೪೦೦೦೦ | ೩೪೫೦೦ | ೬೨೭ |

ನಿವ್ವಳ ಹೆಚ್ಚುವರಿ ೩೪,೫೦೦ ರೂಗಳಾಗಿದ್ದು ಅದನ್ನು ಪ್ರತಿಶತವಾರಿಗೆ ಪರಿವರ್ತಿಸಿದರೆ ೬೨೭ಪಟ್ಟು ಅಧಿಕವಾಗಿರುವುದನ್ನು ಕಾಣಬಹುದು. ಈ ಬ್ಯಾಂಕ್ ಸ್ಥಾಪನೆಯಿಂದ ೨೦೦೭ರ ಕಾಲಾವಧಿಯಲ್ಲಿ ವಾರ್ಷಿಕ ೨೦.೯ರಷ್ಟು ಅಧಿಕವಾಗಿದೆ. ಹಾಗಾಗಿ ಇವರು ಜೀವನ ಮಟ್ಟ ವೃದ್ಧಿಸಿಕೊಂಡು ಗ್ರಾಮೀಣ ನಿರುದ್ಯೋಗದಿಂದ ಪಾರಾಗಿದ್ದೇವೆ. ಸ್ವಂತ ಉದ್ಯೋಗ ಕೈಗೊಂಡು ಉತ್ತಮ ಜೀವನ ನಿರ್ವಹಿಸುತ್ತೇವೆ ಎನ್ನುತ್ತಾರೆ. ಒಟ್ಟಾರೆಯಾಗಿ ನಾಲ್ಕು ವರ್ಗಗಳಲ್ಲಿ ಬ್ಯಾಂಕ್ ಸಾಲದ ನಂತರ ವರಮಾನವನ್ನು ಹೆಚ್ಚಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ ಎನ್ನಬಹುದು.

### ೬. ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲ

ಈ ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿ ಬಹುದೀರ್ಘಕಾಲಾವಧಿಯಿಂದ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾ ಬಂದಿವೆ. ಸಾಹುಕಾರರು, ಸ್ನೇಹಿತರು, ಜಮೀನ್ದಾರರು, ಮಧ್ಯವರ್ತಿಗಳು, ಬಂಧುಗಳು ಇನ್ನು ಮುಂತಾದವರಿಂದ ಗ್ರಾಮೀಣ ಜನಪದರು ತಮಗೆ ಬೇಕಾದ ಹಣಕಾಸಿನ ನೆರವನ್ನು ಪಡೆದಿದ್ದಾರೆ. ಆದರೆ ಇವರ ವ್ಯವಹಾರವು ಇಂದು ಕಡಿಮೆಯಾಗಿದೆ. ಗ್ರಾಮೀಣ ಬ್ಯಾಂಕು ಇಂದು ಅವರ ಸ್ಥಾನವನ್ನು ತುಂಬಲು ಪ್ರಯತ್ನಿಸಿದೆ. ಇಂದಿಗೂ ಕೂಡ ಹಲವಾರು ಕುಟುಂಬಗಳು ಇವರಿಂದ ಹಣಕಾಸಿನ ಸಹಾಯ ಪಡೆಯುವುದುಂಟು. ಆದರೆ ಈ ಮೊದಲಿದ್ದ ಪ್ರಭಾವವು ಇಂದು ಇಲ್ಲವೆಂದು ಹೇಳಬಹುದು.

**ಪಟ್ಟಿ ೯**

**ಸಾಂಸ್ಥಿಕೇತರ ಹಣಕಾಸಿನ ಮೂಲಗಳು**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | A | B | C | D | A | B | C | D | A | B | C | D |
| ೦೧. | ಸಣ್ಣ ಅತಿಸಣ್ಣ ರೈತರು | ೩೬ | ೩೦ | ೬ | .. | .. | ೨ | ೧ | .. | .. | ೨ | ೧ | .. | .. |
| ೦೨. | ಗ್ರಾಮೀಣಉದ್ದಿಮೆ | ೨೪ | ೧೫ | ೫ | ೨ | ೨ | ೧ | ೧ | .. | .. | ೧ | ೧ | .. | .. |
| ೦೩. | ಗ್ರಾ.ವ್ಯಾ. | ೨೦ | ೧೬ | ೩ | ೧ | .. | ೧ | .. | .. | .. | .. | ೧ | .. | .. |
| ೦೪. | ಭೂ ಕಾರ್ಮಿಕ | ೧೦ | ೭ | ೩ | .. | .. | .. | ೧ | .. | .. | .. | ೧ | .. | .. |

A ಲೇವಾದೇವಿಗಾರರು **B** ವ್ಯಾಪಾರಸ್ಥರು **C** ಸ್ನೇಹಿತರು/ಬಂಧುಗಳು **D** ಇತರೆ ... ಚಿನ್ಹೆಯು ಇವರ ವಹಿವಾಟು ಕಡಿಮೆಯಾಗಿರುವುದನ್ನು ಕಾಣಬಹುದು.

### ೭. ಹಣಕಾಸಿನ ಸಂಸ್ಥೆಗಳಿಂದ ಸಾಲ

ಈ ಪ್ರದೇಶದಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳಾದ ಪ್ರಾಥಮಿಕ ಸಹಕಾರ ಸಂಘಗಳು ವಾಣಿಜ್ಯ ಬ್ಯಾಂಕುಗಳು, ಭೂ ಅಭಿವೃದ್ಧಿ ಬ್ಯಾಂಕುಗಳಿಂದ ಸಾಲ ಪಡೆಯುತ್ತಿದ್ದರು. ಈ ಮೇಲಿನ ಹಣಕಾಸು ಸಂಸ್ಥೆಗಳಿಂದ ದುರ್ಬಲ ವರ್ಗದ ಜನಪದರು, ಭೂರಹಿತ ಕಾರ್ಮಿಕರು ಸಾಲ ಪಡೆಯಲು ವಿಫಲರಾದಾಗ ಗ್ರಾಮೀಣ ಪ್ರದೇಶಗಳ ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸಲು ಗ್ರಾಮೀಣ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದವು. ಇದರಿಂದಾಗಿ ಸಮಾಜದಲ್ಲಿನ ದುರ್ಬಲವರ್ಗದವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಇನ್ನು ಮುಂತಾದ ವರ್ಗಗಳು ಗ್ರಾಮೀಣ ಬ್ಯಾಂಕುಗಳಿಂದ ಸಾಲ ಪಡೆದು ಸಾಂಸ್ಥಿಕೇತರ ಸಂಸ್ಥೆಗಳ ಹಿಡಿತದಿಂದ ಬಿಡುಗಡೆ ಪಡೆದಿದ್ದಾರೆ. ಬ್ಯಾಂಕಿನ ಬಡ್ಡಿಯ ಧರವು ಕಡಿಮೆ ಇರುವುದರಿಂದ ಗ್ರಾಮೀಣ ಜನಪದರು ಈ ಬ್ಯಾಂಕ್‌ನಿಂದ ಸಾಲ ಪಡೆಯುವುದು ಅಧಿಕವಾಯಿತು ಎನ್ನಬಹುದು.

ಪಟ್ಟಿ ೧೦

ಸಾಂಸ್ಥಿಕ ಹಣಕಾಸಿನ ಮೂಲಗಳು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಓಜಿಬಿ ಸಾಲದ ಪೂರ್ವ | | | | ಓಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | E | F | G | H | E | F | G | H | E | F | G | H |
| ೦೧. | ಸಣ್ಣ/ಅತಿಸಣ್ಣ ರೈತರು | ೩೬ | ೧೫ | .. | .. | ೪ | .. | .. | .. | ೩೬ | .. | .. | .. | ೩೬ |
| ೦೨. | ಗ್ರಾ.ಮಿ.ಉದ್ಯಮ | ೨೪ | .. | ೩ | .. | .. | .. | .. | .. | ೨೪ | .. | .. | .. | ೨೪ |
| ೦೩. | ಗ್ರಾ.ವ್ಯಾ. | ೨೦ | .. | .. | .. | .. | .. | .. | .. | ೨೦ | .. | .. | .. | ೨೦ |
| ೦೪. | ಭೂ.ರ.ಕ | ೧೦ | .. | .. | .. | .. | .. | .. | .. | ೧೦ | .. | .. | .. | ೧೦ |

E ಪ್ರಾ.ಸಹಕಾರ ಸಂಘಗಳು F ವಾಣಿಜ್ಯ ಬ್ಯಾಂಕುಗಳು G ರೈತರ ಸೇವಾ ಸೊಸೈಟಿ H ಪ್ರಾ.ಗ್ರಾ.ಬ್ಯಾಂಕುಗಳು.

### ೮. ಗ್ರಾಮೀಣ ಬ್ಯಾಂಕ್ ಬಗ್ಗೆ ತಿಳುವಳಿಕೆ

ಈ ಬ್ಯಾಂಕ್ ಬಗ್ಗೆ ಸಮೀಕ್ಷಿಸಿದ ೯೦ ಕುಟುಂಬಗಳಲ್ಲಿ ೪೮ ಕುಟುಂಬಗಳು ಬ್ಯಾಂಕ್ ಸಿಬ್ಬಂದಿಯ ಮೂಲಕ ೧೫ ಕುಟುಂಬಗಳು ಗ್ರಾಮಸಭೆಯ ಮೂಲಕ ೧೦ ಕುಟುಂಬಗಳು ಗ್ರಾಮದ ಮುಖಂಡರುಗಳ ಮೂಲಕ ೮ ಕುಟುಂಬಗಳು ಸ್ವಂತ ತಿಳುವಳಿಕೆಯಿಂದ ೯ ಕುಟುಂಬಗಳು ಸ್ನೇಹಿತರುಗಳ ಮೂಲಕ ಈ ಬ್ಯಾಂಕಿನ ಬಗ್ಗೆ ಮಾಹಿತಿಯನ್ನು ಪಡೆದುಕೊಂಡಿದ್ದಾರೆ. ಇದು ಪ್ರತಿಶತ ೫೩.೩, ೧೬, ೧೧,೦೮,೧೦ರಷ್ಟು ಅನುಕ್ರಮವಾಗಿವೆ. ಗ್ರಾಮೀಣ ಬ್ಯಾಂಕ್ ಸಿಬ್ಬಂದಿಯು ಗರಿಷ್ಠ ಪ್ರಮಾಣದಲ್ಲಿ ಜನಪದರಿಗೆ ಬ್ಯಾಂಕ್ ಉಪಯೋಗದ ಬಗ್ಗೆ ಮಾಹಿತಿಯನ್ನು ಒದಗಿಸಿ ಕೊಡಲು ಯಶಸ್ವಿಯಾಗಿದ್ದಾರೆ ಎಂಬುದನ್ನು ಪಟ್ಟಿ ೯ರ ಮೂಲಕ ಕಾಣಬಹುದು.

### ೯. ಗ್ರಾಮೀಣ ಬ್ಯಾಂಕ್ ಬಗ್ಗೆ ಜನಪದರ ಅಭಿಪ್ರಾಯಗಳು

ಸಮೀಕ್ಷಿಸಿದ ೯೦ ಕುಟುಂಬಗಳು ಬ್ಯಾಂಕ್ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದರಲ್ಲಿ ೭೫ ಕುಟುಂಬಗಳು ಪೂರ್ಣಪ್ರಮಾಣದ ತೃಪ್ತಿ ವ್ಯಕ್ತಪಡಿಸಿದ್ದಾರೆ. ಅದು ಪ್ರತಿಶತ ೮೩ರಷ್ಟಾಗುತ್ತದೆ. ಇನ್ನುಳಿದ ೧೫ ಕುಟುಂಬಗಳು ಬೇರೆ ಬೇರೆ ರೀತಿಯ ಕಾರಣಗಳನ್ನು ನೀಡಿದ್ದಾರೆ. ಏಕೆಂದರೆ ಈ ಕುಟುಂಬಗಳು, ಪ್ರಾರಂಭದಲ್ಲಿ ದಾಖಲೆಗಳನ್ನು ಜೋಡಿಸುವುದು, ವಿಳಂಬಮಾಡುವುದರ ಬಗ್ಗೆ ಅತೃಪ್ತಿವ್ಯಕ್ತಪಡಿಸಿದ್ದಾರೆ. ಎಲ್ಲಾ ಕುಟುಂಬಗಳು ಬ್ಯಾಂಕು ಮುಂದುವರಿಸುವ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ.

ಪಟ್ಟಿ ೧೧

ಈ ಬ್ಯಾಂಕ್ ಬಗ್ಗೆ ಜ್ಞಾನ ಪಡೆದವರು ಮತ್ತು ಅದರ ಬಗೆಗಿನ ಅಭಿಪ್ರಾಯ

| ಕ್ರ. ಸಂಖ್ಯೆ | ವರ್ಗಗಳು | ಕುಟುಂಬ ಸಂಖ್ಯೆ | ಗ್ರಾಮದ ಮುಖಂಡರಿಂದ | ಸ್ನೇಹಿತರು | ಸ್ವಂತ | ಬ್ಯಾಂಕ್ ಸಿಬ್ಬಂಧಿ | ಗ್ರಾಮ ಸಭಾ | ಬಂಧು ಗಳಿಂದ | ಬ್ಯಾ.ತೃಪ್ತಿ | | ಸಾ.ಪ. ತೊಂದರೆಗಳು | | ಅಧಿಕಾರಿಗಳ ಬಗ್ಗೆ ತೃಪ್ತಿ | | ಬ್ಯಾಂಕ್ ಮುಂದುವರೆಸುವ ಬಗ್ಗೆ | |
|---|---|---|---|---|---|---|---|---|---|---|---|---|---|---|---|---|
| | | | | | | | | | ಹೌದು | ಇಲ್ಲ | ಹೌದು | ಇಲ್ಲ | ಹೌದು | ಇಲ್ಲ | ಬೇಕು | ಬೇಡ |
| ೦೧. | ಸಣ್ಣ/ಅತಿಸಣ್ಣ ರೈತರು | ೩೬ | ೨ | ೨ | ೩ | ೨೫ | ೪ | .. | ೩೩ | ೩ | ೩ | ೩೩ | ೩೩ | ೩ | ೩೬ | .. |
| ೦೨. | ಕುಶಲ/ಗ್ರಾಮೀಣ ಉದ್ಯಮದಾರರು | ೨೪ | .. | ೧ | ೩ | ೧೫ | ೫ | .. | ೧೬ | ೮ | ೮ | ೧೬ | ೧೬ | ೮ | ೨೪ | .. |
| ೦೩. | ಭೂರಹಿತ | ೧೦ | ೨ | .. | .. | ೩ | ೫ | .. | ೮ | ೨ | ೨ | ೮ | ೮ | ೨ | ೧೦ | .. |
| ೦೪. | ಗ್ರಾಮೀಣ ವ್ಯಾಪಾರಸ್ಥರು | ೨೦ | ೬ | ೬ | ೨ | ೫ | ೧ | .. | ೧೮ | ೨ | ೨ | ೧೮ | ೧೮ | ೨ | ೨೦ | .. |
| | | ೯೦ | ೧೦ | ೦೯ | ೦೮ | ೪೮ | ೧೫ | .. | ೭೫ | ೧೫ | ೧೫ | ೭೫ | ೭೫ | ೧೫ | ೯೦ | .. |

## ಬಾಣಾಪುರ ಪ್ರಗತಿ ಗ್ರಾಮೀಣ ಬ್ಯಾಂಕ್ ಸ್ಥಿತಿ

೨೦೦೭ರ ಜೂನ್‌ರ ಹೊತ್ತಿಗೆ ಈ ಬ್ಯಾಂಕಿನ ವ್ಯವಹಾರವು ೨೧ ಕೋಟಿ ರೂಪಾಯಿಗಳಾಗಿದೆ. ಬ್ಯಾಂಕು ೮೭೮೬ ಖಾತೆಗಳಿಂದ ಕಾರ್ಯನಿರ್ವಹಿಸುತ್ತಿದೆ. ಈ ಶಾಖೆಯು ನೀರಾವರಿ ಭಾಗದಲ್ಲಿ ಕಾರ್ಯನಿರ್ವಹಿಸುವುದರಿಂದ ವಾರ್ಷಿಕವಾಗಿ ರೈತರು ಎರಡು ಹಂತದ ಬೆಳೆಗಳನ್ನು ಬೆಳೆಯುತ್ತಾರೆ. ಇದರಿಂದಾಗಿ ವಾರ್ಷಿಕವಾಗಿ ೨ ಬೆಳೆ ಸಾಲವನ್ನು ಪಡೆಯುತ್ತಾರೆ. ಕೆಲವು ಸಂದರ್ಭಗಳಲ್ಲಿ ರೈತರ ಬೆಳೆಗಳಿಗೆ ಉತ್ತಮ ಬೆಲೆ ಸಿಗದಿದ್ದಾಗ, ಅಂತಹ ರೈತರ ಬೆಳೆಗಳನ್ನು ಬ್ಯಾಂಕ್ ಅಡಮಾನವಾಗಿಟ್ಟುಕೊಂಡು ಅವರಿಗೆ ಬೇಕಾದ ಹಣಕಾಸಿನ ಸೌಲಭ್ಯವನ್ನು ಒದಗಿಸಿದೆ. ಉತ್ತಮ ಬೆಲೆ ಬಂದಾಗ ಮಾರಾಟಮಾಡಿ ಉಳಿದ ಹಣವನ್ನು ರೈತರಿಗೆ ನೀಡಿದೆ. ಬಳ್ಳಾರಿ ಜಿಲ್ಲೆಯಲ್ಲೇ ಅತಿಹೆಚ್ಚು ಉಗ್ರಾಣಕ್ಕೆ ಸಾಲ ಕೊಟ್ಟಿರುವ ಶಾಖೆಯೆಂದರೆ ಬಾಣಪುರಶಾಖೆ. ಬೆಳೆಒತ್ತೆಇಟ್ಟುಕೊಂಡ ಸಾಲದ ಪ್ರಮಾಣ ಆರುಕೋಟಿ ವ್ಯವಹಾರವನ್ನು ನಿರ್ವಹಿಸಿದೆ. ಬ್ಯಾಂಕ್‌ನ ಒಟ್ಟಾರೆ ಠೇವಣಿ ಖಾತೆಗಳು, ೬,೪೪೨, ಸಾಲದ ಖಾತೆಗಳು ೨೩೪೪. ಸಾಲ ಮುಂಗಡಗಳು ೧೮.೬೦ ಕೋಟಿ ರೂಪಾಯಿಗಳು ಠೇವಣಿಯು ೨.೯ ಕೋಟಿ ರೂಪಾಯಿಗಳಿವೆ. ಸೆಪ್ಟೆಂಬರ್ ೨೦೦೭ರ ಹೊತ್ತಿಗೆ ೬೮ ಲಕ್ಷ ರೂ ಲಾಭವನ್ನು ಪಡೆದಿದೆ. ಸಮಾಜದಲ್ಲಿನ ಎಲ್ಲಾ ಕುಟುಂಬಗಳು ಒಂದೊಂದು ಖಾತೆಯನ್ನು ಹೊಂದಬೇಕೆಂದು ಎಲ್ಲಾ ರೀತಿಯಿಂದಲೂ ಪ್ರಯತ್ನಿಸುತ್ತಿದೆ.

ಸಾಲ ಮರುಪಾವತಿಯ ಸಂದರ್ಭಗಳಲ್ಲಿ ಹೆಚ್ಚಾಗಿ ಕಾನೂನಿನ ಮೂಲಕ ಹೋಗದೆ ಮಾನವೀಯ ದೃಷ್ಠಿಯಿಂದ ನಡೆದುಕೊಂಡ ಉದಾಹರಣೆಗಳಿವೆ. ಬ್ಯಾಂಕನಿಂದ ಸಾಲ ಪಡೆದ ವ್ಯಕ್ತಿಯು ಊರನ್ನು ಬಿಟ್ಟ ಬೇರೆ ಊರಿನಲ್ಲಿ ನೆಲಸಿದ್ದ. ಆಗ ಬ್ಯಾಂಕನ ಎಇಓ ಅವರು ಈ ವ್ಯಕ್ತಿ ವಾಸಿಸುತ್ತಿರುವ ಊರಿಗೆ ಹೋಗಿ ಅವರ ಮನವೊಲಿಸಿ ಸಾಲಮರುಪಾವತಿಮಾಡಿಸಿದ ಪ್ರಸಂಗಗಳಿವೆ ಎಂದು ಪ್ರಬಂಧಕರು ತಿಳಿಸಿದರು. ಬ್ಯಾಂಕಿನ ಲೆಕ್ಕ ಪತ್ರಗಳು ತಿಳಿಸುವ ಹಾಗೆ ಪ್ರತಿಶತ ೮೭ರಷ್ಟು ಸಾಲ ಮರುಪಾವತಿಯಾಗಿದೆ.

ಸಾಲ ಮನ್ನಾದ ಕಾರ್ಯಕ್ರಮಗಳನ್ನು ರಾಜ್ಯ ಮತ್ತು ಕೇಂದ್ರ ಸರ್ಕಾರವು ಜಾರಿಗೆ ತಂದಾಗ ಹಲವಾರು ದುರ್ಬಲವರ್ಗದ ಜನಪದರು ಪ್ರತಿಫಲ ಪಡೆದಿದ್ದಾರೆ. ಶಾಖೆಯು ಕಳೆದ ೩೧ ವರ್ಷಗಳಲ್ಲಿ ಜನಸಾಮಾನ್ಯರಿಗೆ ಹತ್ತಿರವಾಗಿ ಅವರಿಗೆ ಬೇಕಾದ ಸಾಲ ಸೌಲಭ್ಯವನ್ನು ಒದಗಿಸುತ್ತಾ ಬಂದಿದೆ ಎನ್ನಬಹುದು. ಹಾಗೆಯೇ ಓರಿಯಂಟಲ್ ಬ್ಯಾಂಕ್ ಸಹಯೋಗದೊಂದಿಗೆ ಇನ್ಸೂರೆನ್ಸ್ ಲಿಂಕಡ ಪ್ಲಾನ್ ಉಳಿತಾಯ ಖಾತೆಯನ್ನು ಒಳಗೊಂಡಿದೆ. ಇದರಿಂದಾಗಿ ರೈತರಿಗೆ ಬಹಳಷ್ಟು ಪ್ರಯೋಜನ ಪಡೆದಿದ್ದಾರೆ. ಈ ಶಾಖೆಯಲ್ಲಿ ಕಿಸಾನ್ ಕ್ರೆಡಿಟ್ ಕಾರ್ಡುಗಳನ್ನು ಜಾರಿಗೆ ತಂದಿದ್ದರಿಂದ ೫ ವರ್ಷಗಳವರೆಗೆ ರೈತರಿಗೆ ದಾಖಲೆಗಳ ಪರದಾಟ ತಪ್ಪಿದೆ ಎನ್ನಬಹುದು. ಸಣ್ಣ/ಅತಿಸಣ್ಣ ರೈತರ ೧,೪೮೯ ಖಾತೆಗಳಿಗೆ ೮ ಕೋಟಿ ರೂಪಾಯಿಗಳ ಸಾಲವನ್ನು, ಸಣ್ಣ ಉದ್ಯಮಕ್ಕೆ, ೧೧ ಲಕ್ಷ ರೂಪಾಯಿಗಳ ಸಾಲ ನೀಡಿದ್ದಾರೆ. ಭೂರಹಿತ ಕಾರ್ಮಿಕರಿಗೆ ೫೦ಲಕ್ಷ, ಸಣ್ಣ ವ್ಯಾಪಾರಿಗಳ ೧೧೫ ಖಾತೆಗಳಿಗೆ ೨೭ ಲಕ್ಷ ರೂಪಾಯಿಗಳ ನೆರವು ನೀಡಿದೆ. ಇದರ ಜೊತೆಗೆ ಶಿಕ್ಷಣಕ್ಕೆ ೪೬ಲಕ್ಷ ರೂಪಾಯಿಗಳನ್ನು, ದೊಡ್ಡ ಪ್ರಮಾಣದ ಕೃಷಿಗೆ ೨

ಕೋಟಿ ೩೯ಲಕ್ಷ ರೂಪಾಯಿಗಳನ್ನು, ಗೃಹನಿರ್ಮಾಣಕ್ಕೆ ೧೬ಲಕ್ಷ, ರೂಪಾಯಿಗಳ ನೆರವನ್ನು ಒದಗಿಸಿದೆ. ಒಟ್ಟಾರೆಯಾಗಿ ಹೇಳುವುದಾದರೆ ಈ ಶಾಖೆಯು ಸಮಾಜದಲ್ಲಿನ ಎಲ್ಲಾ ವರ್ಗದವರ ಆದ್ಯತೆಯನ್ನು ಮನ್ನಿಸಿ ಅವರಿಗೆ ಬೇಕಾದ ಹಣಕಾಸಿನ ನೆರವನ್ನು, ಮಾರ್ಗದರ್ಶನವನ್ನು ಒದಗಿಸುತ್ತಾ ಬಂದು ಗ್ರಾಮೀಣ ಜನಪದರನ್ನು ಲೇವಾದೇವಿಗಾರರ, ಜಮೀನ್ದಾರರ ಹಿಡಿತದಿಂದ ಬಿಡುಗಡೆಗೊಳಿಸಿ, ಅವರನ್ನು ಅಭಿವೃದ್ಧಿ ಕಡೆಗೆ ನಡೆಸಿದ್ದಾರೆ ಎನ್ನಬಹುದು. ಈ ಶಾಖೆಯು ಅತ್ಯುತ್ತಮಶಾಖೆ ಎಂಬ ಪ್ರಶಸ್ತಿಯನ್ನು ಪಡೆದಿದೆ.

## ೨. ಶಿರಗುಪ್ಪಾ ಕ್ಷೇತ್ರ:

### ರಾರಾವಿ ಗ್ರಾಮೀಣ ಬ್ಯಾಂಕ ಶಾಖೆ

ಶಾಖೆಯು ರಾರಾವಿ ಮತ್ತು ಚಣಕನೂರು ಗ್ರಾಮಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಪತ್ತಿನ ಕಾರ್ಯನಿರ್ವಹಿಸುತ್ತದೆ. ಎರಡು ಗ್ರಾಮಗಳಿಂದ ೧೦೦ ಕುಟುಂಬಗಳನ್ನು ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಈ ಕುಟುಂಬಗಳಲ್ಲಿ ೫೦ ಸಣ್ಣ/ಅತಿ ಸಣ್ಣ ರೈತರು, ೧೫ ಗ್ರಾಮೀಣ ಕರಕುಶಲ ಕರ್ಮಿಗಳು ಸಣ್ಣ ಉದ್ದಿಮೆದಾರರು, ೨೫ ಚಿಲ್ಲರೆ ವ್ಯಾಪಾರಸ್ಥರು, ೧೦ ಭೂರಹಿತ ಕಾರ್ಮಿಕರನ್ನು ಸಮೀಕ್ಷೆಗೆ ಒಳಪಡಿಸಲಾಯಿತು. ಅದರಲ್ಲಿ ಸಾಕ್ಷರಸ್ಥರ ಪ್ರಮಾಣ, ಉದ್ಯೋಗ, ಮನೆಗಳ ವಿಧ, ಅವಲಂಬಿಸಿರುವವರ ಸಂಖ್ಯೆ ಮುಂತಾದ ಅಂಶಗಳ ಬಗ್ಗೆ ಅವರಿಂದಲೇ ಪಡೆದ ಮಾಹಿತಿಯನ್ನು ಪಟ್ಟಿ ೧ರಲ್ಲಿ ಕಾಣಬಹುದು

**ಪಟ್ಟಿ ೧**

**ಸಾಮಾನ್ಯ ಮಾಹಿತಿ**

ಮನೆಯ ವಿವರಗಳು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಸರಾಸರಿ ಸದಸ್ಯರು | ಸಾಕ್ಷರಸ್ಥರ ಸಂಖ್ಯೆ | ದುಡಿಯುವವರ ಸಂಖ್ಯೆ | ಗುಡಿಸಲುಗಳು | ಮಾಳಿಗೆ ಮನೆ | ಹೆಂಚಿನ ಮನೆ | ತಗಡಿನ ಮನೆ | ಜನತಾ ಮನೆ | ಆರ್.ಸಿ.ಸಿ ಮನೆ |
|---|---|---|---|---|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೫೦ | ೬ | ೩ | ೪ | .. | ೩೬ | ೬ | ೨ | ೩ | ೩ |
| ೦೨ | ಗ್ರಾಮೀಣ ಕರಕುಶಲ/ಸಣ್ಣ ಉದ್ದಿಮೆದಾರರು | ೧೫ | ೫ | ೩ | ೩ | .. | ೧೦ | ೧ | ೩ | ೧ | - |
| ೦೩. | ಸಣ್ಣ ವ್ಯಾಪಾರಿಗಳು | ೧೦ | ೬ | ೨ | ೪ | ೦೪ | - | - | ೨ | ೪ | - |
| ೦೪. | ಭೂ ರಹಿತ ಕಾರ್ಮಿಕರು | ೨೫ | ೫ | ೩ | ೩ | .. | ೧೩ | ೧ | ೨ | ೯ | .. |
| | | ೧೦೦ | | | | ೦೪ | ೫೯ | ೦೮ | ೦೯ | ೧೭ | ೦೩ |

ಪಟ್ಟಿ ೧ರಲ್ಲಿ ಅವಲೋಕಿಸಿದಾಗ ಭೂರಹಿತ ಕಾರ್ಮಿಕರಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು,

ಇತರ ವರ್ಗಗಳಲ್ಲಿ ಸಾಕ್ಷರತೆಯ ಪ್ರಮಾಣ ಅಧಿಕವಾಗಿದೆ. ೧೦೦ ಕುಟುಂಬಗಳಲ್ಲಿ ೫೯ ಕುಟುಂಬಗಳು ಮಾಳಿಗೆ ಮನೆಯಲ್ಲಿ ೧೭ ಕುಟುಂಬಗಳು ಜನತಾ ಮನೆಗಳಲ್ಲಿ ೮ ಕುಟುಂಬಗಳು ಹೆಂಚಿನ, ೩ ಕುಟುಂಬಗಳು ಆರ್.ಸಿ.ಸಿ. ಮತ್ತು ೯ ಕುಟುಂಬಗಳು ತಗಡಿನ ಮನೆಗಳಲ್ಲಿ ೪ ಕುಟುಂಬಗಳು ಗುಡಿಸಲಿನಲ್ಲಿ ವಾಸವಾಗಿದ್ದಾರೆ. ಇವರು ವಾಸಿಸುವ ಮನೆಗಳನ್ನಾಧರಿಸಿ ಅವರ ಜೀವನಮಟ್ಟವನ್ನು ಪರಿಗಣಿಸಬಹುದಾಗಿದೆ.

## ೧. ಆಸ್ತಿಗಳು

ಗ್ರಾಮೀಣ ನಿವಾಸಿಗಳು ತಮ್ಮದೇ ಆದ ಆಸ್ತಿಯನ್ನು ಹೊಂದಿರುತ್ತಾರೆ. ಕೃಷಿ ಚಟುವಟಿಕೆಗಳಿಗೆ ಬೇಕಾದ ಕೃಷಿ ಉಪಕರಣಗಳು, ಕೃಷಿ ಅನುಭವದ ವ್ಯಕ್ತಿಗಳು, ದನಕರುಗಳು ಹಾಗೆಯೇ ಮನೆಯಲ್ಲಿ ಉಪಯುಕ್ತ ವಸ್ತುಗಳಾದ ಎತ್ತಿನ ಬಂಡಿ, ಸೈಕಲ್, ಕಪಾಟುಗಳು ಮತ್ತು ಕುರಿ, ಕೋಳಿ, ಆಡು ಇನ್ನು ಮುಂತಾದವುಗಳನ್ನು ಹೊಂದಿರುತ್ತಾರೆ.

### ಪಟ್ಟಿ ೨

### ವಿವಿಧ ವರ್ಗಗಳ ಸರಾಸರಿ ಆಸ್ತಿಯ ಮೌಲ್ಯ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಗ್ರಾ.ಬ್ಯಾ ಪೂರ್ವ | ಸಾಲದ | ಗ್ರಾ.ಬ್ಯಾ ನಂತರ | ಸಾಲದ | ನಿವ್ವಳಆಸ್ತಿಯ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೫೦ | ೨೬೨೫ | | ೧೨೫೬೫ | | ೯೯೪೦ | ೩೭೮.೬೬ |
| ೦೨. | ಕರಕುಶಲ/ಸಣ್ಣ ಉದ್ದಿಮೆದಾರು | ೧೫ | ೩೦೦೦ | | ೧೦೬೦೦ | | ೭೬೦೦ | ೨೫೩.೩೩ |
| ೦೩. | ಸಣ್ಣ ವ್ಯಾಪಾರಸ್ಥರು | ೨೫ | ೪೩೦೦ | | ೯೯೬೨ | | ೫೬೬೨ | ೧೩೧.೬೭ |
| ೦೪. | ಭೂ ರಹಿತ ಕಾರ್ಮಿಕರು | ೧೦ | ೯೦೦ | | ೬೦೦೦ | | ೫೧೦೦ | ೫೬೬.೬ |
| | | ೧೦೦ | ೨೭೦೬ | | ೯೭೮೧ | | ೭೦೭೫ | ೨೬೧.೪೫ |

ಪಟ್ಟಿ ೨ರಲ್ಲಿ ೧೦೦ ಕುಟುಂಬಗಳ ಸರಾಸರಿ ಆಸ್ತಿಯ ಮೌಲ್ಯವನ್ನು ನೋಡಬಹುದಾಗಿದೆ. ನಾಲ್ಕು ವರ್ಗಗಳಲ್ಲಿ ಭೂ ರಹಿತ ಕಾರ್ಮಿಕರು ಅತಿಕಡಿಮೆ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಇನ್ನುಳಿದ ವರ್ಗಗಳು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ೫೦ ಸಣ್ಣ, ಅತಿಸಣ್ಣ ರೈತರು ೨೫ ಸಣ್ಣ ವ್ಯಾಪಾರಸ್ಥರು, ೧೫ ಕರಕುಶಲ ಸಣ್ಣ ಉದ್ದಿಮೆದಾರರು ಬ್ಯಾಂಕ್ ಸ್ಥಾಪನಾ ಪೂರ್ವದಲ್ಲೇ ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದ್ದರು. ಆದರೆ ಬ್ಯಾಂಕ್ ಸಾಲದ ನಂತರದಲ್ಲಿ ನಾಲ್ಕು ವರ್ಗಗಳಲ್ಲಿ ಆಸ್ತಿಯ ಪ್ರಮಾಣ ಅಧಿಕವಾಗಿರುವುದನ್ನು ಕಾಣಬಹುದು. ನಾಲ್ಕು ವರ್ಗಗಳಲ್ಲಿ ಸರಾಸರಿಯಾಗಿ ನಿವ್ವಳ

ಹೆಚ್ಚಳ ೭೦೭೫ರೂಪಾಯಿಗಳಷ್ಟು ಅಧಿಕವಾಗಿದ್ದು, ಅದು ಪ್ರತಿಶತ ೨೬೧.೪೫ರಷ್ಟು ಆಗಿರುವುದನ್ನು ಕಾಣಬಹುದು.

### ೨. ಭೂ ಹಿಡುವಳಿ

ಗ್ರಾಮೀಣ ನಿವಾಸಿಗಳ ಜೀವನಾಧಾರಿತ ವೃತ್ತಿಯೆಂದರೆ ಕೃಷಿ. ಈ ಪ್ರದೇಶವು ಸಂಪೂರ್ಣವಾಗಿ ಅರೆನೀರಾವರಿಯಾಧಾರಿತವಾಗಿದೆ. ಭೂ ಹಿಡುವಳಿಯನ್ನು ಎರಡು ವರ್ಗಗಳಲ್ಲಿ ಕಾಣಬಹುದು. ಸಣ್ಣ/ ಅತಿಸಣ್ಣ ರೈತರು ಗ್ರಾಮೀಣ ವ್ಯಾಪಾರಸ್ಥರು ಗ್ರಾಮೀಣ ಬ್ಯಾಂಕ್ ಸಾಲದ ಪೂರ್ವದಲ್ಲಿ ಇವರ ಭೂ ಹಿಡುವಳಿಯ ಪ್ರಮಾಣ ೩.೭೫ ಎಕರೆ ಇದ್ದುದು ಗ್ರಾಮೀಣ ಬ್ಯಾಂಕನ ಸಾಲದ ನಂತರದಲ್ಲಿ ಭೂ ಹಿಡುವಳಿಯು ಸರಾಸರಿ ೧ ಎಕರೆಯಷ್ಟು ಹೆಚ್ಚಿಸಿಕೊಂಡಿದ್ದಾರೆ. ಪ್ರದೇಶವು ಖುಷ್ಕಿ ಮತ್ತು ಹಗರಿಹಳ್ಳದ ಮೂಲಕ ನೀರಾವರಿಯನ್ನು ಒಳಗೊಂಡಿದ್ದರಿಂದ ಕೃಷಿಕರು ಉತ್ಪನ್ನವನ್ನು ಬ್ಯಾಂಕ್‌ಸಾಲದಿಂದ ಹೆಚ್ಚಿಸಿಕೊಂಡು ತಮ್ಮ ಆಸ್ತಿಯನ್ನು ವಿಸ್ತರಿಸಿಕೊಂಡಿದ್ದಾರೆ ಎಂಬ ಅಂಶವನ್ನು ಪಟ್ಟಿ ೩ರಲ್ಲಿ ಕಾಣಬಹುದು. ಆಸ್ತಿಯು ಪ್ರತಿಶತ ೪೦ರಷ್ಟು ವಿಸ್ತರಿಸಿಕೊಂಡಿರುವುದು ಕಂಡುಬರುತ್ತದೆ.

**ಪಟ್ಟಿ ೩**

**ಸರಾಸರಿ ಭೂ ಹಿಡುವಳಿಯ ಗಾತ್ರ**

ಎಕರೆಗಳಲ್ಲಿ

| ಕ್ರಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಹಿಡುವಳಿ ಸಾ.ಪೂ ಸಾಲದನಂತರ | | ಹಿಡುವಳಿ ಸಾಲದ ನಂತರ | | ಒಟ್ಟು ಕೃಷಿ ಭೂಮಿ | | ಭೂ ಹಿಡುವಳಿ ಹೆಚ್ಚಳ | |
|---|---|---|---|---|---|---|---|---|---|---|
| | | | ಖುಷ್ಕಿ | ನೀರಾವರಿ | ಖುಷ್ಕಿ | ನೀರಾವರಿ | ಖುಷ್ಕಿ | ನೀರಾವರಿ | ಎಕರೆವಾರು | ಪ್ರತಿಶತ |
| ೦೧ | ಸಣ್ಣ/ಅತಿಸಣ್ಣ ರೈತರು | ೫೦ | ೩.೦೦ | ೧.೫ | ೧.೦೦ | ೦.೫೦ | ೪.೦೦ | ೩.೦೦ | ೧.೫೦ | ೩೩ |
| ೦೨. | ಗ್ರಾಮೀಣ ಕರ ಕುಶಲಕರ್ಮಿಗಳು | ೨೫ | ೨೦೦ | ೧೦ | ೧೦೦ | ೦೫೦ | ೩.೦೦ | ೧೫೦ | ೧೫೦ | ೫೦ |
| | ಒಟ್ಟು | ೭೫ | ೨.೫೦ | ೧.೨೫ | ೧.೦೦ | ೦.೫೦ | ೩.೫ | ೧.೭೫ | ೧.೫೦ | ೪೦ |

### ೩. ಕೃಷಿ ಹೂಡುವಳಿ ವೆಚ್ಚ

ಗ್ರಾಮೀಣ ಜನಪದರ ಮುಖ್ಯ ವೃತ್ತಿಯೆಂದರೆ ಕೃಷಿ. ಕೃಷಿಯನ್ನು ಅವಲಂಬಿಸಿರುವವರ ಹೂಡುವಳಿ ವೆಚ್ಚವು ಕೃಷಿ ಭೂಮಿಯನ್ನು ಹದಮಾಡುವುದರಿಂದ ಮಾರುಕಟ್ಟೆಗೆ ಸಾಗಿಸುವವರೆಗೆ ವಿವಿಧ ಹಂತಗಳ ವೆಚ್ಚಗಳನ್ನು ಒಳಗೊಂಡಿರುತ್ತದೆ. ಅವುಗಳನ್ನು ಮೂರು ಹಂತಗಳಲ್ಲಿ ಕಾಣಬಹುದು.

ಮೊದಲನೆಯದಾಗಿ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳ ಮೇಲಿನ ವೆಚ್ಚ, ಎರಡನೆಯದಾಗಿ ಕೃಷಿ ಕಾರ್ಮಿಕರ ಕೂಲಿ ಮತ್ತು ಜಾನುವಾರುಗಳ ನಿರ್ವಹಣಾ ವೆಚ್ಚ ಕೊನೆಯದಾಗಿ ಫಸಲಿನ ಕಟಾವು, ಒಕ್ಕುವುದು, ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳು.

ರಾರಾವಿ ವ್ಯಾಪ್ತಿಯಲ್ಲಿ ೭೫ ಕೃಷಿ ಕುಟುಂಬಗಳನ್ನು ಸಮೀಕ್ಷಿಸಿದಾಗ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಬ್ಯಾಂಕ್ ಸಾಲದ ಪೂರ್ವದಲ್ಲಿ ಕಡಿಮೆ ಪ್ರಮಾಣದಲ್ಲಿ ಉಪಯೋಗಿಸುತ್ತಿದ್ದರು. ಆದರೆ ಬ್ಯಾಂಕ್ ಸಾಲದ ನಂತರದಲ್ಲಿ, ಬ್ಯಾಂಕಿನ ಅಧಿಕಾರಿಗಳ ಮಾರ್ಗದರ್ಶನದಂತೆ ಅಧಿಕ ಇಳುವರಿ ಕೊಡುವ ಬೀಜಗಳನ್ನು, ರಸಗೊಬ್ಬರಗಳಾದ ಡಿ.ಎ.ಪಿ., ಯೂರಿಯಾ, ರಂಜಕ, ಪೊಟ್ಯಾಶ್ ಹಾಗೂ ಬೆಳೆಗಳನ್ನು ರೋಗ ರುಜಿನಗಳಿಂದ ರಕ್ಷಿಸಲು ಕ್ರಿಮಿನಾಶಕಗಳನ್ನು ಉಪಯೋಗಿಸಲಾರಂಭಿಸಿದರು. ಬಿತ್ತಿದ ಬೆಳೆಯು ೩೦ ರಿಂದ ೪೦ ದಿನದೊಳಗೆ ಅದರಲ್ಲಿನ ಕಳೆಯನ್ನು ನಾಶಪಡಿಸಲು ಕೃಷಿಕಾರ್ಮಿಕರನ್ನು ದಿನಗೂಲಿಗೆ ನೇಮಿಸಿಕೊಳ್ಳುತ್ತಾರೆ. ಇಲ್ಲವೆ ಗುತ್ತಿಗೆ ನೀಡುತ್ತಾರೆ. ಕೃಷಿ ಕಾರ್ಮಿಕರ ಕೂಲಿಯ ಪ್ರಮಾಣ ಬ್ಯಾಂಕ್ ಆರಂಭದಲ್ಲಿ ಕಡಿಮೆ ಇದ್ದು ಇತ್ತೀಚಿನ ದಿನಗಳಲ್ಲಿ ದಿನವೊಂದಕ್ಕೆ ೮೦ ರಿಂದ ೧೦೦ ರೂಪಾಯಿಗಳಿಗಿಂತಲೂ ಅಧಿಕವಾಗಿದೆ. ಈ ಪ್ರದೇಶ ಅರೆನೀರಾವರಿ ಪ್ರದೇಶವಾಗಿರುವುದರಿಂದ ಕೃಷಿ ಕಾರ್ಮಿಕರ ಸಂಖ್ಯೆ ಕಡಿಮೆಯಿದೆ. ಹಾಗಾಗಿ ಕೂಲಿಯ ಪ್ರಮಾಣವು ಅಧಿಕವಾಗಿದೆ.

ಸದರಿ ೭೫ ಕೃಷಿ ಕುಟುಂಬಗಳಲ್ಲಿ ಸ್ವಂತ ಎತ್ತುಗಳನ್ನು ಕೇವಲ ೪೦ ಕುಟುಂಬಗಳು ಹೊಂದಿರುತ್ತವೆ. ಇನ್ನುಳಿದ ಕುಟುಂಬಗಳು ಬಾಡಿಗೆ ಎತ್ತುಗಳ ಹಾಗೂ ಟ್ರಾಕ್ಟರ್ ಮೂಲಕ ಕೃಷಿ ಭೂಮಿಯನ್ನು ಹದಗೊಳಿಸುತ್ತಾರೆ. ಮತ್ತು ಬಿತ್ತಲು ಬಳಸುತ್ತಾರೆ. ೪೦ ಕುಟುಂಬಗಳು ಅವರ ಎತ್ತುಗಳ ಮತ್ತು ದನಕರುಗಳ ನಿರ್ವಹಣಾ ವೆಚ್ಚವನ್ನು ಭರಿಸಬೇಕಾಗುತ್ತದೆ. ೩೫ ಕುಟುಂಬಗಳು ಎತ್ತುಗಳ ಹಾಗೂ ಟ್ರಾಕ್ಟರ್‌ಗೆ ಬಾಡಿಗೆ ಹಣವನ್ನು ನೀಡಬೇಕಾಗುತ್ತದೆ. ಹೀಗೆ ಸ್ವಂತ ಎತ್ತುಗಳ ನಿರ್ವಹಣೆ ಬಾಡಿಗೆ ಎತ್ತುಗಳ ಹಾಗು ಟ್ರಾಕ್ಟರ್ ಬಾಡಿಗೆಗೆ ಹಣವನ್ನು ಪ್ರತಿ ಎಕರೆಗೆ ೧೫೦೦ರೂಗಳಿಂದ ೨೦೦೦ರೂಗಳವರೆಗೆ ವೆಚ್ಚ ಮಾಡಬೇಕಾಗುತ್ತದೆ. ಈ ವೆಚ್ಚವು ಕೂಡ ಅಧಿಕವಾಗಿರುವುದನ್ನು ಕಾಣಬಹುದು.

ಬಿತ್ತನೆ ಮಾಡಿದ ಬೆಳೆಯು ಕೊಯ್ಯುವ ಹಂತಕ್ಕೆ ಬಂದಾಗ, ಅದನ್ನು ಕೊಯ್ದು ಕಣಕ್ಕೆ ಸಾಗಿಸುವ ಧಾನ್ಯಗಳನ್ನು ಬೇರ್ಪಡಿಸುವ, ತೂರುವ ಮತ್ತು ಧಾನ್ಯಗಳನ್ನು ಮಾರುಕಟ್ಟೆಗೆ ಸಾಗಿಸುವ ಹಾಗೂ ಇನ್ನಿತರೆ ವೆಚ್ಚಗಳಿಗೆ ಒಳಗಾಗಬೇಕಾಗುತ್ತದೆ. ಈ ಕಾರ್ಯಗಳನ್ನು ಕೃಷಿ ಯಂತ್ರಗಳ ಸಹಾಯದಿಂದ ಇಲ್ಲವೆ ಸಂಪ್ರದಾಯ ಬೇಸಾಯ ಪದ್ಧತಿಯ ಮೂಲಕ ನಿರ್ವಹಿಸಬೇಕಾಗುತ್ತದೆ. ಇವೆಲ್ಲಾ ವೆಚ್ಚಗಳನ್ನು ಇವರು ಭರಿಸಬೇಕಾಗುತ್ತದೆ. ಒಂದು ರೀತಿಯಲ್ಲಿ ಕೃಷಿ ಚಟುವಟಿಕೆಗಳಲ್ಲಿ ೫೦ ಕುಟುಂಬಗಳು ಪೂರ್ಣ ಪ್ರಮಾಣದಲ್ಲಿ ೨೫ ಕುಟುಂಬಗಳು ತಮ್ಮ ವ್ಯಾಪಾರದ ಜೊತೆಗೆ ಕೃಷಿಯಲ್ಲಿ ಬಾಗಶಃ ತೊಡಗಿಸಿಕೊಂಡಿದ್ದಾರೆ.

೭೫ ಕುಟುಂಬಗಳು ಮೂರು ಹಂತದ ವೆಚ್ಚವನ್ನು ಒಳಗೊಂಡಿದ್ದಾರೆ. ತುಂಗಭದ್ರಾ ಗ್ರಾಮೀಣ ಸಾಲದ ಪೂರ್ವದಲ್ಲಿ ಹೂಡುವಳಿ ವೆಚ್ಚವು ಸರಾಸರಿಯಾಗಿ ೫೭೨೩ ರೂಪಾಯಿಗಳಾದರೆ ಬ್ಯಾಂಕಿನ ಸಾಲದ ನಂತರದಲ್ಲಿ ಅವರ ವೆಚ್ಚದ ಪ್ರಮಾಣವು ೩೨.೯೦೦ ರೂಪಾಯಿಗಳಿಗಿಂತಲೂ ಅಧಿಕವಾಗಿದೆ ಎನ್ನಬಹುದು. ನಿವ್ವಳ ವೆಚ್ಚದ ಹೆಚ್ಚಳವು ೨೭೭೨೦ ರೂಪಾಯಿಗಳಾಗಿದ್ದು, ವೆಚ್ಚದ ಪ್ರತಿಶತ ಪ್ರಮಾಣ

೪೮೪ರಷ್ಟು ಅಧಿಕವಾಗಿರುವುದನ್ನು ಪಟ್ಟಿ ೪ರಲ್ಲಿ ಕಾಣಬಹುದು. ಈ ಪ್ರದೇಶದಲ್ಲಿನ ಸಣ್ಣ/ಅತಿಸಣ್ಣ ರೈತರನ್ನು ಸಮೀಕ್ಷಿಸಿದಾಗ ಬೆಳೆ ಸಾಲವನ್ನು ಕಿಸಾನ್ ಕ್ರೆಡಿಟ್ ಕಾರ್ಡುಗಳ ಮೂಲಕ ಪಡೆದಿದ್ದಾರೆ. ಇವರಿಗೆ ಬ್ಯಾಂಕ್ ಕನಿಷ್ಠ ೧೦,೦೦೦ರೂಗಳಿಂದ ಗರಿಷ್ಠ ೮೦ ಸಾವಿರ ರೂಪಾಯಿಗಳವರೆಗೆ ಸಾಲವನ್ನು ಮಂಜೂರುಮಾಡಿದೆ.

**ಪಟ್ಟಿ ೪**

**ಹೂಡುವಳಿ ವೆಚ್ಚ**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೫೦ | ೭೫೩೫ | ೩೭೮೦೦ | ೩೦೨೬೫ | ೪೦೧ |
| ೦೨. | ಗ್ರಾ.ಚಿಲ್ಲರೆ ವ್ಯಾಪಾರಿಗಳು | ೨೫ | ೨೮೨೫ | ೨೮೦೦೦ | ೨೫೧೭೫ | ೮೯೧ |
| | | ೭೫ | ೫೭೨೩ | ೩೨೯೦೦ | ೨೭೭೨೦ | ೪೮೪ |

ಈ ಮೊದಲು ರೈತರು ಬೆಳೆಸಾಲಕ್ಕೆ ಪ್ರತಿಶತ ೧೧.೫೦ ರಿಂದ ೧೨ರ ವರೆಗೆ ಬಡ್ಡಿಯಧರವಿತ್ತು. ಆದರೆ ೨೦೦೭ರ ನಂತರದಲ್ಲಿ ಬೆಳೆಸಾಲಕ್ಕೆ ಬಡ್ಡಿಯಧರ ಪ್ರತಿಶತ ೭ರಷ್ಟು ಮಾತ್ರ ಇದೆ. ಹಾಗಾಗಿ ಸಾಲ ಪಡೆಯುವ ಕೃಷಿಕರ ಸಂಖ್ಯೆ ಅಧಿಕವಾಗಿದೆ. ರೈತರಿಗೆ ಈ ಮೂರು ಹಂತದ ವೆಚ್ಚಗಳು ಅಧಿಕವಾಗಿರುವುದರಿಂದ ಹೂಡುವಳಿ ವೆಚ್ಚವು ಕೂಡ ಅಧಿಕವಾಗಿರುವುದನ್ನು ಕಾಣಬಹುದು.

**೪. ಉತ್ಪಾದನೆ**

ರೈತರ ಉತ್ಪಾದನೆಯು ಮುಂಗಾರು ಮತ್ತು ಹಿಂಗಾರು ಮಳೆಯ ಪ್ರಮಾಣ ಹಾಗೂ ಆ ಪ್ರದೇಶದಲ್ಲಿನ ನೀರಾವರಿ ಸೌಲಭ್ಯವನ್ನು ಅವಲಂಬಿಸಿದೆ. ಖುಷ್ಕಿ ಭೂಮಿ ಮತ್ತು ನೀರಾವರಿ ಪ್ರದೇಶದಲ್ಲಿನ ಬೆಳೆಗಳ ಉತ್ಪಾದನೆಯು ವರ್ಷದ ಸಮಗ್ರ ಉತ್ಪಾದನೆಯಾಗಿರುತ್ತದೆ. ೭೫ ಕುಟುಂಬಗಳು ತಮ್ಮ ಕೃಷಿ ಭೂಮಿಯಲ್ಲಿ ಆಹಾರದ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಆಹಾರದ ಬೆಳೆಗಳಾದ ಜೋಳ, ಗೋಧಿ ಮತ್ತು ಭತ್ತವನ್ನು ಅಧಿಕ ಪ್ರಮಾಣದಲ್ಲಿ ಬೆಳೆದು ತಮಗೆ ಬೇಕಾದಷ್ಟನ್ನು ಸ್ವಂತಕ್ಕೆ ಉಪಯೋಗಿಸಿಕೊಂಡು ಅಧಿಕವಾದ ಉತ್ಪನ್ನವನ್ನು ಮಾರಾಟ ಮಾಡುತ್ತಾರೆ.

ಕೃಷಿಕರು ಬ್ಯಾಂಕು ಅಸ್ತಿತ್ವದ ಪೂರ್ವದಲ್ಲಿ ತಮ್ಮ ಬೆಳೆಗಳ ಉತ್ಪನ್ನಕ್ಕೆ ಸಾಲವನ್ನು ಖಾಸಗಿ ಸಾಹುಕಾರರಿಂದ, ಮಧ್ಯವರ್ತಿಗಳಿಂದ, ಜಮೀನ್ದಾರರಿಂದ, ದಲ್ಲಾಳಿಗಳಿಂದ ಪಡೆಯುತ್ತಿದ್ದರು. ಆ

ಸಂದರ್ಭದಲ್ಲಿ ಇಲ್ಲಿನ ಬಹುತೇಕ ಕೃಷಿಕರು ಅನಕ್ಷರಸ್ಥರಾಗಿದ್ದು, ಸಂಪ್ರದಾಯ ಮತ್ತು ಮೂಢನಂಬಿಕೆಗಳನ್ನು ನಂಬುತ್ತಿದ್ದರು. ಕೃಷಿಯನ್ನು ಸಾಂಪ್ರದಾಯಿಕ ಬೇಸಾಯ ಪದ್ಧತಿಯಿಂದ ನಿರ್ವಹಿಸುತ್ತಿದ್ದರು. ಆದರೆ ತಮ್ಮ ಪ್ರದೇಶದಲ್ಲಿ ಬ್ಯಾಂಕ್ ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಬ್ಯಾಂಕ್‌ನವರು ಇವರಿಗೆ ಆಧುನಿಕ ತಳಿಗಳ ಬಗ್ಗೆ ತಿಳುವಳಿಕೆ ಮೂಡಿಸಿ, ಇರುವ ಕೃಷಿ ಭೂಮಿಯಲ್ಲಿ ಅತ್ಯಧಿಕ ಪ್ರಮಾಣದ ಬೆಳೆ ಬೆಳೆಯುವ ಬಗ್ಗೆ ಮಾಹಿತಿ ನೀಡಿದ್ದರಿಂದ, ಆ ಮೂಲಕ ಅವರ ಉತ್ಪಾದನೆಯನ್ನು ಹೆಚ್ಚಿಸಿಕೊಂಡಿದ್ದಾರೆ. ಜೊತೆಗೆ ತಮ್ಮ ವರಮಾನವನ್ನು ಸುಧಾರಿಸಿಕೊಂಡಿದ್ದಾರೆ.

ಈ ಪ್ರದೇಶವು ಅರೆನೀರಾವರಿ, ಭೂಮಿಯನ್ನು ಹೊಂದಿದೆ. ಗ್ರಾಮೀಣ ಬ್ಯಾಂಕ್ ಸಾಲ ಪಡೆದ ನಂತರದಲ್ಲಿ ಹೂಡುವಳಿ ವೆಚ್ಚ ಮತ್ತು ವರಮಾನಗಳೆರಡೂ ಅಧಿಕವಾಗಿರುವುದನ್ನು ಕಾಣಬಹುದು. ೫೦ ಕುಟುಂಬಗಳ ವರಮಾನ ೨೫ ಗ್ರಾಮೀಣ ವ್ಯಾಪಾರಸ್ಥರ ವರಮಾನಕ್ಕಿಂತ ಅಧಿಕವಾಗಿದೆ. ೫೦ ಕುಟುಂಬಗಳು ತಮ್ಮನ್ನು ಕೃಷಿ ಚಟುವಟಿಕೆಗಳಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ೨೫ ಕುಟುಂಬಗಳು ಬಾಗಶಃ ತೊಡಗಿಸಿಕೊಂಡಿರುವುದರಿಂದ ವರಮಾನ ಇವರಿಗಿಂತ ಸ್ವಲ್ಪ ಕಡಿಮೆಯಾಗಿದೆ. ತಾವು ಬೆಳೆದ ವಿವಿಧ ರೀತಿಯ ಬೆಳೆಗಳಾದ ಬತ್ತ, ಕಬ್ಬು, ಬಿಳಿಜೋಳ, ನವಣೆ, ಮೆಣಸಿನಕಾಯಿ, ಸೂರ್ಯಕಾಂತಿ, ಶೇಂಗಾ ಇನ್ನಿತರ ಬೆಳೆಗಳನ್ನು ವಿವಿಧ ಮಾರುಕಟ್ಟೆಯಲ್ಲಿ ವಿವಿಧ ಬೆಲೆಗೆ ಮಾರಾಟ ಮಾಡಿರುತ್ತಾರೆ. ಹಾಗಾಗಿ ತಮ್ಮ ವರಮಾನ ಹೆಚ್ಚಿಸಿಕೊಳ್ಳುನವಲ್ಲಿ ಸಫಲರಾಗಿದ್ದಾರೆ.

**ಪಟ್ಟಿ ೫**

**ಉತ್ಪಾದನೆ-ಹುಟ್ಟುವಳಿ**

| ಕ್ರಸಂ. | ವರ್ಗಗಳು | ಕುಟುಂಬಗಳ | ಕೆಜಿಬಿ ಸಾಲದ ಪೂರ್ವ | | ಕೆಜಿಬಿ ಸಾಲದ ನಂತರ | | ನಿವ್ವಳ ಹೆಚ್ಚಳ | |
|---|---|---|---|---|---|---|---|---|
| | | ಸಂಖ್ಯೆ | ಪ್ರಮಾಣ ಕ್ವಿ | ಮೌಲ್ಯ ರೂಗಳಲ್ಲಿ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂಗಳಲ್ಲಿ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂಗಳಲ್ಲಿ |
| ೦೧ | ಸಣ್ಣ/ಅತಿಸಣ್ಣ ರೈತರು | ೫೦ | ೭೬ | ೧೬೪೩೫ | ೧೫೦ | ೧೨೦೦೦ | ೭೪ (೮೪.೨) | ೧೦೫೭೫ (೬೬೭) |
| ೦೨ | ಗ್ರಾಮೀಣ ವ್ಯಾಪಾರಸ್ಥರು | ೨೫ | ೨೨ | ೪೦೫೫ | ೬೦ | ೫೫೦೦೦ | ೩೮ (೨೭.೨) | ೪೯೯೫೫ (೧೩.೨೪) |
| | | ೭೫ | ೪೯ | ೧೦೨೩೫ | ೧೦೦ | ೯೦೦೦೦ | ೫೧ (೯೦.೫) | ೭೯೭೬೫ (೭೭೯) |

೭೫ ಕುಟುಂಬಗಳ ಉತ್ಪಾದನೆಯು ಸಾಲದ ಪೂರ್ವದಲ್ಲಿ ಸರಾಸರಿ ೪೯ ಕ್ವಿಂಟಾಲ್‌ನಷ್ಟಿದ್ದರೆ, ೨೦೦೭ರಲ್ಲಿ ಬ್ಯಾಂಕ್ ಸಾಲದ ನಂತರದಲ್ಲಿ ೧೦೦ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ. ನಿವ್ವಳ ಉತ್ಪಾದನೆಯು ೫೧ ಕ್ವಿಂಟಾಲ್‌ನಷ್ಟು ಅಧಿಕವಾಗಿದ್ದು, ಅದರ ಮೌಲ್ಯವು ೭೯,೭೬೫ ರೂಪಾಯಿ

ಗಳಾಗಿದ್ದು, ಅದು ಪ್ರತಿಶತ ೯೦.೫ ಕ್ವಿಂಟಾಲ್‌ನಷ್ಟು ಪ್ರಮಾಣದಲ್ಲಿ ಮತ್ತು ಮೌಲ್ಯದಲ್ಲಿ ೬೮೩ ಪ್ರತಿಶತದಷ್ಟು ಅಧಿಕವಾಗಿದೆ. ಸಣ್ಣ/ಅತಿಸಣ್ಣ ರೈತರ ಹುಟ್ಟುವಳಿಯು ೭೬ ಕ್ವಿಂಟಾಲ್‌ನಿಂದ ೧೪೦ ಕ್ವಿಂಟಾಲ್‌ನವರೆಗೂ ಅಧಿಕವಾಗಿದೆ ಎಂಬುದನ್ನು ಪಟ್ಟಿ ೫ರಲ್ಲಿ ಕಾಣಬಹುದು. ಇದರಲ್ಲಿ ತಮ್ಮ ಸ್ವಂತ ಅನುಭೋಗಕ್ಕೆ ಕೆಲವು ಕ್ವಿಂಟಾಲ್‌ನಷ್ಟು ಧಾನ್ಯವನ್ನು ಇಟ್ಟುಕೊಂಡು ಉಳಿದ ಧಾನ್ಯಗಳನ್ನು ವಿವಿಧ ಬೆಲೆಗಳಲ್ಲಿ ಮಾರಾಟ ಮಾಡಿರುತ್ತಾರೆ.

ಕೃಷಿ ಹೂಡುವಳಿ ಮತ್ತು ಹುಟ್ಟುವಳಿಗಳೆರಡೂ ಬ್ಯಾಂಕ್ ಸಾಲದ ನಂತರದಲ್ಲಿ ಅಧಿಕವಾಗಿದೆ. ಕೃಷಿ ಹುಟ್ಟುವಳಿ ಮೌಲ್ಯ ೧೦,೨೩೫ ರೂಪಾಯಿಗಳಿಂದ ೯೦,೦೦೦ಸಾವಿರ ರೂಪಾಯಿಗಳವರೆಗೆ ಅಧಿಕವಾಗಿದೆ. ಹಾಗೆಯೆ ಹೂಡುವಳಿಯು ಕೂಡ ೫೭೨೩ರೂಗಳಿಂದ ೩೨,೯೦೦ ರೂಪಾಯಿಗಳವರೆಗೆ ಏರಿದೆ. ವರಮಾನದ ಮೌಲ್ಯದ ಪ್ರತಿಶತ ೬೮೩ರಷ್ಟು ಅಧಿಕವಾದರೆ ಹೂಡುವಳಿಯ ಮೌಲ್ಯ ಪ್ರತಿಶತ ೪೮೪ರಷ್ಟಾಗಿದೆ. ಕಳೆದ ೩೦ ವರ್ಷಗಳ ಅವಧಿಯಲ್ಲಿ ಹೂಡುವಳಿ ಮತ್ತು ಹುಟ್ಟುವಳಿಗಳೆರಡೂ ಅಧಿಕವಾಗಿದೆ. ಹೂಡುವಳಿಗಿಂತ ಹುಟ್ಟುವಳಿಯು ಪ್ರತಿಶತ ಮೌಲ್ಯ ೧೯೯ರಷ್ಟು ಹೆಚ್ಚಾಗಿರುವುದನ್ನು ಕಾಣಬಹುದು.

ಈ ಎಲ್ಲಾ ಅಂಶಗಳಿಂದ ತಿಳಿದುಬರುವುದೇನೆಂದರೆ ಉತ್ಪಾದನೆ ಮತ್ತು ಹೂಡಿಕೆಗಳ ಮೇಲೆ ಪ್ರ.ಗ್ರಾ.ಬ್ಯಾಂಕ್‌ನ ಪತ್ತು ಪ್ರಭಾವ ಬೀರಿ ವರಮಾನ ಹೆಚ್ಚಿಸುವಲ್ಲಿ ಸಹಕಾರಿಯಾಗಿದೆ ಎನ್ನಬಹುದು.

**೫. ವಿವಿಧ ವಲಯಗಳ ವರಮಾನ**

ಟಿ.ಜಿ.ಬ್ಯಾಂಕು ಸಾಲವು ಸಮಾಜದಲ್ಲಿನ ಸಣ್ಣ, ಅತಿಸಣ್ಣ ರೈತರು ಕರಕುಶಲ ಕರ್ಮಿಗಳು, ಉದ್ಯಮದಾರರು, ಗ್ರಾಮೀಣ ವ್ಯಾಪಾರಸ್ಥರು, ಭೂ ರಹಿತ ಕಾರ್ಮಿಕರ ವರಮಾನದ ಮೇಲೆ ಹೇಗೆ ಪ್ರಭಾವ ಬೀರಿದೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

೧. ಕೃಷಿ: ಸಣ್ಣ, ಅತಿಸಣ್ಣ ರೈತರ ವರಮಾನವು ಪಿಜಿಬಿ ಸಾಲದ ಪೂರ್ವದಲ್ಲಿ ೧೦೨೩೫ ರೂಪಾಯಿಗಳಾಗಿದ್ದು ೨೦೦೭ನೇ ಇಸ್ವಿಯಲ್ಲಿ ಟಿಜಿಬಿ ಸಾಲದ ನಂತರ ಇವರ ವರಮಾನ ೯೦,೦೦೦ ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಕಾಣಬಹುದು. ನಿವ್ವಳ ೭೯,೭೬೫ ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದು. ಬ್ಯಾಂಕಿನ ಸಾಲವು ಕೃಷಿ ವಲಯದ ಮೇಲೆ ಪ್ರಭಾವ ಬೀರಿ ಅವರ ವರಮಾನ ವೃದ್ಧಿಯಾಗಿ ಜೀವನಮಟ್ಟ ಸುಧಾರಣೆಗೆ ಕಾರಣವಾಗಿದೆ.

**೨. ಕೃಷಿ ಅವಲಂಬಿತ ಚಟುವಟಿಕೆಗಳು/ಭೂ ರಹಿತ ಕಾರ್ಮಿಕರು**

ಇವರು ಕೃಷಿ ಕಾರ್ಮಿಕರಾಗಿ ತಮ್ಮ ಜೀವನ ನಿರ್ವಹಿಸುತ್ತಾರೆ. ಇವರು ತಮ್ಮ ಜೀವನ ನಿರ್ವಹಣೆಗೆ ಆಡು, ಕುರಿ, ಒಂದು ಹಸುವನ್ನು ಸಾಕಿಕೊಂಡು ಬೇರೆಯವರ ಹೊಲಗಳಲ್ಲಿ ದಿನಗೂಲಿಗಳಾಗಿ ದುಡಿದು ತಮ್ಮ ಜೀವನ ನಿರ್ವಹಿಸುತ್ತಾರೆ. ಸರ್ಕಾರವು ಇವರ ನೆರವಿಗಾಗಿ ಅನೇಕ ಕಾರ್ಯಕ್ರಮಗಳನ್ನು ಗ್ರಾಮೀಣ ಬ್ಯಾಂಕುಗಳ ಮೂಲಕ ಜಾರಿಗೆ ತಂದಿತು. ಈ ಕಾರ್ಯಕ್ರಮಗಳಲ್ಲಿ ಭೂ ರಹಿತಕಾರ್ಮಿಕರಿಗಾಗಿ ಹಸು,

ಎಮ್ಮೆ, ಆಡು, ಕುರಿಗಳ ಸಾಲವನ್ನು ಸಹಾಯಧನರೂಪದಲ್ಲಿ ಒದಗಿಸಿದೆ. ಬ್ಯಾಂಕು ಇಲ್ಲಿನ ಭೂರಹಿತ ಕಾರ್ಮಿಕರಿಗೆ ವಿದೇಶಿ ತಳಿಗಳ ಒಂದು ಹಸು, ಎಮ್ಮೆಗಳಿಗೆ ೨೦,೦೦೦ ರೂಪಾಯಿಗಳ ಸಾಲ ನೀಡಿ ಅದರಲ್ಲಿ ೫೦೦೦.೦೦ ರೂಗಳ ಸಹಾಯಧನವನ್ನು ನೀಡಿದೆ. ಈ ತಳಿಗಳು ಗ್ರಾಮೀಣ ತಳಿಗಿಂತ ಅತ್ಯಧಿಕ ಪ್ರಮಾಣದಲ್ಲಿ ಹಾಲನ್ನು ನೀಡುತ್ತವೆ. ಹೆಚ್ಚುವರಿಯಾದ ಹಾಲನ್ನು ಡೈರಿಗೆ ಹಾಕುತ್ತಾರೆ. ಪ್ರತಿನಿತ್ಯ ೮೦ ರಿಂದ ಒಂದು ನೂರು ರೂಪಾಯಿಗಳವರೆವಿಗೂ ಆದಾಯ ಬರುತ್ತದೆ. ಇವರಿಗೆ ಪ್ರತಿ ತಿಂಗಳು ೩೦೦೦ರೂಗಳ ವರೆಗೆ ವರಮಾನ ದೊರೆಯುತ್ತದೆ. ಹಸು, ಎಮ್ಮೆಗಳಿಗೆ ಬೇಕಾದ ಮೇವು, ಪಶುಚಿಕಿತ್ಸಾಲಯ ಹತ್ತಿರದಲ್ಲೇ ದೊರೆಯುವುದರಿಂದ ಅವುಗಳ ಆರೋಗ್ಯ ಕಾಪಾಡಿ ವರಮಾನ ವೃದ್ಧಿಸಿಕೊಳ್ಳಲು ಸಾಧ್ಯವಾಗುತ್ತದೆ. ಹಾಗಾಗಿ ಇವರ ವರಮಾನ ಬ್ಯಾಂಕುಗಳ ಸಾಲದ ಪೂರ್ವದಲ್ಲಿ ೨೦೦೦ರೂಗಳಿರುವುದನ್ನು ಅನಂತರ ೨೦ ಸಾವಿರ ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಪಟ್ಟಿಯ ಮೂಲಕ ಕಾಣಬಹುದು.

**ಪಟ್ಟಿ ೬**

**ಭೂ ರಹಿತ ಕಾರ್ಮಿಕರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಭೂರಹಿತ ಕಾರ್ಮಿಕರು | ೧೦ | ೨೦೦೦ | ೨೦೦೦ | ೧೮೦೦೦ | ೯೦೦ |

**೩. ಕರಕುಶಲ ಕರ್ಮಿಗಳು/ಸಣ್ಣ ಉದ್ದಿಮೆದಾರರು**

ಈ ಪ್ರದೇಶದಲ್ಲಿ ಅನಾದಿಕಾಲದಿಂದಲೂ ಸಂಪ್ರದಾಯ ಬದ್ಧವಾದ ಕೆಲವು ಗ್ರಾಮೀಣ ಕೈಗಾರಿಕೆಗಳಿದ್ದು, ಇಂದು ಅವು ನಶಿಸುತ್ತಾ ಬಂದಿವೆ. ಇವುಗಳಲ್ಲಿ ಕೆಲವೊಂದು ಕಸಬುಗಳು ಅಸ್ತಿತ್ವವನ್ನು ಉಳಿಸಿಕೊಂಡಿವೆ. ಕಾಲಕ್ಕೆ ತಕ್ಕಂತೆ ಉದ್ಯಮಗಳೂ ಕೂಡ ಬದಲಾಗಿವೆ. ಹೋಟೆಲ್ ಉದ್ಯಮ, ಸೈಕಲ್ ಷಾಪು, ಹಿಟ್ಟಿನ ಗಿರಣಿ, ವೆಲ್ಡಿಂಗ್ ಷಾಪು, ಬೇಕರಿ ಇನ್ನು ಮುಂತಾದ ಕಸಬುಗಳನ್ನು ಗ್ರಾಮೀಣ ಪ್ರದೇಶದಲ್ಲಿ ಕಾಣಬಹುದು. ಇವರು ತಮ್ಮ ಉತ್ಪಾದನೆಯಿಂದ ವರಮಾನವನ್ನು ಪಡೆಯುತ್ತಾರೆ. ಗ್ರಾಮೀಣ ಬ್ಯಾಂಕ್‌ಸಾಲದ ಪೂರ್ವದಲ್ಲಿ ವರಮಾನವು ೧೫೦೦ ರೂಗಳಷ್ಟು ಇತ್ತು. ಆದರೆ ಬ್ಯಾಂಕು ಸಾಲದ ನಂತರದಲ್ಲಿ ಉತ್ಪನ್ನ ಮತ್ತು ಸೇವೆಯಿಂದ ೨೦,೦೦೦ ರೂಪಾಯಿಗಳವರೆಗೆ ವರಮಾನವನ್ನು ಹೆಚ್ಚಿಸಿಕೊಂಡಿದ್ದಾರೆ. ೧೫ ಸಣ್ಣ ಉದ್ದಿಮೆದಾರರ ಭೇಟಿಯಾದಾಗ ಈ ಮೊದಲು ಖಾಸಗಿಯವರಿಂದ ಸಾಲವನ್ನು ಬ್ಯಾಂಕ್ ಅಸ್ತಿತ್ವದ ಪೂರ್ವದಲ್ಲಿ ಪಡೆಯುತ್ತಿದ್ದೆವು. ಆದರೆ ಬ್ಯಾಂಕ್ ಸಾಲದ ನಂತರ ಖಾಸಗಿಯವರ ಹಣಕಾಸಿನ ನೆರವನ್ನು ಬಿಟ್ಟಿದ್ದೇವೆ ಹಾಗೂ ಅಧಿಕ ಬಡ್ಡಿಯ ಭಾರದಿಂದ ತಪ್ಪಿಸಿ

ಕೊಂಡಿದ್ದೇವೆ. ಬ್ಯಾಂಕಿನವರು ನಮಗೆ ಸಾಲವನ್ನಷ್ಟೇ ಅಲ್ಲದೆ ಮಾರ್ಗದರ್ಶನವನ್ನು ನೀಡುತ್ತಾರೆ. ಪಡೆದ ಸಾಲವನ್ನು ಕಾಲಕ್ಕೆ ತಕ್ಕಂತೆ ಮರುಪಾವತಿ ಮಾಡಿದರೆ, ಪುನಃ ಹೊಸ ಸಾಲ ದೊರೆತು ಉದ್ಯಮದ ವಿಸ್ತರಣೆಗೆ ಅವಕಾಶ ಸಿಗುತ್ತದೆ. ಇದರಿಂದ ತಮ್ಮ ವರಮಾನ ಸುಧಾರಿಸಿದೆ ಎನ್ನುವ ಮಾತುಗಳು ಅವರ ಮನದಾಳದಿಂದ ಬರುತ್ತವೆ.

**ಪಟ್ಟಿ ೭**

**ಸಣ್ಣ ಉದ್ದಿಮೆದಾರರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ಕರಕುಶಲ/ ಉದ್ದಿಮೆದಾರು | ೧೫ | ೧೫೦೦ | ೨೦೦೦೦ | ೧೮೫೦೦ | ೧೨೩೩ |

ಈ ಮೇಲಿನ ಪಟ್ಟಿಯನ್ನು ಗಮನಿಸಿದಾಗ ಕಾಲಕ್ಕೆ ತಕ್ಕಂತೆ ರೂಡಿಸಿಕೊಂಡ ಉದ್ದಿಮೆಗಳು ಬ್ಯಾಂಕ್ ಸಹಕಾರದೊಂದಿಗೆ ೨೦,೦೦೦ರೂಗಳವರೆಗೆ ಹೆಚ್ಚಿಸಿಕೊಂಡಿದ್ದಾರೆಂಬುದು ತಿಳಿದು ಬರುತ್ತದೆ. ನಿವ್ವಳ ೧೮೦೦೦ರೂಗಳಾದರೆ ವರಮಾನವನ್ನು ಪ್ರತಿಶತ ೧೨೩೩ರಷ್ಟು ಹೆಚ್ಚಳವಾಗಿದೆ. ಅದು ವಾರ್ಷಿಕ ಪ್ರತಿಶತ ೨೪ರಷ್ಟು ಬೆಳವಣಿಗೆಯನ್ನು ಕಳೆದ ೩೦ ವರ್ಷಗಳಲ್ಲಿ ಕಾಣಬಹುದು (೧೯೭೬-೨೦೦೭).

## ೪. ಗ್ರಾಮೀಣ ವ್ಯಾಪಾರಿಗಳು

ಗ್ರಾಮೀಣ ವ್ಯವಹಾರಗಳಾದ ಕಿರಾಣಿ ಅಂಗಡಿ, ಹಾಲಿನ ವ್ಯಾಪಾರ, ಹೂವಿನ ವ್ಯಾಪಾರ, ಬಟ್ಟೆ ವ್ಯಾಪಾರ, ತರಕಾರಿ ಹಾಗು ಸೀಮೆಎಣ್ಣೆ ವ್ಯಾಪಾರ ಇನ್ನು ಮುಂತಾದ ವ್ಯಾಪಾರಗಳು ನಡೆಯುತ್ತವೆ. ಇವರೆಲ್ಲರೂ ನಡೆಸುವ ವ್ಯವಹಾರವು ಜೀವನಾವಶ್ಯಕ ಸರಕುಗಳಿಗೆ ಸಂಬಂಧಿಸಿದೆ. ಬ್ಯಾಂಕ್ ಅಸ್ತಿತ್ವದ ಪೂರ್ವದಲ್ಲಿ ಖಾಸಗಿ ಸಂಸ್ಥೆಗಳಿಂದ ಹಣಕಾಸಿನ ನೆರವನ್ನು ಅತ್ಯಧಿಕ ಬಡ್ಡಿಯ ಧರದಲ್ಲಿ ಪಡೆಯುತ್ತಿದ್ದರು. ಬ್ಯಾಂಕ್ ಅಸ್ತಿತ್ವದ ನಂತರದಲ್ಲಿ ಇವರಿಂದ ಸಾಲಪಡೆಯುವುದನ್ನು ಕಡಿಮೆ ಮಾಡಿದ್ದಾರೆ. ಇವರು ತಮ್ಮ ಹತ್ತಿರದ ಪಟ್ಟಣದಲ್ಲಿ ಸಗಟುವ್ಯಾಪಾರಿಗಳ ಹತ್ತಿರ ಸರಕುಗಳನ್ನು ಕೊಂಡುಕೊಂಡು, ಅವುಗಳ ಬೆಲೆಯಲ್ಲಿ ಪ್ರತಿಶತ ೨೫ರಷ್ಟು ಅಧಿಕಗೊಳಿಸಿಕೊಂಡು ತಮ್ಮ ವ್ಯಾಪಾರ ನಿರ್ವಹಿಸುತ್ತಾರೆ. ಇವರು ಬ್ಯಾಂಕ್‌ನಿಂದ ೧೦,೦೦೦ರೂಗಳಿಂದ ೧ ಲಕ್ಷರೂಪಾಯಿಗಳವರೆಗೆ ಸಾಲ ಪಡೆದಿದ್ದಾರೆಂದು ಬ್ಯಾಂಕಿನ ಲೆಕ್ಕಪತ್ರಗಳು ತಿಳಿಸುತ್ತವೆ. ಇವರ ವ್ಯವಹಾರವು ಬ್ಯಾಂಕ್‌ಸಾಲದ ಪೂರ್ವದಲ್ಲಿ ೨೮೦೦ರೂಗಳಷ್ಟು ಇದ್ದುದು ೨೦೦೬-೦೭ರಲ್ಲಿ ವಾರ್ಷಿಕವಾಗಿ ೩೦,೦೦೦ ರೂಪಾಯಿಗಳವರೆವಿಗೂ ತಮ್ಮ ವ್ಯವಹಾರದ ಜೊತೆಗೆ ವರಮಾನವನ್ನು ವೃದ್ಧಿಸಿಕೊಂಡಿದ್ದಾರೆ.

ಪಟ್ಟಿ ೮

ಗ್ರಾಮೀಣ ವ್ಯಾಪಾರಿಗಳು

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ಚಿಲ್ಲರೆ ವ್ಯಾಪಾರಸ್ಥರು | ೨೫ | ೨೮೦೦ | ೩೦೦೦೦ | ೨೭೨೦೦ | ೯೧೭ |

ಇವರು ಬ್ಯಾಂಕಿನಿಂದ ಸರಾಸರಿಯಾಗಿ ೩೫,೦೦೦ರೂಗಳ ಸಾಲವನ್ನು ಪಡೆದಿದ್ದಾರೆ. ಬ್ಯಾಂಕ್‌ಸಾಲದ ಪೂರ್ವದಲ್ಲಿ ೨೮೦೦ ರೂಗಳಿದ್ದ ವರಮಾನ ೨೦೦೬ ಹೊತ್ತಿಗೆ ೩೦,೦೦೦ರೂಗಳಷ್ಟು ವೃದ್ಧಿಸಿಕೊಂಡಿದ್ದಾರೆ. ನಿವ್ವಳ ಹೆಚ್ಚುವರಿ ೨೭,೨೦೦ರೂಗಳಾಗಿದ್ದು ಅದನ್ನು ಪ್ರತಿಶತವಾರಿಗೆ ಪರಿವರ್ತಿಸಿದರೆ ೯೧೭ ಪಟ್ಟು ಅಧಿಕವಾಗಿರುವುದನ್ನು ಕಾಣಬಹುದು. ಹೀಗೆ ಈ ಮೇಲಿನ ನಾಲ್ಕು ವರ್ಗಗಳು ಬ್ಯಾಂಕ್ ಅಸ್ತಿತ್ವಕ್ಕೆ ಬಂದ ನಂತರದಲ್ಲಿ ತಮ್ಮ ವರಮಾನ ವೃದ್ಧಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

**೬. ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲ**

ಈ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿ ಬಹುದೀರ್ಘಕಾಲಾವಧಿಯಿಂದ ತಮ್ಮ ಸಾಲ ನೀಡುವ ಕಾರ್ಯವನ್ನು ನಿರ್ವಹಿಸುತ್ತಾ ಬಂದಿವೆ. ಸಾಹುಕಾರರು, ಸ್ನೇಹಿತರು, ಜಮೀನ್ದಾರರು, ಮಧ್ಯವರ್ತಿಗಳು, ದಲ್ಲಾಳಿಗಳು, ಲೇವಾದೇವಿಗಾರರು ಇನ್ನು ಮುಂತಾದವರಿಂದ ಜನಪದರು ತಮಗೆ ಬೇಕಾದ ಹಣಕಾಸಿನ ನೆರವನ್ನು ಪಡೆದಿದ್ದಾರೆ. ಗ್ರಾಮೀಣ ಬ್ಯಾಂಕು ಸ್ಥಾಪನೆಯಾದ ನಂತರದ ಕಾಲಾವಧಿಯಲ್ಲಿ ಇವರ ಪ್ರಭಾವ ಕಡಿಮೆಯಾಗಿದೆ.

ಕೆಲವು ಕೃಷಿ ಕುಟುಂಬಗಳು ಇನ್ನುಳಿದ ವರ್ಗಗಳಲ್ಲಿನ ಕೆಲವು ಕುಟುಂಬಗಳು ಸಗಟು ವ್ಯಾಪಾರಿಗಳಿಂದ ಕೆಲವು ಬಾಳಿಕೆ ಬರುವ ವಸ್ತುಗಳನ್ನು ಮತ್ತು ಆಹಾರ ಪದಾರ್ಥಗಳನ್ನು ಸ್ವಲ್ಪ ಹಣಕೊಟ್ಟು ಉಳಿದ ಹಣವನ್ನು ಕಂತಿನ ಆಧಾರದ ಮೇಲೆ ಮರುಪಾವತಿ ಮಾಡುತ್ತಾರೆ. ಈ ಚಟುವಟಿಕೆಗಳು ಗ್ರಾಮೀಣ ಪ್ರದೇಶಕ್ಕೆ ಸೀಮಿತವಾಗಿರದೇ ಪಟ್ಟಣ ಪ್ರದೇಶಗಳಲ್ಲೂ ಇವರ ಪ್ರಮಾಣ ಅಧಿಕವಾಗಿದೆ ಎನ್ನಬಹುದು. ಆದರೂ ಮೊದಲಿದ್ದ ಸ್ಥಾನಮಾನಗಳು, ಹಾಗೂ ಹಣಕಾಸಿನ ನಿರ್ವಹಣೆಯು ಗ್ರಾಮೀಣ ಬ್ಯಾಂಕು ಅಸ್ತಿತ್ವಕ್ಕೆ ಬಂದ ನಂತರದಿಂದ ಇಲ್ಲಿಯವರೆವಿಗೂ ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗುತ್ತಾ ಬಂದಿದೆ. ಇಂತಹ ಸಂದರ್ಭಗಳಲ್ಲೂ ಕೆಲವು ಕುಟುಂಬಗಳು ಇವರಿಂದ ಸಾಲ ಪಡೆಯುವುದನ್ನು ಗ್ರಾಮೀಣ ಪ್ರದೇಶಗಳಲ್ಲಿ ಕಾಣಬಹುದು.

ಪಟ್ಟಿ ೯

ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದಿರುವುದು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | A | B | C | D | A | B | C | D | A | B | C | D |
| ೦೧. | ಸಣ್ಣ/ಅತಿಸಣ್ಣ ರೈತರು | ೫೦ | ೩೦ | ೧೨ | ೬ | ೨ | ೫ | ೧ | .. | .. | ೫ | ೧ | .. | .. |
| ೦೨. | ಕುಶಲ/ಗ್ರಾಮೀಣ ಉದ್ಯಮದಾರು | ೧೫ | ೧ | ೧೦ | ೩ | ೧ | ೨ | ೧ | .. | .. | ೨ | ೧ | .. | .. |
| ೦೩. | ಗ್ರಾ. ವ್ಯಾಪಾರಸ್ಥರು | ೨೫ | ೧೬ | ೪ | ೩ | ೨ | .. | ೨ | ೧ | ೧ | .. | ೨ | .. | .. |
| ೦೪. | ಭೂ.ರಹಿತ ಕಾರ್ಮಿಕರು | ೧೦ | ೮ | ೧ | ೧ | .. | .. | ೨ | .. | .. | .. | .. | ೨ | .. |

A ಲೇವಾದೇವಿಗಾರರು/ದಲ್ಲಾಳಿಗಳು **B** ವ್ಯಾಪಾರಸ್ಥರು **C** ಸ್ನೇಹಿತರು/ಬಂಧುಗಳು **D** ಇತರೆ ದಲ್ಲಾಲರು

**೭. ಹಣಕಾಸಿನ ಸಂಸ್ಥೆಯ ಮೂಲಕ ಸಾಲ**

ರಾರಾವಿ ಪ್ರದೇಶದಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳಾದ ಪ್ರಾಥಮಿಕ ಸಹಕಾರ ಸಂಘಗಳು, ವಾಣಿಜ್ಯ ಬ್ಯಾಂಕುಗಳು ಮತ್ತು ಭೂ ಅಡಮಾನದ ಬ್ಯಾಂಕುಗಳಿಂದ ಸಾಲ ಪಡೆಯುತ್ತಿದ್ದರು. ಮೇಲಿನ ಹಣಕಾಸು ಸಂಸ್ಥೆಗಳಿಂದ ಸಣ್ಣ, ಅತಿಸಣ್ಣ ರೈತರು ದುರ್ಬಲ ವರ್ಗದವರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು, ಸಣ್ಣ ವ್ಯಾಪಾರಿಗಳು, ಸಾಲ ಪಡೆಯಲು ವಿಫಲರಾದಾಗ, ಗ್ರಾಮೀಣ ಪ್ರದೇಶಗಳ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಪ್ರಾದೇಶಿಕ ಗ್ರಾಮಿಣ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದವು. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಮಾಜದಲ್ಲಿನ ಎಲ್ಲಾ ವರ್ಗಗಳಿಗೆ ಅದರಲ್ಲೂ ಹಿಂದುಳಿದ, ದುರ್ಬಲ ವರ್ಗಗಳಿಗೂ ಹಣಕಾಸಿನ ನೆರವನ್ನು ನೀಡಿದ್ದಾರೆ. ಇದರಿಂದಾಗಿ ಸಹಕಾರ ಸಂಘಗಳು ಮತ್ತು ವಾಣಿಜ್ಯ ಹಾಗೂ ಭೂ ಅಭಿವೃದ್ಧಿ ಬ್ಯಾಂಕುಗಳಿಂದ ಸಮಾಜದಲ್ಲಿನ ಜಮೀನ್ದಾರರು, ದೊಡ್ಡ ವ್ಯಾಪಾರಸ್ಥರು ಹಾಗೂ ರಾಜಕೀಯ ಪ್ರಭಾವವಿರುವಂತಹವರು ಮಾತ್ರ ಸಾಲವನ್ನು ಪಡೆಯುತ್ತಿದ್ದರು. ಆದರೆ ಪ್ರ.ಗ್ರಾ.ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ದುರ್ಬಲವರ್ಗದವರ ಆದ್ಯತೆಯನ್ನು ಪರಿಶೀಲಿಸಿ, ಅವರಿಗೆ ವಿಭಿನ್ನ ಬಡ್ಡಿಯಧರದ ಆಧಾರದ ಮೇಲೆ ಹಣಕಾಸಿನ ನೆರವನ್ನು ಒದಗಿಸಿ ಅವರನ್ನು ಆರ್ಥಿಕಾಭಿವೃದ್ಧಿಯಲ್ಲಿ ತೊಡಗಿಸಿಕೊಳ್ಳಲು ಬ್ಯಾಂಕ್ ಬಹುಮುಖ್ಯ ಪಾತ್ರವಹಿಸಿದೆ ಎನ್ನಬಹುದು.

ಪಟ್ಟಿ ೧೦

ಹಣಕಾಸಿನ ಸಂಸ್ಥೆಯ ಮೂಲಗಳು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | E | F | G | H | E | F | G | H | E | F | G | H |
| ೦೧. | ಸಣ್ಣ/ಅತಿಸಣ್ಣ ರೈತರು | ೫೦ | ೨೮ | .. | .. | .. | ... | .. | .. | ೫೦ | .. | .. | .. | ೧೫ |
| ೦೨. | ಗ್ರಾ.ಕರಕುಶಲ/ ಉದ್ದಿಮೆದಾರರು | ೧೫ | .. | .. | .. | .. | .. | .. | .. | ೧೫ | .. | .. | .. | ೧೫ |
| ೦೩. | ಗ್ರಾ.ವ್ಯಾಪಾರಸ್ಥರು | ೨೫ | ೦೫ | .. | .. | .. | .. | .. | .. | ೨೫ | .. | .. | .. | ೨೫ |
| ೦೪. | ಭೂ.ರಹಿತ ಕಾರ್ಮಿಕರು | ೧೦ | .. | .. | .. | .. | .. | .. | .. | ೧೦ | .. | .. | .. | ೧೦ |

E ಪ್ರಾಥಮಿಕ ಸಹಕಾರ ಸಂಘಗಳು **F** ವಾಣಿಜ್ಯ ಬ್ಯಾಂಕುಗಳು **G** ಭೂ ಅಭಿವೃದ್ಧಿ ಬ್ಯಾಂಕು **H** ಪ್ರಾದೇಶಿಕ ಗ್ರಾಮೀಣ ಬ್ಯಾಂಕು.

## ೮. ಗ್ರಾಮೀಣ ಬ್ಯಾಂಕ ಬಗ್ಗೆ ತಿಳುವಳಿಕೆ

ರಾರಾಪಿ ಪ್ರದೇಶದಲ್ಲಿ ಸಮೀಕ್ಷಿಸಿದ ೧೦೦ ಕುಟುಂಬಗಳು ಬ್ಯಾಂಕ್ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸಿದ್ದಾರೆ. ೭೫ ಕುಟುಂಬಗಳು ಬ್ಯಾಂಕು ಸಿಬ್ಬಂದಿಯಿಂದ ೧೪ ಕುಟುಂಬಗಳು ಗ್ರಾಮ ಸಬೆಯಿಂದ, ೬ ಕುಟುಂಬಗಳು ಗ್ರಾಮದ ಮುಖಂಡರಿಂದ ೫ ಕುಟುಂಬಗಳು ಸ್ವಂತ ತಿಳುವಳಿಕೆಯಿಂದ ಬ್ಯಾಂಕ್ ಬಗ್ಗೆ ಮಾಹಿತಿಯನ್ನು ಪಡೆದಿದ್ದಾರೆ. ಅದು ೭೫, ೧೪, ೬, ೫ರಷ್ಟು ಶೇಕಡವಾರು ಅನುಕ್ರಮವಾಗಿವೆ. ಗ್ರಾಮೀಣ ಬ್ಯಾಂಕು ಸಿಬ್ಬಂದಿಯು ಗರಿಷ್ಠ ಪ್ರಮಾಣದಲ್ಲಿ ಗ್ರಾಮೀಣ ಜನಪದರಿಗೆ ಬ್ಯಾಂಕ್ ಬಗ್ಗೆ ಮಾಹಿತಿ ಒದಗಿಸಿ ಅವರಲ್ಲಿ ಬ್ಯಾಂಕ್ ಬಗ್ಗೆ ತಿಳುವಳಿಕೆ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ ಎಂಬುದನ್ನು ಪಟ್ಟಿ ೧೧ರಲ್ಲಿ ಕಾಣಬಹುದಾಗಿದೆ.

## ಗ್ರಾಮೀಣ ಬ್ಯಾಂಕ್ ಬಗ್ಗೆ ಜನಪದರ ಅಭಿಪ್ರಾಯಗಳು

ಆ ಪ್ರದೇಶದಲ್ಲಿ ಪ್ರಾತಿನಿದಿಕವಾಗಿ ಆಯ್ಕೆಮಾಡಿಕೊಂಡ ೧೦೦ ಕುಟುಂಬಗಳಲ್ಲಿ ೮೦ ಕುಟುಂಬಗಳು ಬ್ಯಾಂಕ್‌ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ. ಇನ್ನುಳಿದ ೨೦ ಕುಟುಂಬಗಳು ಬೇರೆ ಬೇರೆ ಕಾರಣಗಳನ್ನು ಕೊಡುತ್ತಾರೆ. ಬ್ಯಾಂಕುಗಳು ಸಾಲ ಒದಗಿಸುವಾಗ ಸಾಕಷ್ಟು ಕಾಲಾವಕಾಶ, ಮುಖ್ಯಕಛೇರಿಯಿಂದ ಬೆಳೆಸಾಲ ವಿತರಿಸುವಾಗ ಅನುಮತಿ ದಾಖಲೆಗಳ ಬಗ್ಗೆ ತೊಂದರೆಯೆಂದು ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ.

೧೦೦ ಕುಟುಂಬಗಳು ಬ್ಯಾಂಕು ಮುಂದುವರೆಸುವ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ. ೨೦೦೧ರ ನಂತರದಲ್ಲಿ ಬ್ಯಾಂಕಿನಲ್ಲಿ ಕಿಸಾನ್ ಕ್ರೆಡಿಟ್ ಕಾರ್ಡುಗಳನ್ನು ಜಾರಿಗೆ ತಂದಿದ್ದರಿಂದ ೫ ವರ್ಷಗಳವರೆಗೆ ದಾಖಲಾತಿಗಳಾಗಿ ಪರದಾಟ ತಪ್ಪಿತು ಎಂದಿದ್ದಾರೆ. ಬ್ಯಾಂಕು ಪ್ರಬಂಧಕರು ನಮಗೆ ಸಾಲದ ಬಗ್ಗೆ ಮಾಹಿತಿ ನೀಡಿ, ಯಾವುದೇ ತೊಂದರೆಗಳಾಗದ ಹಾಗೆ ಸಾಲವನ್ನು ನೀಡಿದ್ದಾರೆ. ಬ್ಯಾಂಕು ಬೆಳೆಸಾಲದ ಬಗ್ಗೆ ಸಾಕಷ್ಟು ಮಾಹಿತಿ ಮತ್ತು ಆರ್ಥಿಕ ನೆರವನ್ನು ಸಕಾಲದಲ್ಲಿ ಒದಗಿಸಿ ನಮ್ಮ ಅಭಿವೃದ್ಧಿಗೆ ಪೂರಕವಾಗಿದೆ ಎಂಬ ಮನದಾಳದ ಮಾತುಗಳು ಅವರಿಂದ ವ್ಯಕ್ತವಾಗುತ್ತವೆ.

ಪಟ್ಟಿ ೧೧

ಈ ಬ್ಯಾಂಕ್ ಬಗ್ಗೆ ಜ್ಞಾನ ಪಡೆದವರು ಮತ್ತು ಅವರ ಅಭಿಪ್ರಾಯ

| ಕ್ರ. ಸಂಖ್ಯೆ | ವರ್ಗಗಳು | ಕುಟುಂಬ ಸಂಖ್ಯೆ | ಗ್ರಾಮದ ಮುಖಂಡರಿಂದ | ಸ್ವಂತ ತಿಳುವಳಿಕೆ | ಸ್ನೇಹಿತರು | ಬ್ಯಾಂಕ್ ಸಿಬ್ಬಂಧಿ | ಗ್ರಾಮ ಸಭಾ | ಬಂಧು ಗಳಿಂದ | ಬ್ಯಾ.ತೃಪ್ತಿ | | ಸಾ.ಪ. ತೊಂದರೆಗಳು | | ಅಧಿಕಾರಿಗಳ ಬಗ್ಗೆ ತೃಪ್ತಿ | | ಬ್ಯಾಂಕ ಮುಂದುವರಿಸುವ ಬಗ್ಗೆ | |
|---|---|---|---|---|---|---|---|---|---|---|---|---|---|---|---|---|
| | | | | | | | | | ಹೌದು | ಇಲ್ಲ | ಇದೆ | ಇಲ್ಲ | ಇದೆ | ಇಲ್ಲ | ಬೇಕು | ಬೇಡ |
| ೦೧. | ಸಣ್ಣ/ಅತಿಸಣ್ಣ ರೈತರು | ೫೦ | ೩ | .. | .. | ೪೨ | ೫ | .. | ೪೫ | ೫ | ೫ | ೪೫ | ೪೫ | ೫ | ೫೦ | .. |
| ೦೨. | ಕುಶಲ/ ಗ್ರಾಮೀಣ ಉದ್ಯಮದಾರರು | ೧೫ | ೧ | ೧ | .. | ೧೦ | ೩ | .. | ೧೨ | ೩ | ೩ | ೧೨ | ೧೨ | ೩ | ೧೫ | .. |
| ೦೩. | ಗ್ರಾಮೀಣ ವ್ಯಾಪಾರಸ್ಥರು | ೧೦ | ೧ | .. | .. | ೦೮ | ೧ | .. | ೩ | ೭ | ೭ | ೩ | ೦೩ | ೦೮ | ೧೦ | .. |
| ೦೪. | ಭೂರಹಿತ | ೨೫ | ೧ | ೪ | .. | ೧೫ | ೫ | .. | ೨೦ | ೫ | ೫ | ೨೦ | ೨೦ | ೫ | ೨೫ | .. |
| | ಒಟ್ಟು | ೧೦೦ | ೦೬ | ೦೫ | .. | ೭೫ | ೧೪ | .. | ೮೦ | ೨೦ | ೨೦ | ೮೦ | ೮೦ | ೨೦ | ೧೦೦ | .. |

**ರಾರಾವಿ ಪ್ರಗತಿ ಗ್ರಾಮೀಣ ಬ್ಯಾಂಕಿನ ಸ್ಥಿತಿ**

ಯಾವುದೇ ಬ್ಯಾಂಕು ಕಾರ್ಯನಿರ್ವಹಿಸಬೇಕಾದರೆ ಸಾಲ ಪಡೆದವರು ಸಕಾಲದಲ್ಲಿ ಸಾಲಮರುಪಾವತಿ ಮಾಡುವುದು ಅಷ್ಟೇ ಮುಖ್ಯವಾಗಿದೆ. ಈ ಪ್ರದೇಶವು ಅರೆನೀರಾವರಿ ಪ್ರದೇಶವಾದ್ದರಿಂದ ವಾರ್ಷಿಕವಾಗಿ ಒಂದು ಅಥವಾ ೨ ಬೆಳೆಗಳ ಸಾಲವನ್ನು ಪಡೆಯುತ್ತಾರೆ. ಇತ್ತೀಚೆಗೆ ಜನರಲ್ಲಿ ಬ್ಯಾಂಕಿನಬಗ್ಗೆ ತಿಳುವಳಿಕೆ ಮೂಡಿರುವುದರಿಂದ ಸಾಲ ಪಡೆಯುವುದೇ ಮುಖ್ಯವಾಗಿಲ್ಲ. ಸಾಲ ಮರುಪವಾತಿಯೂ ಕೂಡ ಅದೇ ಪ್ರಮಾಣದಲ್ಲಿ ಮಾಡುತ್ತಾರೆ. ಕೆಲವರು ಸಾಲದ ಮರುಪಾವತಿಯನ್ನು ಉದ್ದೇಶಪೂರ್ವಕವಾಗಿ ಮುಂದೂಡಿದ್ದಾರೆ. ಆದರೆ ಅಂತಹವರ ಸಂಖ್ಯೆಯು ಬಹಳಷ್ಟು ಕಡಿಮೆ ಇದೆ. ಒಟ್ಟಾರೆ ಬ್ಯಾಂಕಿನ ಲೆಕ್ಕ ಪತ್ರಗಳು ತಿಳಿಸುವ ಹಾಗೆ ಪ್ರತಿಶತ ೮೦ರಷ್ಟು ಸಾಲ ಮರುಪಾವತಿಯಾಗಿದೆ ಇನ್ನುಳಿದ ೨೦ರಷ್ಟು ಬಾಕಿ ಇದೆ ಎಂದು ಪ್ರಬಂಧಕರು ತಿಳಿಸಿದ್ದಾರೆ.

ಬ್ಯಾಂಕ್‌ನ ಒಟ್ಟು ವ್ಯಹಾರವು ಮಾರ್ಚ್ ೨೦೦೮ರ ಮಾರ್ಚ್‌ವೇಳೆಗೆ ೪.೧೫ ಕೋಟಿ ರೂಪಾಯಿಗಳಷ್ಟಾಗಿದೆ. ಶಾಖೆಯು ೬೯೦೦ ಖಾತೆಗಳನ್ನು ಹೊಂದಿದ್ದು ಅದರಲ್ಲಿ ೭೫೦ ಸಾಲದ ಖಾತೆಗಳಿದ್ದು, ಇನ್ನುಳಿದವು ಠೇವಣಿ ಖಾತೆಗಳಾಗಿರುತ್ತವೆ. ಅದರಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರ ಖಾತೆಗಳು ೫೦೦ರಷ್ಟು ಇದ್ದು, ೨೮೦ ಕೆ.ಸಿ.ಸಿ.ಕಾರ್ಡುಗಳಾಗಿವೆ. ಒಟ್ಟು ೧ ಕೋಟಿ ೧೪ಲಕ್ಷದ ರೂ ಮೊತ್ತ ಸಾಲವನ್ನು ಕೃಷಿಗೆ ನೀಡಿದ್ದಾರೆ. ಕೃಷಿಕರಿಗೆ ೨೦,೦೦೦ರೂಗಳಿಂದ ೧ ಲಕ್ಷ ರೂಗಳವರೆಗೆ ಸಾಲವನ್ನು ನೀಡಿರುತ್ತಾರೆ. ಈ ಶಾಖೆಯು ಕರಕುಶಲ ಕರ್ಮಿಗಳಿಗೆ ೫ ಲಕ್ಷ ರೂಪಾಯಿಗಳ ಸಾಲವನ್ನು ನೀಡಿದೆ. ಭೂ ರಹಿತ ಕಾರ್ಮಿಕರಿಗೆ ೨೦ ಖಾತೆಗಳಿದ್ದು ೨ ಲಕ್ಷ ೨೦ ಸಾವಿರ ರೂಪಾಯಿಗಳವರೆಗೆ ಸಾಲ ನೀಡಿರುತ್ತಾರೆ. ಗ್ರಾಮೀಣ ವ್ಯಾಪಾರಸ್ಥರಿಗೆ ೪ಲಕ್ಷ ೫೦,೦೦೦ರೂಗಳ ಸಾಲವನ್ನು ವಿತರಿಸಿರುವುದನ್ನು ದಾಖಲೆಗಳ ಮೂಲಕ ಕಂಡುಕೊಳ್ಳಲಾಯಿತು. ಇದರ ಜೊತೆಗೆ ಸ್ವಸಹಾಯ ಗುಂಪುಗಳಿಗೆ, ಗೃಹ ನಿರ್ಮಾಣಕ್ಕೆ, ಶಿಕ್ಷಣ, ವಾಹನಗಳ ಸಾಲ, ಟ್ರಾಕ್ಟರ್ ಸಾಲ ನೀಡಿದೆ.

ರೈತರಿಗೆ ಮುಖ್ಯವಾಗಿರುವ ಬೆಳೆ ಒತ್ತೆಸಾಲವನ್ನು ಕೂಡ ಬ್ಯಾಂಕು ನೀಡುತ್ತದೆ. ಇದರಿಂದಾಗಿ ರೈತರಿಗೆ ಉತ್ತಮ ಬೆಲೆ ದೊರೆತು ತಮ್ಮ ವರಮಾನ ವೃದ್ಧಿಸಿಕೊಳ್ಳಲು ಸಹಾಯಕಾರಿಯಾಗಿದೆ. ಅಷ್ಟೇ ಅಲ್ಲದೆ ರಾಜ್ಯ ಮತ್ತು ಕೇಂದ್ರಸರಕಾರಗಳು ಜಾರಿಗೆ ತಂದಂತಹ ಸಾಲ ಮನ್ನಾ ಯೋಜನೆಯಲ್ಲಿ ೪ ವರ್ಗದವರೂ ಕೂಡ ಅದರ ಪ್ರತಿಫಲ ಪಡೆದಿದ್ದಾರೆ. ಈ ಶಾಖೆಯು ಜನಸಾಮಾನ್ಯರಿಗೆ ಬಹಳಷ್ಟು ಹತ್ತಿರವಾಗಿದೆ ಎನ್ನುವ ಫಲಾನುಭವಿಗಳ ಮನದಾಳದ ಮಾತುಗಳನ್ನು ಕೇಳಬಹುದಾಗಿದೆ. ಒಟ್ಟಾರೆಯಾಗಿ ಬ್ಯಾಂಕು ಕೃಷಿಕರಿಗೆ ಬಹಳಷ್ಟು ಹತ್ತಿರವಾಗಿ ಕೃಷಿಕರದ್ದೇ ಬ್ಯಾಂಕೆಂದರೆ ತಪ್ಪಲ್ಲವೆನ್ನಬಹುದು. ಈ ಶಾಖೆಯು B+ ಅವಾರ್ಡ್ ಪಡೆದಿದ್ದು ಹಾಗೂ ನಿರಂತರವಾಗಿ ಲಾಭಗಳಿಸುವ ಬ್ಯಾಂಕಾಗಿ ಉತ್ತಮ ಹೆಸರನ್ನು ಪಡೆದಿದೆ.

### ೩. ಸಂಡೂರು ಕ್ಷೇತ್ರ: ದರೋಜಿ ಗ್ರಾಮೀಣ ಬ್ಯಾಂಕ ಶಾಖೆ

ಶಾಖೆಯು ದರೋಜಿ ಮತ್ತು ಮಾದಪುರ ಗ್ರಾಮಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಪತ್ತಿನ ಕಾರ್ಯವನ್ನು ನಿರ್ವಹಿಸುತ್ತಿವೆ. ಎರಡು ಗ್ರಾಮಗಳಿಂದ ೯೦ ಫಲಾನುಭವಿಗಳನ್ನು ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಈ ಕುಟುಂಬಗಳಲ್ಲಿ ೪೦ ಸಣ್ಣ/ಅತಿಸಣ್ಣ ರೈತರು, ೨೦ ಸಣ್ಣ ವ್ಯಾಪಾರಿಗಳು, ೨೦ ಸಣ್ಣ ಉದ್ಯಮದಾರರು, ೧೦ ಭೂ ರಹಿತ ಕಾರ್ಮಿಕರನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಸಮೀಕ್ಷೆಯಲ್ಲಿ ಫಲಾನುಭವಿ ಸದಸ್ಯರ ಸಂಖ್ಯೆ, ಅಕ್ಷರಸ್ಥರ ಪ್ರಮಾಣ, ಅವರ ಉದ್ಯೋಗ, ಮನೆಗಳ ವಿಧ, ಅವಲಂಬಿಸಿರುವವರ ಸಂಖ್ಯೆ ಮುಂತಾದ ಅಂಶಗಳ ಬಗ್ಗೆ ಅವರಿಂದಲೇ ಪಡೆದ ಮಾಹಿತಿಯನ್ನು ಪಟ್ಟಿ ೧ರಲ್ಲಿ ಕಾಣಬಹುದು.

ಪಟ್ಟಿ ೧

ಸಾಮಾನ್ಯ ಮಾಹಿತಿ

| ಕ್ರಸಂ | ವರ್ಗಗಳು | ಕುಟುಂಬಗಳ ಸಂಖ್ಯೆ | ಸರಾಸರಿ ಸದಸ್ಯರು | ಸಾಕ್ಷರಸ್ಥ ಸಂಖ್ಯೆ | ದುಡಿಯುವವರ ಸಂಖ್ಯೆ | ಮನೆಗಳ ವಿಧಗಳು: ಗುಡಿಸಲುಗಳು | ಮಾಳಿಗೆ ಮನೆ | ಹೆಂಚಿನ ಮನೆ | ತಗಡಿನ ಮನೆ | ಜನತಾ ಮನೆ | ಆರ್.ಸಿ.ಸಿ. ಮನೆ |
|---|---|---|---|---|---|---|---|---|---|---|---|
| ೦೧ | ಸಣ್ಣ/ಅತಿಸಣ್ಣ ರೈತರು | ೪೦ | ೬ | ೪ | ೩ | .. | ೨೦ | ೪ | ೩ | ೧೦ | ೩ |
| ೦೨ | ಗ್ರಾಮೀಣ ಕರಕುಶಲ/ಸಣ್ಣ ಉದ್ದಿಮೆದಾರರು | ೨೦ | ೫ | ೪ | ೩ | ೧ | ೮ | ೧ | ೨ | ೭ | ೧ |
| ೦೩. | ಸಣ್ಣವ್ಯಾಪಾರಿಗಳು | ೧೦ | ೬ | ೩ | ೩ | ೧ | ೨ | .. | .. | ೭ | .. |
| ೦೪. | ಭೂ ರಹಿತ ಕಾರ್ಮಿಕರು | ೨೦ | ೫ | ೩ | ೩ | - | ೬ | ೫ | ೩ | ೬ | - |
| | | ೯೦ | - | - | - | ೦೨ | ೩೬ | ೧೦ | ೮ | ೩೦ | ೪ |

ಪಟ್ಟಿ ೧ನ್ನು ಅವಲೋಕಿಸಿದಾಗ ಭೂರಹಿತ ಕಾರ್ಮಿಕರ ಕುಟುಂಬಗಳಲ್ಲಿ ಅಕ್ಷರಸ್ಥರ ಪ್ರಮಾಣ ಕಡಿಮೆ ಇದ್ದು, ಇತರ ಮೂರು ವರ್ಗಗಳಲ್ಲಿ ಅಕ್ಷರಸ್ಥರ ಪ್ರಮಾಣ ಹೆಚ್ಚಾಗಿದೆ. ೯೦ ಫಲಾನುಭವಿಗಳಲ್ಲಿ ೨ ಕುಟುಂಬಗಳು ಗುಡಿಸಲುಗಳಲ್ಲಿ, ೩೬ ಕುಟುಂಬಗಳು ಮಾಳಿಗೆ ಮನೆಗಳಲ್ಲಿ ೧೦ ಕುಟುಂಬಗಳು ಹೆಂಚಿನ ಮನೆಗಳಲ್ಲಿ, ೮ ಕುಟುಂಬಗಳು ತಗಡಿನ ಮನೆಗಳಲ್ಲಿ, ೩೦ ಕುಟುಂಬಗಳು, ಜನತಾ ಸರ್ಕಾರ ನಿರ್ಮಿಸಿದ ಮನೆಗಳಲ್ಲಿ, ೪ ಕುಟುಂಬಗಳು ಆರ್.ಸಿ.ಸಿ. ಮನೆಗಳಲ್ಲಿ ವಾಸವಾಗಿದ್ದಾರೆ. ದುಡಿಯುವವರ ಸಂಖ್ಯೆ ನಾಲ್ಕು ವರ್ಗಗಳಲ್ಲಿ ಮೂರು ಜನ ಸದಸ್ಯರಿದ್ದಾರೆ. ಅವರ ಆರ್ಥಿಕ ಮತ್ತು ಸಾಮಾಜಿಕ ಮಟ್ಟವನ್ನು ಅವರು ವಾಸಿಸುವ ಮನೆಗಳನ್ನಾಧರಿಸಿ ಪರಿಗಣಿಸಬಹುದಾಗಿದೆ. ನಾಲ್ಕು ವರ್ಗಗಳಲ್ಲಿ ಜನತಾ, ಇಂದಿರಾ ಅವಾಸ್ ಮನೆಗಳಲ್ಲಿ ವಾಸವಾಗಿದ್ದಾರೆ.

### ೧. ಆಸ್ತಿಗಳು

ಗ್ರಾಮೀಣ ನಿವಾಸಿಗಳು ತಮ್ಮದೇ ಆದ ಆಸ್ತಿಯನ್ನು ಹೊಂದಿರುತ್ತಾರೆ. ಸಾಮಾನ್ಯವಾಗಿ ಕೃಷಿ ಚಟುವಟಿಕೆಗಳಿಗೆ ಬೇಕಾದ ಕೃಷಿ ಉಪಕರಣಗಳು, ದನಕರುಗಳು ಹಾಗೆಯೇ ಮನೆಯಲ್ಲಿ ಉಪಯುಕ್ತ ವಸ್ತುಗಳಾದ ಟಿ.ವಿ, ಸೈಕಲ್ ಹಾಗೂ ಕುರಿ, ಕೋಳಿ, ಆಡು ಇತ್ಯಾದಿಗಳನ್ನು ಹೊಂದಿರುತ್ತಾರೆ.

ಪಟ್ಟಿ ೨

ವಿವಿಧ ವರ್ಗಗಳ ಸರಾಸರಿ ಆಸ್ತಿಯ ಮೌಲ್ಯ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೩೮೦೦ | ೩೦೦೦೦ | ೨೬೨೦೦ | ೬೮೯ |
| ೦೨. | ಕರಕುಶಲ/ಸಣ್ಣ ಉದ್ದಿಮೆದಾರರು | ೨೦ | ೩೦೦೦ | ೨೦೦೦೦ | ೧೭೦೦೦ | ೫೬೬ |
| ೦೩. | ಭೂರಹಿತ ಕಾರ್ಮಿಕರು | ೧೦ | ೧೦೦೦ | ೧೯೦೦೦ | ೧೮೦೦೦ | ೧೮೦೦ |
| ೦೪. | ಗ್ರಾಮೀಣ ವ್ಯಾಪಾರಿಗಳು | ೨೦ | ೩೫೦೦ | ೨೯೦೦೦ | ೨೫೫೦೦ | ೭.೨೮ |
| | | ೯೦ | ೨೮೨೫ | ೨೪೫೦೦ | ೨೧೬೭೫ | ೭೬೭ |

ಮೇಲಿನ ಪಟ್ಟಿಯಲ್ಲಿ ೯೦ ಕುಟುಂಬಗಳ ಸರಾಸರಿ ಆಸ್ತಿಯ ಮೌಲ್ಯವನ್ನು ನೋಡಬಹುದಾಗಿದೆ. ನಾಲ್ಕು ವರ್ಗಗಳಲ್ಲಿ ಭೂ ರಹಿತ ಕಾರ್ಮಿಕರು ಕಡಿಮೆ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಇನ್ನುಳಿದ ೩ ವರ್ಗಗಳು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಭೂ ರಹಿತ ಕಾರ್ಮಿಕರನ್ನು ಹೊರತುಪಡಿಸಿ ಉಳಿದ ವರ್ಗಗಳ ಆಸ್ತಿಗಳು ಗ್ರಾಮೀಣ ಬ್ಯಾಂಕ್ ಸಾಲದ ಪೂರ್ವದಲ್ಲಿ ಹೆಚ್ಚುವರಿಯಾಗಿದ್ದು, ಆದರೆ ಗ್ರಾಮೀಣ ಬ್ಯಾಂಕ್‌ನ ಸಾಲದ ನಂತರದಲ್ಲಿ ನಾಲ್ಕು ವರ್ಗಗಳಲ್ಲಿ ಸರಾಸರಿಯಾಗಿ ೨೧,೬೭೫ ರೂಗಷ್ಟು ಆಸ್ತಿಯು ಅಧಿಕವಾಗಿದ್ದು ಅದು ಪ್ರತಿಶತ ೭೬೭ರಷ್ಟಾಗಿದೆ ಎಂಬುದನ್ನು ಪಟ್ಟಿ ೨ರಲ್ಲಿ ಕಾಣಬಹುದು.

### ೨. ಭೂ ಹಿಡುವಳಿ

ಗ್ರಾಮೀಣ ನಿವಾಸಿಗಳ ಜೀವನಾಧಾರಿತ ವೃತ್ತಿಯೆಂದರೆ ಕೃಷಿ. ಕೃಷಿಯು ಸಂಪೂರ್ಣವಾಗಿ ನೀರಾವರಿಯಾಶ್ರಿತವಾಗಿದೆ. ಭೂ ಹಿಡುವಳಿಯನ್ನು ಸಾಮಾನ್ಯವಾಗಿ ಎರಡುವರ್ಗಗಳಲ್ಲಿ ಕಾಣಬಹುದು. ಸಣ್ಣ, ಅತಿಸಣ್ಣ ರೈತರು, ಗ್ರಾಮೀಣ ವ್ಯಾಪಾರಿಗಳು ತಮ್ಮನ್ನು ಸಾಗುವಳಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಗ್ರಾಮೀಣ ಬ್ಯಾಂಕಿನ ಅಸ್ತಿತ್ವದ ಪೂರ್ವದಲ್ಲಿ ಭೂ ಹಿಡುವಳಿಯು ೨.೧೫ ಎಕರೆ ಇದ್ದುದು, ಸಾಲದ

ನಂತರದಲ್ಲಿ ಸರಾಸರಿ ೪.೫ ಎಕರೆ ಪ್ರದೇಶಕ್ಕೆ ವಿಸ್ತರಿಸಿಕೊಂಡಿದ್ದಾರೆ. ಇಲ್ಲಿನ ಫಲಾನುಭವಿಗಳು ನೀರಾವರಿ ಪ್ರದೇಶವನ್ನು ಹೊಂದಿರುವುದರಿಂದ ವರಮಾನವು ಸುಧಾರಿಸಿದೆ. ಹಾಗಾಗಿ ತಮ್ಮ ಆಸ್ತಿ ವಿಸ್ತರಿಸಿಕೊಂಡಿರುವುದನ್ನು ಪಟ್ಟಿ ೩ರ ಮೂಲಕ ಕಾಣಬಹುದು.

**ಪಟ್ಟಿ ೩**

**ಸರಾಸರಿ ಭೂ ಹಿಡುವಳಿಯ ಗಾತ್ರ**

ಎಕರೆಗಳಲ್ಲಿ

| ಕ್ರಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಹಿಡುವಳಿ ಸಾಲದ ಪೂರ್ವ | ಹಿಡುವಳಿ ಸಾಲದ ನಂತರ | ಹಿಡುವಳಿ ಹೆಚ್ಚಳ | ಶೇಕಡವಾರು ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೨.೩ | ೫.೦ | ೨.೭ | ೧೧೭ |
| ೦೨ | ಗ್ರಾಮೀಣ ವ್ಯಾಪಾರಿಗಳು | ೨೦ | ೨.೦ | ೪.೦ | ೨.೦ | ೧೦೦ |
| | | ೬೦ | ೨.೧೫ | ೪.೫ | ೨.೩೫ | ೧೦೯ |

ದರೋಜಿಯು ನೀರಾವರಿ ಪ್ರದೇಶವಾಗಿದ್ದರಿಂದ, ಇಲ್ಲಿ ಭೂಮಿಯ ಬೆಳೆಗಳು ಅತ್ಯಧಿಕವಾಗಿದೆ. ವಾರ್ಷಿಕವಾಗಿ ಎರಡು ಬೆಳೆಯನ್ನು ಬೆಳೆಯುತ್ತಿದ್ದು, ಅವರ ವರಮಾನ ಸುಧಾರಿಸಿದ್ದರಿಂದ ಹಿಡುವಳಿಯು ಸರಾಸರಿಯಾಗಿ ೨.೩೫ರಷ್ಟು ಎಕರೆ ಅಧಿಕವಾಗಿದ್ದು, ಪ್ರತಿಶತವಾರು ೧೦೯ರಷ್ಟು ಅಧಿಕವಾಗಿದೆ.

**ಕೃಷಿ ಹೂಡುವಳಿ ವೆಚ್ಚ**

ಕೃಷಿಕರ ಹೂಡುವಳಿ ವೆಚ್ಚವು ಭೂಮಿಯನ್ನು ಹದಮಾಡವುದರಿಂದ, ಮಾರುಕಟ್ಟೆಗೆ ಸಾಗಿಸುವವರೆಗೆ ವಿವಿಧ ಹಂತಗಳ ವೆಚ್ಚಗಳನ್ನು ಒಳಗೊಂಡಿದ್ದಾರೆ. ಅವುಗಳನ್ನು ಮೂರುಹಂತದಲ್ಲಿ ಕಾಣಬಹುದು.

ಮೊದಲನೆಯದಾಗಿ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳ ಮೇಲಿನ ವೆಚ್ಚ.
ಎರಡನೆಯದಾಗಿ ಕೃಷಿ ಕಾರ್ಮಿಕರ ಕೂಲಿ ಮತ್ತು ಜಾನುವಾರುಗಳ ನಿರ್ವಹಣಾ ವೆಚ್ಚ.
ಕೊನೆಯದಾಗಿ ದಾನ್ಯಗಳನ್ನು ಕಟಾವು, ಸಾಗಣೆ, ಒಕ್ಕುವುದು, ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳನ್ನು ಹೊಂದಿರುತ್ತಾರೆ.

ಈ ಪ್ರದೇಶದಲ್ಲಿನ ೬೦ ಕೃಷಿ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಕಡಿಮೆ ಪ್ರಮಾಣದ ಪಿಜಿಬಿ ಸಾಲದ ಪೂರ್ವದಲ್ಲಿ ಉಪಯೋಗಿಸುತ್ತಿದ್ದರು. ಆದರೆ ಬ್ಯಾಂಕ್‌ನ ಸಾಲದ ನಂತರದಲ್ಲಿ ಅಧಿಕ ಇಳುವರಿ ಕೊಡುವ ಭತ್ತ ಮತ್ತು ಕಬ್ಬಿನ ತಳಿಗಳನ್ನು ರಾಸಾಯನಿಕ ಗೊಬ್ಬರಗಳನ್ನು ಮತ್ತು ಬೆಳೆಗಳಿಗೆ ಕ್ರಿಮಿನಾಶಕಗಳನ್ನು ಬಳಸಲಾರಂಭಿಸಿದರು. ಎರಡನೆ ಹಂತದಲ್ಲಿ ಭತ್ತವನ್ನು ನಾಟಿ ಮಾಡಿದ ೧೫ ರಿಂದ ೪೦ ದಿನಗಳ ಒಳಗಾಗಿ ಅದರಲ್ಲಿನ ಕಳೆಯನ್ನು ನಾಶಪಡಿಸಲು ಕೃಷಿಕಾರ್ಮಿಕರನ್ನು ನೇಮಿಸಿಕೊಳ್ಳುತ್ತಾರೆ. ಇತ್ತೀಚಿನ ದಿನಗಳಲ್ಲಿ ಕೂಲಿಯ ಪ್ರಮಾಣವು

ದಿನಕ್ಕೆ ೧೦೦ ರಿಂದ ೧೨೦ ರೂಗಳಾಗಿದೆ. ಈ ಮೊದಲು ಕೂಲಿಯ ಪ್ರಮಾಣವು ಕಡಿಮೆ ಇತ್ತು. ಏಕೆಂದರೆ ಈ ತಾಲೂಕಿನಲ್ಲಿ ಬೃಹತ್ ಪ್ರಮಾಣದ ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಕೃಷಿ ಕಾರ್ಮಿಕರು ದೊರೆಯುವ ಪ್ರಮಾಣವು ಕಡಿಮೆಯಾಗಿದೆ. ಹಾಗಾಗಿ ಕೃಷಿ ಕೂಲಿಯ ಪ್ರಮಾಣವು ಅತ್ಯಧಿಕವಾಗಿದೆ.

೬೦ ಕುಟುಂಬಗಳಲ್ಲಿ ೨೫ ಕುಟುಂಬಗಳು ಸ್ವಂತ ಎತ್ತುಗಳನ್ನು ಹೊಂದಿರುತ್ತಾರೆ. ಇನ್ನುಳಿದ ೩೫ ಕುಟುಂಬಗಳು ಟ್ರಾಕ್ಟರ್ ಸಹಾಯದಿಂದ ಭೂಮಿಯನ್ನು ಹದಗೊಳಿಸಿಕೊಳ್ಳುತ್ತಾರೆ. ಹಾಗೆಯೇ ೩೫ ಕುಟುಂಬಗಳು ತಮ್ಮ ಭೂಮಿಯನ್ನು ಹದಗೊಳಿಸಲು ಟ್ರಾಕ್ಟರ್ ಬಳಸಲಾರಂಭಿಸಿದ್ದರಿಂದ ಅದರ ಮೇಲಿನ ಬಾಡಿಗೆಯ ವೆಚ್ಚವನ್ನು ಭರಿಸಬೇಕಾಗುತ್ತದೆ. ಇಲ್ಲಿನ ಕೃಷಿಕರು ಎತ್ತುಗಳ ನಿರ್ವಹಣೆ ಮತ್ತು ಟ್ರಾಕ್ಟರ್ ಮೇಲಿನ ಬಾಡಿಗೆಯನ್ನು ನಿರ್ವಹಿಸಬೇಕಾದುದು ಅನಿವಾರ್ಯವಾಗುತ್ತದೆ. ಇತ್ತೀಚೆಗೆ ಇವುಗಳ ವೆಚ್ಚವು ಕೂಡ ಅಧಿಕವಾಗಿರುವುದನ್ನು ಕಾಣಬಹುದು.

ಕೊನೆಯದಾಗಿ ಕೃಷಿಕರು ಭತ್ತನಾಟಿ ಮಾಡಿದ ನಾಲ್ಕು ತಿಂಗಳಿಗೆ ಕೊಯ್ಯುವ ಹಂತಕ್ಕೆ ಬರುತ್ತದೆ. ಇಲ್ಲಿ ಬೆಳೆಕೊಯ್ಯುವ ಯಂತ್ರದ ಸಹಾಯದಿಂದ ಬೆಳೆಯನ್ನು ಕಟಾವು ಮಾಡಿಸುತ್ತಾರೆ. ಪ್ರತಿ ಎಕರೆಗೆ ೧೮೦೦ರೂಗಳಿಂದ ೨೦೦೦ರೂಗಳವರೆಗೆ ಹಣವನ್ನು ನೀಡಬೇಕಾಗುತ್ತದೆ. ಧಾನ್ಯಗಳನ್ನು ಟ್ರಾಕ್ಟರ್ ಮೂಲಕ ಮನೆಗೆ ಮತ್ತು ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳಿಗೆ ಒಳಗಾಗಬೇಕಾಗುತ್ತದೆ. ಹೀಗೆ ರೈತರು ಮೂರುಹಂತದ ವೆಚ್ಚಗಳಿಗೆ ಒಳಗಾಗಬೇಕಾಗುತ್ತದೆ. ವೆಚ್ಚವು ಅವರು ಹೊಂದಿರುವ ಭೂಮಿಯ ಪ್ರಮಾಣವನ್ನು ಅವಲಂಬಿಸಿದೆ. ಈ ಕೃಷಿ ಚಟುವಟಿಕೆಗಳಲ್ಲಿ ೪೦ ಕುಟುಂಬಗಳು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡರೆ ೨೦ ಕುಟುಂಬಗಳು ತಮ್ಮ ವ್ಯಾಪಾರದ ಜೊತೆಗೆ ಕೃಷಿಯಲ್ಲಿ ಭಾಗಶಃವಾಗಿ ತೊಡಗಿಸಿಕೊಂಡಿದ್ದಾರೆ.

೬೦ ಕುಟುಂಬಗಳು ಮೂರು ಹಂತದ ಸರಾಸರಿ ವೆಚ್ಚಗಳನ್ನೊಳಗೊಂಡಿದ್ದಾರೆ. ಪ್ರಗತಿ ಗ್ರಾಮೀಣ ಬ್ಯಾಂಕಿನ ಸಾಲದ ಪೂರ್ವದಲ್ಲಿ ಸರಾಸರಿ ೬೫೦೦ ರೂಪಾಯಿಗಳ ವೆಚ್ಚವನ್ನು ಒಳಗೊಂಡಿರುತ್ತಾರೆ. ಆದರೆ ಬ್ಯಾಂಕು ಸಾಲದ ನಂತರ ಇವರ ಸರಾಸರಿ ವೆಚ್ಚವು ೪೩೫೨೩ ರೂಪಾಯಿಗಳಷ್ಟು ಅಧಿಕವಾಗಿದೆ. ನಿವ್ವಳ ವೆಚ್ಚದ ಹೆಚ್ಚಳವು ೩೪೬೬೫ ರೂಪಾಯಿಗಳಾಗಿದ್ದು ಅದು ಪ್ರತಿಶತ ೪೬.೩ರಷ್ಟು ಅಧಿಕವಾಗಿರುವುದನ್ನು ಪಟ್ಟಿ ೪ರಲ್ಲಿ ಕಾಣಬಹುದಾಗಿದೆ. ದರೋಜಿ ಮತ್ತು ಹೊಸ ದರೋಜಿಯಲ್ಲಿನ ಟಿಜಿಬ್ಯಾಂಕ ಶಾಖೆಯ ವ್ಯಾಪ್ತಿಯಲ್ಲಿನ ಫಲಾನುಭವಿಗಳನ್ನು ಭೇಟಿ ಮಾಡಿದಾಗ, ಅವರೆಲ್ಲರೂ ಬೆಳೆಸಾಲವನ್ನು ಕಿಸಾನ್ ಕ್ರೆಡಿಟ್ ಕಾರ್ಡುಗಳ ಮೂಲಕ ಪಡೆದಿದ್ದಾರೆ. ಇವರಿಗೆ ಬ್ಯಾಂಕು ಕನಿಷ್ಠ ೧೮,೦೦೦ರೂಪಾಯಿಗಳಿಂದ ಗರಿಷ್ಠ ೧ ಲಕ್ಷ ರೂಪಾಯಿಗಳವರೆಗೆ ಸಾಲವನ್ನು ಮಂಜೂರು ಮಾಡಿದೆ.

ಪಟ್ಟಿ ೪

ಹೂಡುವಳಿ ವೆಚ್ಚ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೧೦೦೦೦ | ೪೮೫೫೦ | ೩೮೫೫೦ | ೩೮೫ |
| ೦೨. | ಗ್ರಾಮೀಣ ವ್ಯಾಪಾರಿಗಳು | ೨೦ | ೫೦೦೦ | ೩೮೫೮೦ | ೩೧೦೦೦ | ೪೧೩ |
| | | ೬೦ | ೭೫೦೦ | ೪೩೫೨೫ | ೩೪೭೭೫ | ೪೬೩.೬ |

ಈ ಹಿಂದೆ ಬ್ಯಾಂಕುಗಳು ರೈತರ ಬೆಳೆ ಸಾಲಕ್ಕೆ ಪ್ರತಿಶತ ೧೧.೫೦ ವಾರ್ಷಿಕವಾಗಿ ೫೦,೦೦೦ರೂಗಳಿಗೂ ಮೇಲ್ಪಟ್ಟು ಪ್ರತಿಶತ ೧೨ರಷ್ಟು ಬಡ್ಡಿಯನ್ನು ವಿದಿಸುತ್ತಿದ್ದರು. ಆದರೆ ೨೦೦೭ರಲ್ಲಿ ಬ್ಯಾಂಕ್ ಬಡ್ಡಿಯ ಧರಗಳು ಪ್ರತಿಶತ ೬ ರಿಂದ ೭ರಷ್ಟು ಮಾತ್ರವಿದೆ. ಹಾಗಾಗಿ ಬ್ಯಾಂಕನಿಂದ ಸಾಲ ಪಡೆಯುವವರ ಸಂಖ್ಯೆ ಅಧಿಕವಾಗಿದ್ದು, ಬೀಜ ಗೊಬ್ಬರ ಕ್ರಿಮಿನಾಶಕಗಳು, ಕಳೆಕೂಲಿ, ಧಾನ್ಯಗಳನ್ನು ಬೇರ್ಪಡಿಸುವ ಯಂತ್ರಗಳ ವೆಚ್ಚಗಳು ಅತ್ಯಧಿಕವಾಗಿರುವುದರಿಂದ ಹೂಡುವಳಿ ವೆಚ್ಚವು ಕೂಡ ಅಧಿಕವಾಗಿರುವುದನ್ನು ಕಾಣಬಹುದು.

## ೪. ಉತ್ಪಾದನೆ

ಮುಂಗಾರು ಮತ್ತು ಹಿಂಗಾರು ಬೆಳೆಗಳ ಉತ್ಪಾದನೆಯು ವರ್ಷದ ಸಮಗ್ರ ಉತ್ಪಾದನೆಯಾಗುತ್ತದೆ. (ಬ್ಯಾಂಕು ಸಾಲದ ಪೂರ್ವ ಮತ್ತು ನಂತರ) ಈ ಕುಟುಂಬಗಳು ಹೆಚ್ಚಾಗಿ ಭತ್ತವನ್ನು ಅಧಿಕ ಪ್ರಮಾಣದಲ್ಲಿ ವಾಣಿಜ್ಯ ಬೆಳೆಯಾಗಿ ಮತ್ತು ಆಹಾರಕ್ಕೋಸ್ಕರವಾಗಿ ಬೆಳೆಯುತ್ತಾರೆ.

ಕೃಷಿಕರು ಬ್ಯಾಂಕು ಅಸ್ತಿತ್ವದ ಪೂರ್ವದಲ್ಲಿ ಹೆಚ್ಚಾಗಿ ಸಾಲವನ್ನು ಮಧ್ಯವರ್ತಿಗಳಿಂದ, ಸಾಹುಕಾರರಿಂದ, ಸಹಕಾರ ಸಂಘಗಳಿಂದ ಮತ್ತು ಜಮೀನ್ದಾರರಿಂದ ಪಡೆಯುತ್ತಿದ್ದರು. ಆ ಸಂದರ್ಭದಲ್ಲಿ ಆ ಪ್ರದೇಶದಲ್ಲಿ ಹಣಕಾಸಿನ ವಹಿವಾಟನ್ನು ನಿರ್ವಹಿಸುವವರು ಅವರೇ ಆಗಿದ್ದರು. ಬ್ಯಾಂಕು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಇವರ ವಹಿವಾಟಿನ ಪ್ರಮಾಣ ಕಡಿಮೆಯಾಗಿದೆ. ಈ ಮೊದಲು ಕೃಷಿಕರು ಸಂಪ್ರದಾಯ ಬೇಸಾಯವನ್ನು ಅನುಸರಿಸುತ್ತಿದ್ದರು. ಬ್ಯಾಂಕ್ ಸಾಲದ ನಂತರದಲ್ಲಿ ಆಧುನಿಕ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದರು. ಇದರಿಂದಾಗಿ ಇವರ ಎಕರೆವಾರು ಉತ್ಪಾದನೆ ೩೫ ರಿಂದ ೪೦ ಚೀಲಗಳವರೆಗೆ ಭತ್ತವನ್ನು ಬೆಳೆಯುತ್ತಾರೆ. ಇವರ ಜೊತೆಗೆ ಕಬ್ಬು ಮತ್ತು ಮೆಣಸಿನಕಾಯಿ ಹಾಗೂ ಮೆಕ್ಕೆಜೋಳವನ್ನು ಬೆಳೆಯುತ್ತಾರೆ. ಇವರು ವಾರ್ಷಿಕವಾಗಿ ೨ ಬೆಳೆಯನ್ನು ಬೆಳೆಯುವುದರಿಂದ ಉತ್ಪಾದನೆಯನ್ನು ಹೆಚ್ಚಿಸಿ ವರಮಾನವನ್ನು ಸುಧಾರಿಸಿಕೊಂಡಿದ್ದಾರೆ.

ಈ ಪ್ರದೇಶವು ನೀರಾವರಿಯನ್ನು ಹೊಂದಿದ್ದು ಬ್ಯಾಂಕ್ ಅಸ್ತಿತ್ವಕ್ಕೆ ಬಂದ ನಂತರ ವರಮಾನ ಮತ್ತು ಉತ್ಪಾದನಾ ವೆಚ್ಚಗಳೆರಡೂ ಅಧಿಕವಾಗಿದೆ. ೪೦ ಕೃಷಿ ಕುಟುಂಬಗಳ ವರಮಾನವು ಇನ್ನಿತರ ಕುಟುಂಬಗಳ ವರಮಾನಕ್ಕಿಂತ ಅಧಿಕವಾಗಿದೆ. ಕಾರಣವೆಂದರೆ ಸಣ್ಣ/ಅತಿಸಣ್ಣ ರೈತರು ತಮ್ಮನ್ನು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ವ್ಯಾಪಾರಸ್ಥರಿಗೆ ವ್ಯಾಪಾರವು ಮುಖ್ಯವಾಗಿರುವುದರಿಂದ ಕೃಷಿ ಚಟುವಟಿಕೆಗಳಿಗೆ ಗಮನ ಕಡಿಮೆಯಾಗಿರುವುದರಿಂದ ಉತ್ಪಾದನೆ ಕಡಿಮೆಯಾಗಿದೆ. ಈ ಎರಡು ವರ್ಗಗಳು ಉತ್ಪಾದನೆ ಮಾಡಿದ ಬೆಳೆಗಳನ್ನು ವಿವಿಧ ಮಾರುಕಟ್ಟೆಯಲ್ಲಿ ಉತ್ತಮ ಬೆಲೆಗೆ ಮಾರಾಟಮಾಡಿರುತ್ತಾರೆ. ಆ ಮೂಲಕ ತಮ್ಮ ವರಮಾನ ಹೆಚ್ಚಿಸಿಕೊಳ್ಳುವಲ್ಲಿ ಸಫಲರಾಗಿದ್ದಾರೆ.

**ಪಟ್ಟಿ ೫**

**ಉತ್ಪಾದನೆ**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಬ್ಯಾಂಕ್ ಸಾಲದ ಪೂರ್ವ | | ಬ್ಯಾಂಕ್ ಸಾಲದ ನಂತರ | | ನಿವ್ವಳ ಹೆಚ್ಚಳ | |
|---|---|---|---|---|---|---|---|---|
| | | | ಪ್ರಮಾಣ ಕ್ವಿ | ಮೌಲ್ಯ ರೂ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂ |
| ೧ | ಸಣ್ಣ/ಅತಿಸಣ್ಣ ರೈತರು | ೪೦ | ೫೦ | ೧೪೦೦೦ | ೧೪೦ | ೧೨೮೦೦೦ | ೯೦ (೧೮೦) | ೧೧೪೦೦೦ (೮೧೪) |
| ೨ | ಗ್ರಾಮೀಣ ವ್ಯಾಪಾರಸ್ಥರು | ೨೦ | ೪೦ | ೧೨೦೦ | ೧೦೦ | ೮೦೦೦ | ೬೦ (೧೫೦) | ೬೮೦೦ (೬೧೪) |
| | | ೬೦ | ೪೫ | ೧೨೬೦೦ | ೧೨೦ | ೧೦೪೦೦೦ | ೭೫ (೧೬೬) | ೯೧೪೦೦ (೭೨೫) |

೬೦ ಕುಟುಂಬಗಳ ಉತ್ಪಾದನೆಯು ಬ್ಯಾಂಕು ಸಾಲದ ಪೂರ್ವದಲ್ಲಿ ೪೫ ಕ್ವಿಂಟಾಲ್‌ನಷ್ಟಿದ್ದರೆ, ೨೦೦೬ರಲ್ಲಿ ಬ್ಯಾಂಕ್ ಸಾಲದ ನಂತರದಲ್ಲಿ ೧೨೦ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ. ನಿವ್ವಳ ಉತ್ಪಾದನೆಯು ೭೫ ಕ್ವಿಂಟಾಲ್ ಅಧಿಕವಾಗಿದ್ದು, ಅದರ ಪ್ರತಿಶತ ಮೌಲ್ಯ ೧೬೬ರಷ್ಟಾಗಿದೆ. ಹಾಗೆಯೇ ಆ ಉತ್ಪಾದನೆಯ ಮೌಲ್ಯವು ೧೨,೬೦೦ರೂಗಳಿಂದ ೧.೦೪೦೦೦ರೂಗಳಷ್ಟು ಅಧಿಕವಾಗಿದ್ದು ಅದರ ನಿವ್ವಳ ಮೌಲ್ಯ ೯೧೪೦೦ರೂಗಳಿಗೆ ಪ್ರತಿಶತ ಮೌಲ್ಯವು ೭೨೫ರಷ್ಟು ಅಧಿಕವಾಗಿದೆ. ಸಣ್ಣ, ಅತಿಸಣ್ಣ ರೈತರ ಉತ್ಪಾದನೆಯು ೫೦ ಕ್ವಿಂಟಾಲ್‌ನಿಂದ ೧೪೦ ಕ್ವಿಂಟಾಲ್‌ಗೆ ಅಧಿಕವಾಗಿದೆ. ಹಾಗೆಯೇ ಗ್ರಾಮೀಣ ವ್ಯಾಪಾರಿಗಳ ಉತ್ಪಾದನೆಯ ೪೦ ಕ್ವಿಂಟಾಲ್‌ನಿಂದ ೧೦೦ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ.

ಕೃಷಿ ವರಮಾನ ಮತ್ತು ವೆಚ್ಚಗಳೆರಡೂ ಬ್ಯಾಂಕ್‌ಸಾಲದ ನಂತರದಲ್ಲಿ ಅಧಿಕವಾಗಿದೆ. ಕೃಷಿ ವರಮಾನವು ೧೨,೬೦೦ರೂಗಳಿಂದ ೧,೦೪೦೦೦ರೂಗಳಿಗೆ ಹೆಚ್ಚಾಗಿದೆ. ವೆಚ್ಚವು ಕೂಡ ೭೫೦೦೦ರೂಗಳಿಂದ ೪೩,೫೨೫ರೂಗಳಿಗೆ ಹೆಚ್ಚಾಗಿದೆ. ವರಮಾನವು ಪ್ರತಿಶತ ೭೨೫ರಷ್ಟು ಅಧಿಕವಾದರೆ, ವೆಚ್ಚವು ಪ್ರತಿಶತ ೪೬.೩ರಷ್ಟು ಹೆಚ್ಚಾಗಿದೆ. ವೆಚ್ಚಕ್ಕಿಂತ ವರಮಾನವು ಪ್ರತಿಶತ ೨೬.೨ರಷ್ಟು ಅಧಿಕವಾಗಿದೆ. ಕಳೆದ ೩೦

ವರ್ಷಗಳಲ್ಲಿ ವರಮಾನ ಮತ್ತು ವೆಚ್ಚಗಳೆರಡೂ ಅಧಿಕವಾಗಿದೆ. ಆದರೆ ವರಮಾನವು ವೆಚ್ಚಕ್ಕಿಂತ ಅಧಿಕವಾಗಿರುವುದು ಏಕೆಂದರೆ ಈ ಪ್ರದೇಶವು ಸಂಪೂರ್ಣವಾಗಿ ನೀರಾವರಿಯಾಗಿರುವುದರಿಂದ ಹೂಡುವಳಿಗಿಂತ ಹುಟ್ಟುವಳಿಯು ಪ್ರತಿಶತ ೨೬.೨ರಷ್ಟು ಅಧಿಕವಾಗಿದೆ. ಸಾಲ ಪಡೆಯುವ ಹಾಗೂ ಹಿಂದಿರುಗಿಸುವ ವ್ಯವಸ್ಥೆ ಸರಿಯಾದ ರೀತಿಯಲ್ಲಿದ್ದು, ಜೀವನಮಟ್ಟ ಸುಧಾರಿಸಲಿಕ್ಕೆ ಕಾರಣವಾಗಿದೆ ಎಂದು ಮನಪೂರ್ವಕವಾಗಿ ತಿಳಿಸಿದ್ದಾರೆ.

**೫. ವಿವಿಧ ವಲಯಗಳ ವರಮಾನ**

ತುಂಗಭದ್ರಾ ಗ್ರಾಮೀಣ ಬ್ಯಾಂಕು ಸಮಾಜದಲ್ಲಿನ ದುರ್ಬಲ ವರ್ಗದವರ ಆದ್ಯತಾ ವಲಯದವರ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಇನ್ನು ಮುಂತಾದವರ ಮೇಲೆ ಹೇಗೆ ಪ್ರಭಾವ ಬೀರಿದೆ ಹಾಗೂ ವರಮಾನ ಸುಧಾರಣೆಗೆ ಹೇಗೆ ಪ್ರಯತ್ನಿಸಿದೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.(ಆದ್ಯತಾ ವಲಯವೆಂದರೆ ಸಣ್ಣ/ಅತಿಸಣ್ಣ ರೈತರು, ಭೂರಹಿತ ಕಾರ್ಮಿಕರು, ಸಣ್ಣ ವ್ಯಾಪಾರಸ್ಥರು, ಕರಕುಶಲ ಕರ್ಮಿಗಳು).

೧. ಕೃಷಿ: ಬ್ಯಾಂಕ್ ಸಾಲದ ಪೂರ್ವದಲ್ಲಿ ಕೃಷಿ ಚಟುವಟಿಕೆಗಳಿಂದ ಬಂದ ವರಮಾನವು ೧೨,೬೦೦ರೂಗಳಾಗಿದ್ದು ಸಾಲದ ನಂತರದಲ್ಲಿ ೨೦೦೭ನೇ ಇಸ್ವಿಯ ಕೊನೆಗೆ ೧,೦೪೦೦೦ ರೂಪಾಯಿಗಳಿಗೆ ಅಧಿಕವಾಗಿದೆ. ಮತ್ತು ನಿವ್ವಳ ೯೧,೪೦೦ ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದು. ಬ್ಯಾಂಕ್ ಸಾಲವು ಕೃಷಿ ವಲಯದ ಮೇಲೆ ಪ್ರಭಾವ ಬೀರಿ ಅವರ ವರಮಾನ ಮತ್ತು ಜೀವನಮಟ್ಟವನ್ನು ಹೆಚ್ಚಿಸಿದೆ.

**೨. ಭೂರಹಿತ ಕಾರ್ಮಿಕರು**

ಇವರು ಗ್ರಾಮೀಣ ಪ್ರದೇಶದಲ್ಲಿ ಭೂರಹಿತರಾಗಿದ್ದು, ಕೃಷಿ ಕಾರ್ಮಿಕರಾಗಿ ತಮ್ಮ ಜೀವನ ನಿರ್ವಹಿಸುತ್ತಾರೆ. ಈ ಮೊದಲು ಕೃಷಿ ಕಾರ್ಮಿಕರಾಗಿ ಆಡು, ಕುರಿ ಇತ್ಯಾದಿಗಳನ್ನು ಸಾಕಿ ಅವುಗಳಿಂದ ಬಂದ ಉತ್ಪನ್ನದಿಂದ ಜೀವನ ನಿರ್ವಹಿಸುತ್ತಿದ್ದರು. ಸರ್ಕಾರದ ಕಾರ್ಯಕ್ರಮಗಳು ಮತ್ತು ಬ್ಯಾಂಕಿನ ಆದ್ಯತಾ ವಲಯದ ಪಟ್ಟಿಯಲ್ಲಿರುವಂತೆ ಅವರಿಗೆ ಬೇಕಾದ ಹಣಕಾಸಿನ ಸೌಲಭ್ಯವನ್ನು ಒದಗಿಸುವುದರ ಮೂಲಕ ಅವರ ವರಮಾನವನ್ನು ಸುಧಾರಿಸಲು ಯತ್ನಿಸಿದವು. ಈ ಶಾಖೆಯು ದರೋಜಿಯಲ್ಲಿರುವ ಭೂ ರಹಿತ ಕಾರ್ಮಿಕರನ್ನು ಗುರುತಿಸಿ ಅವರಿಗೆ ೨೦,೦೦೦ರೂಗಳವರೆಗೆ ವಿದೇಶಿ ಹಸು ಮತ್ತು ಎಮ್ಮೆಗಳಿಗೆ ಸಾಲವನ್ನು ವಿತರಿಸಲಾಗಿದೆ. ಇವರುಗಳು ೫೦೦೦ರೂಗಳ ಸಹಾಯಧನವನ್ನು ಪಡೆದಿದ್ದಾರೆ. ಇವರು ವಿದೇಶಿ ಹಸು/ಎಮ್ಮೆಗಳಿಂದ ೮ ರಿಂದ ೧೨ ಲೀಟರವರೆಗೆ ಹಾಲನ್ನು ಪಡೆಯುತ್ತಾರೆ. ಹೆಚ್ಚುವರಿ ಹಾಲನ್ನು ಮಾರಾಟ ಮಾಡುವುದರ ಜೊತೆಗೆ ಡೈರಿಗೆ ಹಾಲು ಹಾಕುವುದರ ಮೂಲಕ ತಮ್ಮ ವರಮಾನವನ್ನು ಪಡೆಯುತ್ತಾರೆ. ಫಲಾನುಭವಿಗಳು ಪ್ರತಿ ತಿಂಗಳಿಗೆ ೩೦೦೦ರೂಗಳ ವರಮಾನ ಪಡೆಯುತ್ತಾರೆ. ಇವರು ತಮ್ಮ ವರಮಾನವನ್ನು ೩೦೦೦ ರೂಗಳಿಂದ ೩೦,೦೦೦ರೂಗಳಿಗೂ ಹೆಚ್ಚಿಸಿಕೊಂಡಿದ್ದಾರೆ. ಹಸು,

ಎಮ್ಮೆ ನಿರ್ವಹಣೆಗೆ ೧೦೦೦ರೂ ಖರ್ಚಾದಾರೆ ಉಳಿದ ಹಣದಿಂದ ತಮ್ಮ ಜೀವನ ನಿರ್ವಹಣೆ ಸುಲಭ ಸಾಧ್ಯವಾಗುತ್ತಿದೆ ಎಂದಿದ್ದಾರೆ. ಬ್ಯಾಂಕ್‌ನ ಸಾಲವನ್ನು ಪ್ರತಿ ತಿಂಗಳು ಮರುಪಾವತಿಮಾಡಿಕೊಳ್ಳುತ್ತಾ ಹೋಗುತ್ತೇವೆ. ನಮಗೆ ಬೇಕಾದ ಹಾಗೆ ಬ್ಯಾಂಕು ಹಣಕಾಸಿನ ಸೌಲಭ್ಯವನ್ನು ಒದಗಿಸಿದೆಯಲ್ಲದೆ, ಸ್ವಯಂ ಉದ್ಯೋಗಕ್ಕೆ ದಾರಿ ಮಾಡಿಕೊಟ್ಟು ನಮ್ಮ ನಿರುದ್ಯೋಗವನ್ನು ನಿವಾರಿಸುವಲ್ಲಿ ಸಹಾಯಕವಾಗಿದೆ.

೧೦ ಭೂ ರಹಿತ ಕಾರ್ಮಿಕರನ್ನು ಸಮೀಕ್ಷಿಸಿದಾಗ ತಮಗೆ ಬ್ಯಾಂಕು ೨೦೦೫-೦೬ರಲ್ಲಿ ೨೦,೦೦ರೂಗಳ ಎಮ್ಮೆ/ಹಸುಗಳಿಗೆ ಸಾಲವನ್ನು ನೀಡಿತ್ತು. ಅದರಲ್ಲಿ ೫೦೦೦.೦೦ರೂಪಾಯಿಗಳ ಸಹಾಯಧನ ಪಡೆದಿದ್ದು, ಬ್ಯಾಂಕ್‌ನಿಂದ ಸಾಲ ಪಡೆದ ೨೦,೦೦೦ರೂಗಳಲ್ಲಿ ೫೦೦೦ರೂ ಧನಸಹಾಯವನ್ನು ಕಳೆದು ೧೫,೦೦೦ರೂಗಳನ್ನು ಮಾತ್ರ ಸಾಲ ಮರುಪಾವತಿ ಮಾಡುತ್ತಾ ಬಂದಿದ್ದೇವೆ. ಸಾಲವನ್ನು ಮರುಪಾವತಿ ಮಾಡುವುದು ಮತ್ತು ಹೊಸಸಾಲವನ್ನು ಪಡೆಯುವುದು ನಿರಂತರವಾಗಿದ್ದು, ತಮ್ಮ ಜೀವನ ಮಟ್ಟವು ಸುಧಾರಿಸಿದೆ ಎನ್ನುತ್ತಾರೆ.

**ಪಟ್ಟಿ ೬**

**ಭೂ ರಹಿತ ಕಾರ್ಮಿಕರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಭೂರಹಿತ ಕಾರ್ಮಿಕರು | ೧೦ | ೮೦೦ | ೩೦೦೦೦ | ೨೯೨೦೦ | ೩೬೫೦ |

ಪಿಜಿ ಬ್ಯಾಂಕು ಸಾಲದ ಪೂರ್ವದಲ್ಲಿ ಇವರ ವರಮಾನವು ಕಡಿಮೆ ಇತ್ತು. ಆದರೆ ಸಾಲ ಪಡೆದ ನಂತರದಲ್ಲಿ ಅವರ ವರಮಾನವು ೨೦೦೬ರ ಹೊತ್ತಿಗೆ ೩೦,೦೦೦ರೂಗಳಿಗೆ ಅಧಿಕವಾಗಿ. ನಿವ್ವಳ ಹೆಚ್ಚುವರಿ ವರಮಾನವು ೨೯,೦೦೦ರೂಪಾಯಿಗಳಾಗಿದ್ದು, ಅದರ ಪ್ರತಿಶತ ಪ್ರಮಾಣವು ೩೬೫೦ರಷ್ಟಾಗಿದೆ. ಇವರು ತಮ್ಮ ಹಸುಗಳ ನಿರ್ವಹಣಾ ವೆಚ್ಚವು ಪ್ರತಿ ತಿಂಗಳು ೧೦೦೦ರೂಗಳವರೆಗೆ ವೆಚ್ಚ ಮಾಡಬೇಕಾಗುತ್ತದೆ. ವಾರ್ಷಿಕವಾಗಿ ೧೨೦೦೦ರೂಗಳವರೆಗೆ ವೆಚ್ಚಮಾಡಬೇಕಾಗುತ್ತದೆ. ಜೀವನ ನಿರ್ವಹಣೆಗೆ ಏನೂ ತೊಂದರೆ ಇಲ್ಲ. ೨ ವರ್ಷಗಳಲ್ಲಿ ಸಾಲ ಮರುಪಾವತಿ ಮಾಡಿದರೆ ಹಸು ತಮ್ಮದೇ ಆಗುತ್ತದೆ. ಇದರಿಂದ ತಮ್ಮ ವರಮಾನವು ಅಧಿಕವಾಗುತ್ತದೆ. ಹಾಗೂ ನಮ್ಮ ನಿರುದ್ಯೋಗವನ್ನು ನಿವಾರಣೆ ಮಾಡಿದೆ, ಸಮಾಜದಲ್ಲಿ ನಮ್ಮನ್ನು ಇತರರು ಗುರುತಿಸುವಂತೆ ಬ್ಯಾಂಕ್ ಮಾಡಿದೆ ಎಂದು ಮನಪೂರ್ವಕವಾಗಿ ಹೇಳುತ್ತಾರೆ.

### ೩. ಕರಕುಶಲ ಕರ್ಮಿಗಳು/ಸಣ್ಣ ಉದ್ದಿಮೆದಾರರು

ಗ್ರಾಮೀಣ ಪ್ರದೇಶದಲ್ಲಿ ಅನಾದಿ ಕಾಲದಿಂದಲೂ ಸಂಪ್ರದಾಯಬದ್ಧವಾದ ಕೆಲವು ಗ್ರಾಮೀಣ ಗುಡಿ ಕೈಗಾರಿಕೆಗಳು ಇಂದು ನಶಿಸುತ್ತಾ ಬಂದಿವೆ. ಇವುಗಳಲ್ಲಿ ಕೆಲವೊಂದು ಕಸಬುಗಳು ಮಾತ್ರ ಉಳಿದಿವೆ.

ಇಂದು ಕಾಲಕ್ಕೆ ತಕ್ಕಂತೆ ಸಣ್ಣ ಉದ್ಯಮಗಳು ಬದಲಾಗಿವೆ. ಹೊಟೇಲ್, ಬೇಕರಿ, ವೆಲ್ಡಿಂಗ್ ಷಾಪ್, ಕೇಬಲನೆಟ್‌ವರ್ಕ, ಷಾಮಿಯಾನ, ಹಿಟ್ಟಿನ ಗಿರಣಿ, ಪಾಪ್‌ಕಾರನ್ ಇನ್ನೂ ಮುಂತಾದ ಕಸಬುಗಳು ಇಂದು ಗ್ರಾಮೀಣ ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದಿವೆ. ಇವರು ಆ ಮೂಲಕ ವರಮಾನವನ್ನು ಕಂಡುಕೊಂಡಿದ್ದಾರೆ. ಇವರು ತಮ್ಮ ವಸ್ತುಗಳ ಉತ್ಪಾದನೆಯಿಂದ ವರಮಾನವನ್ನು ಪಡೆಯುತ್ತಾರೆ. ಇವರ ವರಮಾನವು ಸಾಲದ ಪೂರ್ವದಲ್ಲಿ ೧೦೦೦ ರೂಗಳಿದ್ದು ಬ್ಯಾಂಕು ಅಸ್ತಿತ್ವದ ನಂತರದಲ್ಲಿ ಇವರ ಉತ್ಪನ್ನದಿಂದ ವರಮಾನವು ೪೦,೦೦೦ರೂಗಳಿಗೆ ಅಧಿಕವಾಗಿರುವುದನ್ನು ಕಾಣಬಹುದು. ಇವರುಗಳು ಪಿಜಿ ಬ್ಯಾಂಕ್‌ನಿಂದ ೨೦,೦೦೦ರೂಗಳಿಂದ ೫೦,೦೦೦ರೂಪಾಯಿಗಳವರೆಗೆ ಸಾಲವನ್ನು ಪಡೆದಿದ್ದು, ವರಮಾನವನ್ನು ಸುಧಾರಿಸಿಕೊಳ್ಳಲು ಪ್ರಯತ್ನಿಸಿದ್ದಾರೆ. ೨೦ ಫಲಾನುಭವಿಗಳನ್ನು ಭೇಟಿ ಮಾಡಿದಾಗ ಸಾಲದ ಪೂರ್ವದಲ್ಲಿ ತಮ್ಮ ಹಣಕಾಸಿನ ಪರಿಸ್ಥಿತಿ ಬಹಳಷ್ಟು ಕಷ್ಟವಿತ್ತು. ಹಣಕಾಸಿನ ನೆರವನ್ನು ಖಾಸಗಿ ಜಮೀನ್ದಾರರು ಇಲ್ಲವೆ ಲೇವಾದೇವಿಗಾರರಿಂದ ಪಡೆಯುತ್ತಿದ್ದರು. ಆದರೆ ಬ್ಯಾಂಕ್ ಸ್ಥಾಪನೆ ನಂತರದಲ್ಲಿ ಸಾಲ ಪಡೆದು ತಮ್ಮ ಉದ್ಯಮವನ್ನು ನಿರ್ವಹಿಸಿಕೊಂಡು ವರಮಾನ ಸುಧಾರಿಸಲು ಸಾಧ್ಯವಾಗಿದೆ. ಸಾಲವನ್ನು ನಿರಂತರವಾಗಿ ಕಾಲಕ್ಕೆ ತಕ್ಕಂತೆ ಮರುಪಾವತಿ ಮಾಡಿ ಬ್ಯಾಂಕಿನ ವಿಶ್ವಾಸಗಳಿಸಿದ್ದೇವೆ. ಸಾಲವನ್ನು ಪಡೆಯುವುದು ಕಷ್ಟಕರವಲ್ಲವೆಂದು ತಿಳಿಸಿದ್ದಾರೆ.

ಈ ವಿವಿಧ ಉದ್ಯಮದವರು ವಿವಿಧ ವಸ್ತುಗಳನ್ನು ಉತ್ಪಾದಿಸುತ್ತಾರೆ. ಹಾಗೂ ಗ್ರಾಮೀಣ ಪ್ರದೇಶದಲ್ಲಿನ ನಿರುದ್ಯೋಗವನ್ನು ಹೋಗಲಾಡಿಸಲು ಪ್ರಯತ್ನಿಸಿದ್ದಾರೆ. ಆದರೆ ಇವರೆಲ್ಲರ ಸರಾಸರಿ ವರಮಾನವು ವಾರ್ಷಿಕ ೪೦,೦೦೦ರೂಪಾಯಿಗಳಿಂಗತಲೂ ಅಧಿಕವಾಗಿದೆ ಎಂಬುದನ್ನು ಸಮೀಕ್ಷೆಯಿಂದ ಕಂಡುಕೊಳ್ಳಲಾಯಿತು. ಇದನ್ನು ಪಟ್ಟಿ ೭ರಲ್ಲಿ ಕಾಣಬಹುದು.

**ಪಟ್ಟಿ ೭**

**ಸಣ್ಣ ಉದ್ದಿಮೆದಾರರು .**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸ್ಣಾ ಉದ್ದಿಮೆದಾರರು/ ಕರಕುಶಲ ಕರ್ಮಿಗಳು | ೨೦ | ೧೦೦೦ | ೪೦೦೦೦ | ೩೯೦೦೦ | ೩೯೦೦ |

ಈ ಮೇಲಿನ ಪಟ್ಟಿಯನ್ನು ಗಮನಿಸಿದಾಗ ಕಾಲಕ್ಕೆ ತಕ್ಕಂತೆ ಉದ್ಯಮವನ್ನು ರೂಢಿಸಿಕೊಂಡು ತಮ್ಮ ವರಮಾನವನ್ನು ಬ್ಯಾಂಕ್‌ಸಹಕಾರದೊಂದಿಗೆ ೪೦,೦೦ರರೂಗಳವರೆಗೆ ಹೆಚ್ಚಿಸಿಕೊಂಡಿದ್ದಾರೆ. ನಿವ್ವಳ ಹೆಚ್ಚಳ ೩೯,೦೦೦ರೂಗಳೆಂದರೆ, ಅದರ ಪ್ರತಿಶತ ೩೯೦೦ರಷ್ಟು ಅಧಿಕವಾಗಿದೆ. ಅದುವಾರ್ಷಿಕವಾಗಿ ೧೩೦ರಷ್ಟು ಬೆಳವಣಿಗೆಯನ್ನು ೧೯೯೭-೨೦೦೭ ನಡುವಿನ ಸಾಲಾವಧಿಯಲ್ಲಿ ಕಾಣಬಹುದು.

### ೪. ಗ್ರಾಮೀಣ ವ್ಯಾಪಾರಿಗಳು

ಗ್ರಾಮೀಣ ಪ್ರದೇಶದಲ್ಲಿ ವ್ಯವಹಾರಗಳೆಂದರೆ ಪ್ರಸ್ತುತ ಸನ್ನಿವೇಶದಲ್ಲಿ ಕಿರಾಣಿ ಅಂಗಡಿ, ಹಾಲಿನ /ತರಕಾರಿ ವ್ಯಾಪಾರ, ಹೂವಿನ ವ್ಯಾಪಾರ, ಬಟ್ಟೆ ವ್ಯಾಪಾರ, ಪುಸ್ತಕ ವ್ಯಾಪಾರ, ಸೀಮೆಎಣ್ಣೆ ಇನ್ನೂ ಮುಂತಾದ ವ್ಯಾಪಾರಗಳು ನಡೆಯುತ್ತವೆ. ಇವರೆಲ್ಲರೂ ನಡೆಸುವ ವ್ಯವಹಾರವು ಸಂಪೂರ್ಣವಾಗಿ ಜನಪದರ ಜೀವನಾವಶ್ಯಕ ವಸ್ತುಗಳಿಗೆ ಸಂಬಂಧಿಸಿದೆ. ಇವರು ತಮ್ಮ ವ್ಯಾಪಾರವನ್ನು ಬ್ಯಾಂಕ್‌ಸಾಲದ ಪೂರ್ವದಲ್ಲಿ ಖಾಸಗಿ ಹಣಕಾಸು ಸಂಸ್ಥೆಗಳಿಂದ ಸಾಲ ತಂದು ತಮ್ಮ ವ್ಯವಹಾರವನ್ನು ನಡೆಸುತ್ತಿದ್ದರು. ಆದರೆ ಬ್ಯಾಂಕ್‌ಸಾಲದ ನಂತರ ಇವರ ವ್ಯವಹಾರವು ಸುಧಾರಿಸಿದೆ. ಏಕೆಂದರೆ ಬ್ಯಾಂಕಿನ ಬಡ್ಡಿಯಧರವು ಖಾಸಗಿಯವರ ಬಡ್ಡಿಯಧರಕ್ಕಿಂತ ಕಡಿಮೆ ಇರುತ್ತದೆ. ಇವರು ತಮಗೆ ಬೇಕಾದ ಸರಕುಗಳನ್ನು ಹತ್ತಿರದ ಪಟ್ಟಣದಿಂದ ತಂದು ಅವುಗಳ ಬೆಲೆಯನ್ನು ಪ್ರತಿಶತ ೨೦ ರಿಂದ ೨೫ರಷ್ಟು ಅಧಿಕಗೊಳಿಸಿಕೊಂಡು ಮಾರಾಟಮಾಡುತ್ತಾರೆ. ಬ್ಯಾಂಕ್‌ನಿಂದ ಸಾಲ ಪಡೆದು ನಿರಂತರವಾಗಿ ಅದರ ಸಂಪರ್ಕದಲ್ಲಿರುವುದರಿಂದ ತಮ್ಮ ವರಮಾನ ಸುಧಾರಿಸಿದೆ ಎನ್ನುತ್ತಾರೆ. ವಿವಿಧ ವ್ಯಾಪಾರಿಗಳು ಈ ಬ್ಯಾಂಕಿನಲ್ಲಿ ೨೦,೦೦೦ರೂಗಳಿಂದ ೫೦,೦೦೦ರೂಗಳವರೆಗೆ ಸಾಲವನ್ನು ಪಡೆದಿದ್ದಾರೆಂದು ಬ್ಯಾಂಕಿನ ಲೆಕ್ಕಪತ್ರಗಳು ತಿಳಿಸುತ್ತವೆ. ಬ್ಯಾಂಕ್‌ನ ಸಾಲದ ಪೂರ್ವದಲ್ಲಿ ಇವರ ವರಮಾನವು ೬೦೦೦ರೂಗಳಷ್ಟು ಇದ್ದುದು ವಾರ್ಷಿಕವಾಗಿ ೪೪೦೦೦ರೂಗಳವರೆಗೆ ತಮ್ಮ ವರಮಾನವನ್ನು ವೃದ್ಧಿಸಿಕೊಂಡಿದ್ದಾರೆ ಎಂಬ ಅಂಶವನ್ನು ಸಮೀಕ್ಷೆಯ ಮೂಲಕ ಕಂಡುಕೊಳ್ಳಲಾಗಿದೆ.

**ಪಟ್ಟಿ ೮**

**ಗ್ರಾಮೀಣ ವ್ಯಾಪಾರಿಗಳು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಟಿಜಿಬಿ ಸಾಲದ ಪೂರ್ವ | ಟಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ವ್ಯಾಪಾರಿಗಳು | ೨೦ | ೬೦೦೦ | ೪೪೦೦೦ | ೩೮.೦೦೦ | ೬೩೩ |

ಇವರು ಬ್ಯಾಂಕ್‌ನಿಂದ ಸರಾಸರಿಯಾಗಿ ೩೮,೬೦೦ರೂಗಳನ್ನು ಸಾಲದ ರೂಪದಲ್ಲಿ ಪಡೆದಿದ್ದಾರೆ. ಒಟ್ಟಾರೆ ನಿವ್ವಳ ವರಮಾನವು ೩೮,೦೦೦ರೂಗಳಾಗಿದ್ದು ಅದನ್ನು ಶೇಕಡಾವಾರಿಗೆ ಪರಿವರ್ತಿಸಿದಾಗ ೬೩೩ಪಟ್ಟು ಹೆಚ್ಚಳವಾಗಿರುವುದನ್ನು ಕಾಣಬಹುದು. ಒಟ್ಟು ನಾಲ್ಕು ವರ್ಗಗಳು ಕೂಡ ಬ್ಯಾಂಕ್‌ಸಾಲದ ನಂತರದಲ್ಲಿ ವರಮಾನವನ್ನು ಹೆಚ್ಚಿಸಿಕೊಳ್ಳಲು ಯಶಸ್ವಿಯಾಗಿದ್ದಾರೆ.

### ೬. ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲ

ಈ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿ ಬಹುದೀರ್ಘಕಾಲಾವಧಿಯಿಂದ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾ ಬಂದಿವೆ, ಸಾಹುಕಾರರು, ಸ್ನೇಹಿತರು, ಜಮೀನ್ದಾರರು, ಮಧ್ಯವರ್ತಿಗಳು, ದಲ್ಲಾಳಿಗಳು, ಬಂಧುಗಳು ಇನ್ನು ಮುಂತಾದವರಿಂದ ಗ್ರಾಮೀಣ ಜನಪದರು ತಮಗೆ ಬೇಕಾದ ಹಣಕಾಸಿನ ನೆರವನ್ನು

ಪಡೆದಿದ್ದಾರೆ. ಆದರೆ ಇಂದು ಇವರ ವ್ಯವಹಾರವು ಬಹಳಷ್ಟು ಕಡಿಮೆಯಾಗಿದೆ. ಗ್ರಾಮೀಣ ಬ್ಯಾಂಕು ಇಂದು ಅವರ ಸ್ಥಾನವನ್ನು ಗ್ರಾಮೀಣ ಪ್ರದೇಶದಲ್ಲಿ ತುಂಬಿದೆ ಎನ್ನಬಹುದು. ಕೆಲವು ಕುಟುಂಬಗಳು ತಮಗೆ ಅನಿವಾರ್ಯವಾದ ಸಂದರ್ಭಗಳಲ್ಲಿ ಇವರಿಂದ ಸಾಲ ಪಡೆಯುವುದುಂಟು, ಕೆಲವು ಕುಟುಂಬಗಳು ದಲ್ಲಾಲರಿಂದ ಕೃಷಿ ಚಟುವಟಿಕೆಗಳಿಗೆ ಸಾಲ ಪಡೆಯುತ್ತಿರುವುದನ್ನು ಇಂದಿಗೂ ಕಾಣಬಹುದು. ಈ ಮೊದಲಿದ್ದ ಖಾಸಗಿ ಹಣಕಾಸು ಸಂಸ್ಥೆಗಳ ಪ್ರಭಾವವು ಗ್ರಾಮೀಣ ಪ್ರದೇಶದಲ್ಲಿಲ್ಲ.

**ಪಟ್ಟಿ ೯**

**ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದಿರುವುದು**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | A | B | C | D | A | B | C | D | A | B | C | D |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೩೦ | ೫ | ೫ | .. | ೫ | .. | .. | .. | .. | .. | .. | .. |
| ೦೨. | ಕುಶಲ/ಗ್ರಾಮೀಣ ಉದ್ದಿಮೆದಾರರು | ೨೦ | ೧೫ | ೫ | .. | .. | ೩ | .. | .. | .. | .. | .. | .. | .. |
| ೦೩. | ಗ್ರಾ. ವ್ಯಾಪಾರಸ್ಥರು | ೨೦ | ೧೮ | ೨ | .. | .. | .. | .. | .. | .. | .. | .. | .. | .. |
| ೦೪. | ಭೂ.ರಹಿತ ಕಾರ್ಮಿಕರು | ೧೦ | ೮ | ೨ | .. | .. | .. | .. | .. | .. | .. | .. | .. | .. |

A ಲೇವಾದೇವಿಗಾರರು B ವ್ಯಾಪಾರಸ್ಥರು C ಸ್ನೇಹಿತರು/ಬಂಧುಗಳು D ಇತರೆ ದಲ್ಲಾಲರು

### ೭. ಹಣಕಾಸಿನ ಸಂಸ್ಥೆಗಳಿಂದ ಸಾಲ

ಗ್ರಾಮೀಣ ಪ್ರದೇಶಗಳಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳಾದ ಪ್ರಾಥಮಿಕ ಸಹಕಾರಿ ಸಂಘಗಳು, ವಾಣಿಜ್ಯ ಬ್ಯಾಂಕುಗಳು, ಭೂ ಅಭಿವೃದ್ಧಿ ಬ್ಯಾಂಕುಗಳಿಂದ ಸಾಲಪಡೆಯುತ್ತಿದ್ದರು. ಈ ಮೇಲಿನ ಹಣಕಾಸು ಸಂಸ್ಥೆಗಳಿಂದ ದುರ್ಬಲ ವರ್ಗದ ಜನಪದರು, ಭೂರಹಿತ ಕಾರ್ಮಿಕರು ಸಾಲ ಪಡೆಯಲು ವಿಫಲರಾದಾಗ, ಗ್ರಾಮೀಣ ಪ್ರದೇಶಗಳ ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸಲು ಗ್ರಾಮೀಣ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದವು. ಈ ಬ್ಯಾಂಕುಗಳು ಸಮಾಜದಲ್ಲಿನ ಎಲ್ಲಾ ವರ್ಗಗಳ ಜನಪದರಿಗೆ ಹಣಕಾಸಿನ ವ್ಯವಸ್ಥೆಯನ್ನು ನಿರ್ವಹಿಸುತ್ತಾ ಬಂದಿದೆ. ಇದರಿಂದಾಗಿ ಸಮಾಜದಲ್ಲಿನ ದುರ್ಬಲವರ್ಗದವರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಇನ್ನು ಮುಂತಾದ ವರ್ಗಗಳು ಗ್ರಾಮೀಣ ಸಾಂಸ್ಥಿಕೇತರ ಸಂಸ್ಥೆಗಳ ಹಿಡಿತದಿಂದ ಬಿಡುಗಡೆ ಪಡೆದಿದ್ದಾರೆ. ಖಾಸಗಿಯವರು ವಿಧಿಸುವ ಬಡ್ಡಿಯಧರವು ಬ್ಯಾಂಕ್ ಬಡ್ಡಿಯ ಧರಕ್ಕಿಂತ ಅಧಿಕವಾಗಿದೆ. ಬ್ಯಾಂಕ್‌ಬಡ್ಡಿಯ ಧರವು ಕಡಿಮೆ ಇರುವುದರಿಂದ ಗ್ರಾಮೀಣ ಜನಪದರು ಸಾಲವನ್ನು ಗ್ರಾಮೀಣ ಬ್ಯಾಂಕುಗಳಿಂದ ಪಡೆಯುವುದು ಅಧಿಕವಾಯಿತು ಎನ್ನಬಹುದು. ಹಾಗಾಗಿ ಈ ಬ್ಯಾಂಕು ಗ್ರಾಮೀಣ ಪ್ರದೇಶದಲ್ಲಿ ಅಭಿವೃದ್ಧಿಗೆ ಪೂರಕವಾಗಿದೆ ಎನ್ನಬಹುದು.

ಪಟ್ಟಿ ೧೦

ಹಣಕಾಸಿನ ಸಂಸ್ಥೆಯ ಮೂಲಗಳು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | E | F | G | H | E | F | G | H | E | F | G | H |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೨೦ | ೫ | .. | .. | .. | .. | .. | ೪೦ | .. | .. | .. | .. |
| ೦೨. | ಕರಕುಶಲ/ಗ್ರಾಮೀಣ ಉದ್ದಿಮೆದಾರರು | ೨೦ | ೧೦ | ೨ | .. | .. | .. | .. | .. | ೨೦ | .. | .. | .. | .. |
| ೦೩. | ಗ್ರಾ.ವ್ಯಾಪಾರಸ್ಥರು | ೨೦ | ೧೦ | ೨ | .. | .. | .. | .. | .. | ೨೦ | .. | .. | .. | .. |
| ೦೪. | ಭೂ.ರಹಿತ ಕಾರ್ಮಿಕರು | ೧೦ | .. | .. | .. | .. | .. | .. | .. | ೧೦ | .. | .. | .. | .. |

E ಪ್ರಾಥಮಿಕ ಸಹಕಾರ ಸಂಘಗಳು **F** ವಾಣಿಜ್ಯ ಬ್ಯಾಂಕುಗಳು **G** ಭೂ ಅಭಿವೃದ್ಧಿ ಬ್ಯಾಂಕು **H** ಪ್ರಾದೇಶಿಕ ಗ್ರಾಮೀಣ ಬ್ಯಾಂಕು.

### ೮. ಗ್ರಾಮೀಣ ಬ್ಯಾಂಕ ಬಗ್ಗೆ ತಿಳುವಳಿಕೆ

ಗ್ರಾಮೀಣ ಬ್ಯಾಂಕುಗಳ ಬಗ್ಗೆ ಸಮೀಕ್ಷೆ ನಡೆಸಿದ ೯೦ ಕುಟುಂಬಗಳಲ್ಲಿ ೫೦ ಕುಟುಂಬಗಳು ಬ್ಯಾಂಕ್‌ಸಿಬ್ಬಂದಿಯಿಂದ ತಿಳಿದುಕೊಂಡಿದ್ದಾರೆ. ೧೫ ಕುಟುಂಬಗಳು ಗ್ರಾಮಸಭೆಯ ಮೂಲಕ ೮ ಕುಟುಂಬಗಳು ಗ್ರಾಮದ ಮುಖಂಡರುಗಳ ಮೂಲಕ ೮ ಕುಟುಂಬಗಳು ಸ್ವಂತ ತಿಳುವಳಿಕೆಯಿಂದ ೯ ಕುಟುಂಬಗಳು ಸ್ನೇಹಿತರುಗಳ ಮೂಲಕ ಬ್ಯಾಂಕಿನ ಬಗ್ಗೆ ಮಾಹಿತಿಯನ್ನು ಪಡೆದುಕೊಂಡಿದ್ದಾರೆ. ಇದು ಪ್ರತಿಶತ ೫೫,೧೬,೮.೮,೮.೮,೧೦ರಷ್ಟು ಅನುಕ್ರಮವಾಗಿವೆ. ಗ್ರಾಮೀಣ ಬ್ಯಾಂಕ್ ಸಿಬ್ಬಂದಿಯು ಗರಿಷ್ಠ ಪ್ರಮಾಣದಲ್ಲಿ ಜನಪದರಿಗೆ ಬ್ಯಾಂಕ್ ಉಪಯೋಗದ ಬಗ್ಗೆ ಮಾಹಿತಿಯನ್ನು ಒದಗಿಸಿಕೊಡಲು ಯಶಸ್ವಿಯಾಗಿದ್ದಾರೆ. ಇದನ್ನು ಪಟ್ಟಿ ೧೧ರ ಮೂಲಕ ಕಾಣಬಹುದು.

### ಗ್ರಾಮೀಣ ಬ್ಯಾಂಕ್ ಬಗ್ಗೆ ಜನಪದರ ಅಭಿಪ್ರಾಯಗಳು

ಸಮೀಕ್ಷಿಸಿದ ೯೦ ಕುಟುಂಬಗಳು ಬ್ಯಾಂಕ್ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದರಲ್ಲಿ ೮೦ ಕುಟುಂಬಗಳು ಪೂರ್ಣ ಪ್ರಮಾಣದ ತೃಪ್ತಿ ವ್ಯಕ್ತಪಡಿಸಿದ್ದಾರೆ. ಅದು ಪ್ರತಿಶತ ೮೮ರಷ್ಟಾಗುತ್ತದೆ. ಇನ್ನುಳಿದ ೧೦ ಕುಟುಂಬಗಳು ಬೇರೆ ರೀತಿಯ ಕಾರಣಗಳನ್ನು ನೀಡಿದ್ದಾರೆ. ಏಕೆಂದರೆ ಈ ಕುಟುಂಬಗಳು ದಾಖಲೆಗಳ ಪರದಾಟ, ಸಾಲವನ್ನು ನಿಧಾನವಾಗಿ ಮಂಜೂರು ಮಾಡಿರುವುದರ ಪ್ರಯುಕ್ತ ಅತೃಪ್ತಿ ವ್ಯಕ್ತಪಡಿಸಿದ್ದಾರೆ.

ಎಲ್ಲಾ ಕುಟುಂಬಗಳು ಬ್ಯಾಂಕು ಮುಂದುವರೆಸುವ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ. ೨೦೦೧ರ ನಂತರದಲ್ಲಿ ಬ್ಯಾಂಕ್‌ನಲ್ಲಿ ಕಿಸಾನ್ ಕ್ರೆಡಿಟ್ ಕಾರ್ಡುಗಳನ್ನು ತಂದಿದ್ದರಿಂದ ರೈತರಿಗೆ ದಾಖಲೆಗಳ ಪರದಾಟ ತಪ್ಪಿದೆ ಎನ್ನಬಹುದು. ಬ್ಯಾಂಕು ಜನಸಾಮಾನ್ಯರ ಸಂಪರ್ಕದಲ್ಲಿದೆ. ಈ ಶಾಖೆಯು ೧೯೯೬ರಲ್ಲಿ Recovery award ಪ್ರದೇಶವಾರು ಉತ್ತಮ ಶಾಖೆ ಎಂಬ ಪ್ರಶಸ್ತಿ ಪಡೆದಿದೆ.

## ಪಟ್ಟಿ ೧೧

## ಈ ಬ್ಯಾಂಕ್ ಬಗ್ಗೆ ಜ್ಞಾನ ಪಡೆದವರ ಅಭಿಪ್ರಾಯ

| ಕ್ರ. ಸಂಖ್ಯೆ | ವರ್ಗಗಳು | ಕುಟುಂಬ ಸಂಖ್ಯೆ | ಗ್ರಾಮದ ಮುಖಂಡರಿಂದ | ಸ್ವಂತ ತಿಳುವಳಿಕೆ | ಸ್ನೇಹಿತರು | ಬ್ಯಾಂಕ್ ಸಿಬ್ಬಂಧಿ | ಗ್ರಾಮ ಸಭಾ | ಬಂಧು ಗಳಿಂದ | ಬ್ಯಾಂಕ್ ಬಗ್ಗೆ ತೃಪ್ತಿ | | ಸಾಲ ಪಡೆಯುವಾಗ ತೊಂದರೆಗಳು | | ಅಧಿಕಾರಿಗಳ ಬಗ್ಗೆ ತೃಪ್ತಿ | | ಬ್ಯಾಂಕ ಮುಂದುವರೆಸುವ ಬಗ್ಗೆ | |
|---|---|---|---|---|---|---|---|---|---|---|---|---|---|---|---|---|
| | | | | | | | | | ಹೌದು | ಇಲ್ಲ | ಹೌದು | ಇಲ್ಲ | ಹೌದು | ಇಲ್ಲ | ಬೇಕು | ಬೇಡ |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೨ | .. | ೩ | ೩೦ | ೫ | .. | ೩೮ | ೦೨ | ೦೨ | ೩೮ | ೩೮ | ೨ | ೪೦ | .. |
| ೦೨. | ಗ್ರಾಮೀಣ ಉದ್ಯಮ | ೨೦ | ೨ | ೧ | ೨ | ೧೦ | ೫ | .. | ೧೭ | ೦೩ | ೦೩ | ೧೭ | ೧೭ | ೩ | ೨೯ | .. |
| ೦೩. | ಕುಶಲ/ಗ್ರಾಮೀಣ ವ್ಯಾಪಾರಸ್ಥರು | ೨೦ | ೨ | ೭ | ೧ | ೦೭ | ೩ | .. | ೧೭ | ೦೩ | ೦೩ | ೧೭ | ೧೭ | ೩ | ೨೦ | .. |
| ೦೪. | ಭೂರ.ಕಾ. | ೧೦ | ೨ | ೧ | ೨ | ೩ | ೨ | .. | ೦೮ | ೦೨ | ೦೨ | ೦೮ | ೦೮ | ೦೨ | ೧೦ | .. |
| | ಒಟ್ಟು | | ೦೮ | ೦೯ | ೦೮ | ೫೦ | ೧೫ | .. | ೮೦ | ೧೦ | ೧೦ | ೮೦ | ೮೦ | ೧೦ | ೯೦ | .. |

**ದರೋಜಿ ಪ್ರಗತಿ ಗ್ರಾಮೀಣ ಬ್ಯಾಂಕನ ಸ್ಥಿತಿ**

ಸಂಡೂರು ತಾಲೂಕಿನಲ್ಲಿ ೧೯೭೯ರ ಡಿಸೆಂಬರ್‌ನಲ್ಲಿ ಟಿಜಿಬ್ಯಾಂಕ್ ಪ್ರಾರಂಭವಾಯಿತು. ಒಟ್ಟು ೫ ಕೋಟಿ ರೂಪಾಯಿಗಳ ಸಾಲವನ್ನು ಮತ್ತು ೩ ಕೋಟಿ ರೂಪಾಯಿಗಳ ಠೇವಣಿಯನ್ನು ಹೊಂದಿ ಅತ್ಯಧಿಕ ವಹಿವಾಟು ನಡೆಸಿದ ಬ್ಯಾಂಕೆಂಬ ಹೆಗ್ಗಳಿಕೆ ಹೊಂದಿದೆ. ಒಟ್ಟು ಸಾಲ ಮತ್ತು ಠೇವಣಿಯಲ್ಲಿ ೬೪೨೧ ಖಾತೆಗಳಿವೆ. ಈ ಬ್ಯಾಂಕು ಸಣ್ಣ, ಅತಿಸಣ್ಣ ರೈತರು, ಸಣ್ಣ ವ್ಯಾಪಾರಸ್ಥರು ಭೂರಹಿತ ಕಾರ್ಮಿಕರು, ಕರಕುಶಲ, ಸಣ್ಣ ಉದ್ದಿಮೆದಾರರಿಗೆ ಹಣಕಾಸಿನ ನೆರವನ್ನು ಒದಗಿಸಿದೆ. ಕೃಷಿಕರಲ್ಲಿ ೬೧೬ ಖಾತೆಗಳು ಕಿಸಾನ್ ಕ್ರೆಡಿಟ್ ಕಾರ್ಡುದಾರರನ್ನು ಒಳಗೊಂಡಿದೆ. ಇವರಿಗೆ ೨ ಕೋಟಿ ೧೨ ಲಕ್ಷರೂಗಳ ಸಾಲವನ್ನೊದಗಿಸಿದೆ. ಸಣ್ಣ ವ್ಯಾಪಾರಸ್ಥರಿಗೆ ೯೮ಲಕ್ಷ ೩೬ ಸಾವಿರ ಸಣ್ಣ ಉದ್ದಿಮೆದಾರರಿಗೆ ೧ಲಕ್ಷ ೧.೩೫ಸಾವಿರ, ಸ್ವಸಹಾಯ ಗುಂಪುಗಳಿಗೆ ೧೮ ಲಕ್ಷ ರೂಪಾಯಿಗಳ ಸಾಲ ಒದಗಿಸಿದೆ. ಕೃಷಿಕರಿಗೆ ಸಂಬಂಧಿಸಿದಂತೆ ಬೆಳೆ ಒತ್ತೆ ಸಾಲ ಬಂಗಾರದ ಅಡಮಾನಸಾಲ, ಭೂ ರಹಿತ ಕಾರ್ಮಿಕರಿಗೆ ೩ ಲಕ್ಷ ರೂಪಾಯಿಗಳ ಸಾಲವನ್ನು ಒದಗಿಸಿದ್ದಾರೆ. ಎತ್ತು ಮತ್ತು ಬಂಡಿಸಾಲಕ್ಕೆ ೫ ಲಕ್ಷ ೮೦ಸಾವಿರ, ಕೃಷಿ ಉಪಕರಣಗಳಿಗೆ ೮೦,೦೦೦ ರೂಪಾಯಿಗಳನ್ನು ಸಾಲವನ್ನು ಒದಗಿಸಿದ್ದಾರೆ. ಒಟ್ಟು ಸಾಲವನ್ನು ಪಡೆದವರು ಈ ಬ್ಯಾಂಕಿನ ಉಪಯೋಗವನ್ನು ಚೆನ್ನಾಗಿ ಪಡೆದುಕೊಂಡು ತಮ್ಮ ಜೀವನ ಮಟ್ಟಸುಧಾರಿಸಿಕೊಂಡಿದ್ದಾರೆ ಎನ್ನಬಹುದು. ಒಟ್ಟಾರೆ ಮಹಿವಾಟಿನಲ್ಲಿ ಬ್ಯಾಂಕ್ ಲೆಕ್ಕಪತ್ರಗಳ ಆಧಾರದ ಮೇಲೆ ಪ್ರತಿಶತ ೮೩ರಷ್ಟು ಸಾಲ ಮರುಪಾವತಿಯಾಗಿದ್ದು ಪ್ರತಿಶತ ೧೭ರಷ್ಟು ಮಾತ್ರ ಬಾಕಿ ಇದೆ ಎಂದಿದ್ದಾರೆ. ಪ್ರತಿಶತ ೧೭ರಷ್ಟು ಇರುವುದು ಬಾಕಿ ಇರುವುದು ಸಾಮಾನ್ಯ ಎಂದಿದ್ದಾರೆ.

ಒಟ್ಟಿನಲ್ಲಿ ಹೇಳುವುದಾದರೆ ನಾಲ್ಕು ವರ್ಗದ ಜನರನ್ನು ಸಮೀಕ್ಷೆ ಒಳಪಡಿಸಿದಾಗ ಈ ಬ್ಯಾಂಕು ಬಂದ ನಂತರದಲ್ಲಿ ನಾವು ಸಾಹುಕಾರರ ಹಿಡಿತದಿಂದ ಬಿಡುಗಡೆ ಹೊಂದಿದ್ದೇವೆ. ಅನಿವಾರ್ಯ ಸ್ಥಿತಿಯಲ್ಲಿ ಮಾತ್ರ ಅಂತಹವರಿಂದ ಸಾಲ ಪಡೆಯುತ್ತೇವೆ ಎಂದಿದ್ದಾರೆ. ಸಾಲಮನ್ನಾ ಕಾರ್ಯಕ್ರಮದ ಉಪಯೋಗ ಪಡೆದುಕೊಂಡಿದ್ದೇವೆ. ನೀರಾವರಿ ಪ್ರದೇಶವಾಗಿರುವುದರಿಂದ ಸಾಲ ಮರುಪಾವತಿಮಾಡಿ ಹೊಸ ಸಾಲವನ್ನು ಪಡೆಯುತ್ತಿದ್ದೇವೆ. ಬಡ್ಡಿಯ ಧರವು ಕೂಡ ಕಡಿಮೆ ಇರುವುದರಿಂದ ಈ ಬ್ಯಾಂಕ್ ನಮ್ಮ ಹಣಕಾಸಿನ ನಿರ್ವಹಣೆಗಾರ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು.

**೪. ಹೊಸಪೇಟೆ ಕ್ಷೇತ್ರ**

**೪. ಎಂ.ಎಂ.ಹಳ್ಳಿ ಶಾಖೆ**

ಈ ಶಾಖೆಯು ಮರಿಯಮ್ಮನಹಳ್ಳಿ ಮತ್ತು ಚಿಲಕನಹಟ್ಟಿ ಗ್ರಾಮಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಪತ್ತಿನ ಕಾರ್ಯನಿರ್ವಹಿಸುತ್ತದೆ. ಎರಡು ಗ್ರಾಮಗಳಿಂದ ೮೫ ಫಲಾನುಭವಿಗಳನ್ನು ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಫಲಾನುಭವಿಗಳಲ್ಲಿ ೩೫ ಸಣ್ಣ/ಅತಿಸಣ್ಣ ರೈತರು, ೨೫ ಗ್ರಾಮೀಣ ಕರಕುಶಲ/ಸಣ್ಣ ಉದ್ದಿಮೆದಾರರು, ೧೫ ಸಣ್ಣ ವ್ಯಾಪಾರಸ್ಥರು ಮತ್ತು ೨೦ ಕುಟುಂಬಗಳು ಭೂ ರಹಿತ ಕಾರ್ಮಿಕರನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಯಿತು. ಫಲಾನುಭವಿ ಸದಸ್ಯರ ಸಂಖ್ಯೆ ಅಕ್ಷರಸ್ಥರ ಪ್ರಮಾಣ, ಉದ್ಯೋಗ, ಮನೆಗಳ ವಿಧ ಅವಲಂಬಿಸಿರುವವರ ಸಂಖ್ಯೆ ಮುಂತಾದ ಅಂಶಗಳ ಬಗ್ಗೆ ಸ್ವತಃ ಮನೆಯವರಿಂದಲೇ ಪಡೆದ ಅಂಶವನ್ನು ಪಟ್ಟಿ ೧ರಲ್ಲಿ ಕಾಣಬಹುದು.

## ಪಟ್ಟಿ ೧

## ಸಾಮಾನ್ಯ ವಿವರ

| ಕ್ರಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಸರಾಸರಿ ಸದಸ್ಯರು | ಸಾಕ್ಷರಸ್ಥರ ಸಂಖ್ಯೆ | ದುಡಿಯುವವರ ಸಂಖ್ಯೆ | ಗುಡಿಸಲುಗಳು | ಮಾಳಿಗೆ ಮನೆ | ಹೆಂಚಿನ ಮನೆ | ತಗಡಿನ ಮನೆ | ಜನತಾ ಮನೆ | ಆರ್.ಸಿ.ಸಿ ಮನೆ |
|---|---|---|---|---|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೨೫ | ೫ | ೩ | ೨ | .. | ೧೫ | ೨ | ೩ | ೨ | ೩ |
| ೦೨. | ಗ್ರಾಮೀಣ ಕುಶಲ/ಉದ್ದಿಮೆದಾರರು | ೨೫ | ೫ | ೪ | ೩ | - | ೧೧ | ೨ | ೮ | ೪ | ೧ |
| ೦೩. | ಸಣ್ಣ ವ್ಯಾಪಾರಿಗಳು | ೧೫ | ೬ | ೩ | ೩ | .. | ೧೦ | ೨ | .. | ೨ | ೧ |
| ೦೪. | ಭೂ ರಹಿತ ಕಾರ್ಮಿಕರು | ೨೦ | ೬ | ೨ | ೪ | ೧ | ೫ | ೧ | ೧ | ೧೨ | - |
| | ಒಟ್ಟು | ೮೫ | | | | ೧ | ೪೦ | ೦೭ | ೧೨ | ೨೦ | ೫ |

ಪಟ್ಟಿ ೧ರಲ್ಲಿ ಅವಲೋಕಿಸಿದಾಗ ಭೂರಹಿತ ಕಾರ್ಮಿಕರ ಕುಟುಂಬಗಳಲ್ಲಿ ಅಕ್ಷರಸ್ಥರ ಪ್ರಮಾಣ ಕಡಿಮೆ ಇದ್ದು, ಇತರೆ ವರ್ಗಗಳಲ್ಲಿ ಅಕ್ಷರಸ್ಥರ ಪ್ರಮಾಣ ಅಧಿಕವಾಗಿದೆ. ೮೫ ಫಲಾನುಭವಿಗಳಲ್ಲಿ ೧ ಕುಟುಂಬ ಗುಡಿಸಲಿನಲ್ಲಿ, ೪೦ ಕುಟುಂಬಗಳು ಮಾಳಿಗೆ ಮನೆಯಲ್ಲಿ, ೦೭ ಕುಟುಂಬಗಳು ಹೆಂಚಿನ ಮನೆಗಳಲ್ಲಿ ೧೨ ಕುಟುಂಬಗಳು ತಗಡಿನ ಮನೆಗಳಲ್ಲಿ ೨೦ ಕುಟುಂಬಗಳು ಜನತಾ, ಇಂದಿರಾ ಆವಾಸ್ ಮನೆಗಳಲ್ಲಿ, ೫ ಕುಟುಂಬಗಳು ಆರ್.ಸಿ.ಸಿ. ಮನೆಗಳಲ್ಲಿ ವಾಸವಾಗಿದ್ದಾರೆ. ದುಡಿಯುವವರ ಸಂಖ್ಯೆ ಸಣ್ಣ ಮತ್ತು ಅತಿ ಸಣ್ಣ ರೈತರ ಕುಟುಂಬಗಳಲ್ಲಿ ೨, ಸಣ್ಣ ಉದ್ದಿಮೆದಾರರಲ್ಲಿ ೩, ಚಿಲ್ಲರೆ ವ್ಯಾಪಾರಿಗಳಲ್ಲಿ ೩ ಮತ್ತು ಭೂರಹಿತ ಕಾರ್ಮಿಕರಲ್ಲಿ ೪ ಜನ ಸದಸ್ಯರಿದ್ದಾರೆ. ಇವರು ವಾಸಮಾಡುವ ಮನೆಗಳನ್ನಾಧರಿಸಿ ಅವರ ಆರ್ಥಿಕ ಮತ್ತು ಸಾಮಾಜಿಕ ಜೀವನಮಟ್ಟವನ್ನು ಪರಿಗಣಿಸಬಹುದಾಗಿದೆ. ಭೂ ರಹಿತ ಕಾರ್ಮಿಕರು ಸರ್ಕಾರದಿಂದ ಕೊಡಲ್ಪಟ್ಟ ಜನತಾ ಮನೆಗಳಲ್ಲಿ ವಾಸವಾಗಿದ್ದಾರೆ.

### ೧. ಆಸ್ತಿಗಳು

ಗ್ರಾಮೀಣ ವಾಸಿಗಳು ತಮ್ಮದೇ ಆಸ್ತಿಯನ್ನು ಹೊಂದಿರುತ್ತಾರೆ. ಮೊದಲನೆಯದಾಗಿ ಕೃಷಿ ಉಪಕರಣ, ದನಕರುಗಳು ಮುಂತಾದವುಗಳನ್ನು ಮನೆಯಲ್ಲಿ ಬಾಳಿಕೆ ಬರುವ ವಸ್ತುಗಳಾದ ಸೈಕಲ್, ಟಿ.ವಿ, ಕಪಾಟು ಇನ್ನೂ ಮುಂತಾದವುಗಳ ಜೊತೆಗೆ ಕುರಿ, ಕೋಳಿ, ಆಡು ಇತ್ಯಾದಿಗಳನ್ನು ಹೊಂದಿರುತ್ತಾರೆ.

## ಪಟ್ಟಿ ಸಂಖ್ಯೆ ೨

## ವಿವಿಧ ವರ್ಗಗಳ ಕುಟುಂಬಗಳ ಸರಾಸರಿ ಆಸ್ತಿಯ ಮೌಲ್ಯ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೨೫ | ೩೬೫೦ | ೨೫೦೦೦ | ೨೧೩೫೦ | ೫೮೪.೯ |
| ೦೨. | ಕರಕುಶಲ/ಸಣ್ಣ ಉದ್ದಿಮೆದಾರರು | ೨೫ | ೨೬೦೦ | ೨೦೦೦೦ | ೧೮೪೦೦ | ೬೬೯ |
| ೦೩. | ಚಿಲ್ಲರೆ ವ್ಯಾಪಾರಿಗಳು | ೧೫ | ೨೦೦೦ | ೨೧೦೦೦ | ೧೮೧೦೦ | ೬೨೪ |
| ೦೪. | ಭೂರಹಿತ ಕಾರ್ಮಿಕರು | ೨೦ | ೭೦೦ | ೧೬೦೦೦ | ೧೫೩೦೦ | ೨೧೮೫ |
| | ಸರಾಸರಿ | ೮೫ | ೨೪೬೨.೫ | ೨೦೫೦೦ | ೧೮೦೩೭.೫ | ೭೩೨.೬ |

ಪಟ್ಟಿ ೩ರಲ್ಲಿ ಸರಾಸರಿ ಮೌಲ್ಯದ ಆಸ್ತಿಯನ್ನು ಹೊಂದಿರುವ ಫಲಾನುಭವಿಗಳ ಅಂಕಿ ಅಂಶಗಳನ್ನು ನೋಡಬಹುದಾಗಿದೆ. ಒಟ್ಟು, ನಾಲ್ಕು ವರ್ಗಗಳಲ್ಲಿ ಭೂ ರಹಿತ ಕಾರ್ಮಿಕರು ಅತಿಕಡಿಮೆ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಇನ್ನುಳಿದ ೩ ವರ್ಗಗಳು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದವರಾಗಿದ್ದಾರೆ. ಮೊದಲ ಮೂರು ವರ್ಗಗಳಲ್ಲಿ.ಗ್ರಾ.ಬ್ಯಾ.ಸಾಲದ ಪೂರ್ವದಲ್ಲೇ ಅಧಿಕ ಆಸ್ತಿಯನ್ನು ಹೊಂದಿದ್ದರು. ಆದರೆ ಭೂರಹಿತ ಕಾರ್ಮಿಕರು ಬ್ಯಾಂಕಿನ ಸಾಲದ ನಂತರದಲ್ಲಿ ಅವರ ಆಸ್ತಿಯಲ್ಲಿ ಸುಧಾರಣೆಯಾಗಿರುವುದನ್ನು ಕಾಣಬಹುದು. ನಾಲ್ಕು ವರ್ಗಗಳಲ್ಲಿ ಸರಾಸರಿ ನಿವ್ವಳ ಹೆಚ್ಚಳ ೧೮,೦೩೭ರೂಗಳಾಗಿದ್ದು ಅದು ಪ್ರತಿಶತ ೭೩೨ರಷ್ಟಾಗಿರುವುದನ್ನು ಕಾಣಬಹುದು.

### ೨. ಭೂ ಹಿಡುವಳಿ

ಗ್ರಾಮೀಣ ನಿವಾಸಿಗಳ ಜೀವನಾಧಾರಿತ ವೃತ್ತಿಯೆಂದರೆ ಕೃಷಿ, ಅವರ ಉತ್ಪನ್ನವು ಈ ಪ್ರದೇಶದ ವ್ಯಾಪ್ತಿಯಲ್ಲಿ ಖುಷ್ಕಿ ಬೇಸಾಯವನ್ನು ಅವಲಂಬಿಸಿದೆ. ಭೂ ಹಿಡುವಳಿಯನ್ನು ಸಾಮಾನ್ಯವಾಗಿ ಎರಡು ವರ್ಗಗಳಲ್ಲಿ ಕಾಣಬಹುದಾಗಿದೆ. ಸಣ್ಣ/ಅತಿಸಣ್ಣ ರೈತರು, ಚಿಲ್ಲರೆ ವ್ಯಾಪಾರಿಗಳು ಭೂ ಸಾಗುವಳಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಗ್ರಾಮೀಣ ಬ್ಯಾಂಕಿನ ಅಸ್ತಿತ್ವದ ಪೂರ್ವದಲ್ಲಿ ಇವರ ಹಿಡುವಳಿಯು ಸರಾಸರಿಯಾಗಿ ೨.೫. ಎಕರೆ ಇದ್ದುದು, ಪ್ರಾಗ್ರಾ ಬ್ಯಾಂಕುಗಳ ಸಾಲದ ನಂತರದಲ್ಲಿ ಸರಾಸರಿ ೪.೨೫. ಎಕರೆ ಪ್ರದೇಶಕ್ಕೆ ವಿಸ್ತರಿಸಿಕೊಂಡಿದ್ದಾರೆ. ಈ ಪ್ರದೇಶವು ನೀರಾವರಿ ವ್ಯಾಪ್ತಿಯಿಂದ ಹೊರಗಿರುವುದರಿಂದ ದೊಡ್ಡ ರೈತರು ಹೆಚ್ಚಾಗಿ ಕೊಳವೆ ಬಾವಿ ನೀರಾವರಿಯನ್ನು ಹೊಂದಿರುತ್ತಾರೆ. ಇಲ್ಲಿನ ಫಲಾನುಭವಿಗಳು

ಖುಷ್ಕಿ ಭೂಮಿಯನ್ನು ಹೊಂದಿರುವುದರಿಂದ ಇವರ ಆಸ್ತಿಯ ಪ್ರಮಾಣವು ಪ್ರತಿಶತ ೭೦ರಷ್ಟು ಅಧಿಕವಾಗಿದೆ ಎಂಬುದನ್ನು ಪಟ್ಟಿ ೩ರಲ್ಲಿ ಕಂಡುಕೊಳ್ಳಬಹುದಾಗಿದೆ.

**ಪಟ್ಟಿ ೩**

**ಸರಾಸರಿ ಹಿಡುವಳಿ ಗಾತ್ರ**

ಎಕರೆಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೨೫ | ೩ಎಕರೆ | ೫ಎಕರೆ | ೨ | ೧೬೬ |
| ೦೨. | ಗ್ರಾಮೀಣ ವ್ಯಾಪಾರಿಗಳು | ೧೫ | ೨ ಎಕರೆ | ೩೫ ಎಕರೆ | ೧.೫. | ೦.೭೫ |
| | | | ೨.೫ | ೪.೨೫ | ೧.೭೫ | ೭೦ |

**೩. ಕೃಷಿ ಹೂಡುವಳಿ ವೆಚ್ಚ**

ಗ್ರಾಮೀಣ ಜನಪದರ ಜೀವನಾಧಾರ ವೃತ್ತಿಯೆಂದರೆ ಕೃಷಿ. ಇವರ ಹೂಡುವಳಿ ವೆಚ್ಚವು ಭೂಮಿಯನ್ನು ಹದಮಾಡುವುದರಿಂದ ಮಾರುಕಟ್ಟೆಗೆ ಸಾಗಿಸುವವರಿಗೆ ವಿವಿಧ ಹಂತಗಳ ವೆಚ್ಚಗಳನ್ನು ಒಳಗೊಂಡಿರುತ್ತಾರೆ. ಅವುಗಳನ್ನು ಪ್ರಮುಖವಾಗಿ ಮೂರು ಹಂತಗಳಲ್ಲಿ ನೋಡಬಹುದಾಗಿದೆ.

೧. ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳ ಮೇಲಿನ ವೆಚ್ಚ.

೨. ಕೃಷಿ ಕಾರ್ಮಿಕರ ಕೂಲಿ ಮತ್ತು ತಮ್ಮ ಜಾನುವಾರುಗಳ ನಿರ್ವಹಣಾ ವೆಚ್ಚ

೩. ಬೆಳೆದ ಧಾನ್ಯಗಳನ್ನು ಕೊಯ್ಯಲು, ಸಾಗಾಣೆ, ಕಾಳನ್ನು ಒಕ್ಕಲು ಮಾಡುವುದು ಮತ್ತು ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳು.

ಈ ಪ್ರದೇಶದಲ್ಲಿನ ೪೦ ಕೃಷಿ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬೀಜ, ಗೊಬ್ಬರ ಕ್ರಿಮಿನಾಶಕಗಳನ್ನು ಕಡಿಮೆ ಪ್ರಮಾಣದಲ್ಲಿ ಬ್ಯಾಂಕ್‌ಸಾಲದ ಪೂರ್ವದಲ್ಲಿ ಉಪಯೋಗಿಸುತ್ತಿದ್ದರು. ಆದರೆ ಬ್ಯಾಂಕ್ ಸಾಲದ ನಂತರದಲ್ಲಿ ಆಧುನಿಕ ಇಳುವರಿಕೊಡುವ ಬೀಜಗಳನ್ನು ಮತ್ತು ರಾಸಾಯನಿಕ ಗೊಬ್ಬರಗಳಾದ ಡಿ.ಎ.ಪಿ, ಯೂರಿಯಾ ರಂಜಕ, ಪೊಟ್ಯಾಷ್ ಹಾಗೂ ಬೆಳೆಗಳನ್ನು ರೋಗಗಳಿಂದ ಕಾಪಾಡಲು ಕ್ರಿಮಿನಾಶಕಗಳನ್ನು ಬಳಸಲಾರಂಭಿಸಿದರು. ಎರಡನೇ ಹಂತದಲ್ಲಿ ಬೀಜವನ್ನು ಬಿತ್ತಿದ ೧೫ ರಿಂದ ೪೦ ದಿನದ ಬೆಳೆಗಳಲ್ಲಿನ ಕಳೆಯನ್ನು ನಾಶಪಡಿಸಲು ಕೃಷಿಕಾರ್ಮಿಕರನ್ನು ದಿನಗೂಲಿಗೆ

ನೇಮಿಸಿಕೊಳ್ಳುತ್ತಾರೆ. ಬ್ಯಾಂಕ್‌ಸಾಲದ ಪೂರ್ವದಲ್ಲಿ ಕೂಲಿ ಪ್ರಮಾಣ ಕಡಿಮೆ ಇದ್ದು, ಇತ್ತೀಚೆಗೆ ದಿನವೊಂದಕ್ಕೆ ೭೦ ರಿಂದ ೧೧೦ ರೂಪಾಯಿಗಳಿಗೆ ಅಧಿಕವಾಗಿದೆ, ಇಲ್ಲಿಯೂ ಕೂಡ ಹಲವಾರು ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದಿರುವುದರಿಂದ ಕೃಷಿಕಾರ್ಮಿಕರ ಕೊರತೆಯಿದೆ.

೪೦ ಕೃಷಿ ಕುಟುಂಬಗಳಲ್ಲಿ ೩೦ ಕುಟುಂಬಗಳು ಒಂದು ಜೊತೆ ಎತ್ತುಗಳನ್ನು ಹೊಂದಿರುತ್ತಾರೆ. ಇನ್ನುಳಿದ ಕುಟುಂಬಗಳು ಬಾಡಿಗೆ ಎತ್ತುಗಳ ಮೂಲಕ ಇಲ್ಲವೆ ಟ್ರಾಕ್ಟರ್ ಮೂಲಕ ಭೂಮಿಯನ್ನು ಹದಗೊಳಿಸಬೇಕಾಗುತ್ತದೆ. ೩೦ ಕುಟುಂಬಗಳು ತಮ್ಮ ಸ್ವಂತ ಎತ್ತುಗಳ ಮತ್ತು ಇತರೆ ರಾಸುಗಳ ನಿರ್ವಹಣೆಗೆ ಹಣವನ್ನು ವೆಚ್ಚ ಮಾಡಬೇಕಾಗುತ್ತದೆ. ಹಾಗೆಯೇ ಇನ್ನುಳಿದ ೧೫ ಕುಟುಂಬಗಳು ಕೂಡ ಕೃಷಿ ಭೂಮಿಯನ್ನು ಉಳುಮೆ ಮಾಡದ್ದಕ್ಕೆ ಬಾಡಿಗೆಗೆ ಹಣವನ್ನು ನೀಡಬೇಕಾಗುತ್ತದೆ. ಹೀಗೆ ಕೃಷಿಕರು ಸ್ವಂತ ಅಥವಾ ಬಾಡಿಗೆ ಎತ್ತುಗಳಿಗೆ ಹಣವನ್ನು ವೆಚ್ಚ ಮಾಡಬೇಕಾಗುತ್ತದೆ.

ಕೃಷಿಕರು ಬೀಜವನ್ನು ಬಿತ್ತನೆ ಮಾಡಿದ ನಂತರ ಹದವರಿತು ಮಳೆಯಾದರೆ ೯೦ ದಿನದಿಂದ ೧೨೦ ದಿನಗಳಲ್ಲಿ ಬೆಳೆಯು ಕೊಯ್ಯುವ ಹಂತಕ್ಕೆ ಬರುತ್ತದೆ. ಆ ಬೆಳೆಯನ್ನು ಕೊಯ್ಯುವುದು, ಕಣಕ್ಕೆ ಸಾಗಿಸುವುದು, ಧಾನ್ಯಗಳನ್ನು ಒಕ್ಕುವುದು, ಅದನ್ನು ಮನೆಗೆ ಸಾಗಿಸುವ ಮತ್ತು ಮಾರುಕಟ್ಟೆಗೆ ಸಾಗಿಸುವ ಹಾಗು ಇನ್ನಿತರ ವೆಚ್ಚಕ್ಕೆ ಒಳಗಾಗಬೇಕಾಗುತ್ತದೆ. ಈ ಎಲ್ಲಾ ಹಂತದ ವೆಚ್ಚವು ಅವರು ಹೊಂದಿರುವ ಭೂಮಿಯ ಗಾತ್ರಕ್ಕೆ ಅನುಗುಣವಾಗಿ ಇರುತ್ತದೆ. ಕೃಷಿ ಚಟುವಟಿಕೆಗಳು ಭೂಮಿಯನ್ನು ಹದಗೊಳಿಸುವುದರಿಂದ ಮಾರುಕಟ್ಟೆಗೆ ಸಾಗಿಸುವವರೆಗಿನ ವಿವಿಧ ಹಂತಗಳ ವೆಚ್ಚಗಳನ್ನು ಒಳಗೊಂಡಿರುತ್ತದೆ. ಒಟ್ಟು ಕೃಷಿ ಚಟುವಟಿಕೆಗಳಲ್ಲಿ ೨೫ ಕುಟುಂಬಗಳು ಪೂರ್ಣ ಪ್ರಮಾಣದಲ್ಲಿ ಕೃಷಿಯಲ್ಲಿ ತೊಡಗಿಸಿಕೊಂಡರೆ ಇನ್ನುಳಿದ ೧೫ ಕುಟುಂಬಗಳು ಭಾಗಶಃ ಕೃಷಿಕರಾಗಿದ್ದಾರೆ. ಅವರು ಆ ಪ್ರದೇಶದಲ್ಲಿ ಚಿಲ್ಲರೆ ವ್ಯಾಪಾರಿಗಳಾಗಿದ್ದು, ವ್ಯಾಪಾರದ ಜೊತೆಯಲ್ಲಿ ಕೃಷಿಯನ್ನು ನೋಡಿಕೊಳುತ್ತಾರೆ.

೪೦ ಕುಟುಂಬಗಳ ಮೂರು ಹಂತದ ಸರಾಸರಿ ವೆಚ್ಚಗಳನ್ನೊಳಗೊಂಡಿದೆ. ತುಂಗಭದ್ರಾ ಗ್ರಾಮೀಣ (ಪಿ.ಜಿ.ಬ್ಯಾಂಕ್) ಬ್ಯಾಂಕಿನ ಸಾಲದ ಪೂರ್ವದಲ್ಲಿ ಸರಾಸರಿ ೩೮೭೫ ರೂಪಾಯಿಗಳ ಒಟ್ಟು ವೆಚ್ಚವನ್ನು ಒಳಗೊಂಡಿರುತ್ತಾರೆ. ಆದರೆ ಬ್ಯಾಂಕ್‌ಸಾಲದ ನಂತರ ಇವರ ಸರಾಸರಿ ವೆಚ್ಚವು ೧೮,೦೦೦ ಅಧಿಕವಾಗಿದೆ. ನಿವ್ವಳ ವೆಚ್ಚದ ಹೆಚ್ಚಳವು ೧೪,೧೨೫ ರೂಪಾಯಿಗಳಾಗಿದ್ದು ಅದು ಪ್ರತಿಶತ ೩.೬೪ರಷ್ಟು ಅಧಿಕವಾಗಿರುವುದನ್ನು ಪಟ್ಟಿ ೪ರಲ್ಲಿ ಕಾಣಬಹುದಾಗಿದೆ. ಮರಿಯಮ್ಮನಹಳ್ಳಿ ಪಿಜಿಬಿ ಶಾಖೆಯ ವ್ಯಾಪ್ತಿಯಲ್ಲಿನ ಫಲಾನುಭವಿಗಳನ್ನು ಭೇಟಿ ಮಾಡಿದಾಗ ಅವರೆಲ್ಲರೂ ಬೆಳೆಸಾಲವನ್ನು ಕಿಸಾನ್ ಕ್ರೆಡಿಟ್‌ಕಾರ್ಡಗಳ ಮೂಲಕ ಪಡೆದಿದ್ದಾರೆ. ಇವರಿಗೆ ಬ್ಯಾಂಕು ಕನಿಷ್ಟ ೧೦,೦೦೦ ರೂಪಾಯಿಗಳಿಂದ ೨೫,೦೦೦ರೂಗಳ ಗರಿಷ್ಠ ಸಾಲವನ್ನು ಮಂಜೂರು ಮಾಡಿದ್ದಾರೆ.

## ಪಟ್ಟಿ ೪

## ಒಟ್ಟು ಉತ್ಪಾದನಾ ವೆಚ್ಚ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೨೫ | ೫೨೫೦ | ೨೦೦೦೦ | ೧೪೭೫೦ | ೨೮೦ |
| ೦೨. | ಗ್ರಾಮೀಣ ವ್ಯಾಪಾರಿಗಳು | ೪೦ | ೨೫೦೦ | ೧೬೦೦೦ | ೧೩೫೦೦ | ೫೪೦ |
| | | ೪೦ | ೩೮೭೫ | ೧೮೦೦೦ | ೧೪೧೨೫ | ೩೬೪ |

ಪ್ರಸ್ತುತ ಈ ಬ್ಯಾಂಕುಗಳು ಪ್ರತಿಶತ ೭ರಷ್ಟು ಬಡ್ಡಿಯನ್ನು ಬೆಳೆಸಾಲಕ್ಕೆ ವಿಧಿಸುವುದರಿಂದ ಸಾಲ ಪಡೆಯುವ ಕೃಷಿಕರ ಸಂಖ್ಯೆ ಅಧಿಕವಾಗಿರುವುದನ್ನು ಕಾಣಬಹುದು.

### ೪. ಉತ್ಪಾದನೆ

ಮುಂಗಾರು ಮತ್ತು ಹಿಂಗಾರು ಬೆಳೆಗಳ ಉತ್ಪಾದನೆಯು ವರ್ಷದ ಸಮಗ್ರ ಉತ್ಪಾದನೆಯಾಗಿರುತ್ತದೆ. (ಗ್ರಾಮೀಣ ಬಾಂಕುಗಳ ಸಾಲದ ಪೂರ್ವ ಮತ್ತು ನಂತರ) ಈ ಕುಟುಂಬಗಳು ತಮಗೆ ಬೇಕಾದ ಆಹಾರ ಪದಾರ್ಥಗಳನ್ನು ಹೆಚ್ಚಾಗಿ ಬೆಳೆದು ತಮ್ಮ ಉಪಯೋಗಕ್ಕೆ ಬೇಕಾದಷ್ಟು ಇಟ್ಟುಕೊಂಡು ಅಧಿಕವಾಗಿದ್ದನ್ನು ಮಾರಾಟ ಮಾಡುತ್ತಾರೆ.

ಕೃಷಿಕರು ಬ್ಯಾಂಕು ಅಸ್ತಿತ್ವದ ಪೂರ್ವದಲ್ಲಿ ಹೆಚ್ಚಾಗಿ ಸಾಲವನ್ನು ದಲ್ಲಾಳಿಗಳು ಮಧ್ಯವರ್ತಿಗಳಿಂದ, ಸಾಹುಕಾರರಿಂದ ಮತ್ತು ಸಹಕಾರ ಸಂಘಗಳಿಂದ ಪಡೆಯುತ್ತಿದ್ದರು. ಆ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹಣಕಾಸಿನ ವಹಿವಾಟನ್ನು ನಡೆಸುವವರು ಅವರೇ ಆಗಿದ್ದರು. ಇತ್ತೀಚಿನ ದಿನಗಳಲ್ಲೂ ಕೂಡ ಇದ್ದಾರೆ. ಆದರೆ ಬೃಹತ್ ಪ್ರಮಾಣದಲ್ಲಿ ಬ್ಯಾಂಕು ಸ್ಥಾಪನಾ ಪೂರ್ವದಲ್ಲಿ ಕೃಷಿಕರು ಸಂಪ್ರದಾಯ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅವರು ತಾವು ಉತ್ಪಾದನೆ ಮಾಡಿದ ಬೀಜಗಳನ್ನೇ ತೆಗೆದಿಟ್ಟು ಪುನಃ ಭೂಮಿಯಲ್ಲಿ ಬಿತ್ತಲು ಉಪಯೋಗಿಸುತ್ತಿದ್ದರು. ರಾಷ್ಟ್ರದಲ್ಲಿ ಹಸಿರು ಕ್ರಾಂತಿಯಾದ ನಂತರ ಅಧಿಕ ಇಳುವರಿ ಕೊಡುವ ಬೀಜಗಳನ್ನು, ರಾಸಾಯನಿಕ ಗೊಬ್ಬರಗಳನ್ನು ಕ್ರಿಮಿನಾಶಕಗಳ ಉಪಯೋಗವನ್ನು ಕಂಡುಕೊಂಡರು. ಈ ಪ್ರದೇಶದಲ್ಲಿ ಬ್ಯಾಂಕು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಗ್ರಾಮೀಣ ಜನಪದರಿಗೆ ಬೇಕಾದ ಅಲ್ಪಾವಧಿ ಸಾಲ (ಬೆಳೆಸಾಲ) ದೊರೆತ ನಂತರ ಆಧುನಿಕ ಬೇಸಾಯ ಪದ್ಧತಿಯನ್ನು ಅನುಸರಿಸಿ ಉತ್ತಮ ಬೆಳೆಯನ್ನು ಬೆಳೆಯಲು ಯತ್ನಿಸಿದ್ದಾರೆ. ತಮ್ಮ ಪ್ರದೇಶಗಳಲ್ಲಿ ಜೋಳ, ಮೆಕ್ಕೆಜೋಳ, ನವಣೆ, ಸೂರ್ಯಕಾಂತಿ, ಈರುಳ್ಳಿ, ತರಕಾರಿ, ಮೆಣಸಿನಕಾಯಿ, ಹತ್ತಿ, ಶೇಂಗಾ

ಮುಂತಾದವುಗಳನ್ನು ಬೆಳೆಯುತ್ತಾರೆ. ಆ ಮೂಲಕ ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

ಈ ಪ್ರದೇಶವು ಮಳೆಯಾಧಾರಿತ ಪ್ರದೇಶವಾಗಿದ್ದು ಬ್ಯಾಂಕ್ ಸಾಲದ ನಂತರದಲ್ಲಿ ವರಮಾನ ಮತ್ತು ಉತ್ಪಾದನಾ ವೆಚ್ಚಗಳೆರಡರಲ್ಲೂ ಅಧಿಕವಾಗಿದೆ. ೩೫ ಕುಟುಂಬಗಳ ವರಮಾನವು ಇನ್ನಿತರ ೧೫ ಕುಟುಂಬಗಳ ವರಮಾನಕ್ಕಿಂತ ಅಧಿಕವಾಗಿದೆ. ಏಕೆಂದರೆ ಸಣ್ಣ ಮತ್ತು ಅತಿಸಣ್ಣ ರೈತರು ತಮ್ಮನ್ನು ಪೂರ್ಣ ಪ್ರಮಾಣದಲ್ಲಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ೧೫ ಗ್ರಾ.ವ್ಯಾಪಾರಸ್ಥರಿಗೆ ವ್ಯಾಪಾರವು ಮುಖ್ಯವಾಗಿರುವುದರಿಂದ ಕೃಷಿ ಚಟುವಟಿಕೆಗಳಿಂದ ಅವರಿಗೆ ದೊರಕುವ ವರಮಾನ ಕೃಷಿಕರಿಗಿಂತ ಕಡಿಮೆಯಾಗಿದೆ. ಇವರು ಉತ್ಪಾದನೆ ಮಾಡಿದ ಬೆಳೆಗಳನ್ನು ವಿವಿಧ ಮಾರುಕಟ್ಟೆಯಲ್ಲಿ ವಿವಿಧ ಬೆಲೆಗೆ ಮಾರಾಟ ಮಾಡಿರುತ್ತಾರೆ. ಇದರಿಂದಾಗಿ ತಮ್ಮ ವರಮಾನ ಹೆಚ್ಚಿಸಿಕೊಳ್ಳುವಲ್ಲಿ ಸಫಲರಾಗಿದ್ದಾರೆ.

**ಪಟ್ಟಿ ೫**

**ಉತ್ಪಾದನೆ**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಕೆಜಿಬಿ ಸಾಲದ ಪೂರ್ವ | | ಕೆಜಿಬಿ ಸಾಲದ ನಂತರ | | ನಿವ್ವಳ ಹೆಚ್ಚಳ | |
|---|---|---|---|---|---|---|---|---|
| | | | ಪ್ರಮಾಣ ಕ್ವಿ | ಮೌಲ್ಯ ರೂ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂ |
| ೧ | ಸಣ್ಣ/ಅತಿಸಣ್ಣ ರೈತರು | ೨೫ | ೩೦ | ೮೬೭೦ | ೫೫ | ೨೪೯೨೦ | ೨೫ (೮೩) | ೧೬೨೫೦ (೧೮೭.೪) |
| ೨ | ಗ್ರಾಮೀಣ ವ್ಯಾಪಾರಸ್ಥರು | ೧೫ | ೧೮ | ೫೦೪೦ | ೩೬ | ೧೬೭೪೦ | ೧೮ (೧೦೦) | ೧೧೭೦೦ (೨೩೨) |
| | ಸರಾಸರಿ | ೪೦ | ೨೪ | ೬೮೫೫ | ೪೫.೫ | ೨೦೮೩೦ | ೨೧.೫ (೮೯.೬) | ೧೩೯೭೫ (೨೦೩) |

(ಬ್ರಾಕೇಟಿನಲ್ಲಿರುವ ಅಂಶವು ಒಟ್ಟು ಪ್ರತಿಶತವನ್ನು ಸೂಚಿಸುತ್ತದೆ)

೫೦ ಕುಟುಂಬಗಳ ಕೃಷಿ ಉತ್ಪಾದನೆ ಬ್ಯಾಂಕ್ ಸಾಲದ ಪೂರ್ವದಲ್ಲಿ ಸರಾಸರಿ ೨೪ ಕ್ವಿಂಟಾಲ್‌ನಷ್ಟಾದರೆ ಸಾಲದ ನಂತರದಲ್ಲಿರುವ ೪೫.೫ ಕ್ವಿಂಟಾಲ್‌ನಷ್ಟು ಉತ್ಪಾದನೆ ಅಧಿಕವಾಗಿದೆ. ನಿವ್ವಳ ಉತ್ಪಾದನೆ ಸರಾಸರಿ ೨೧.೫ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ ಮತ್ತು ಅದರ ಮೌಲ್ಯವು ೧೩,೯೭೫ರೂಗಳಾಗಿದ್ದು ಅದು ಪ್ರತಿಶತದಲ್ಲಿ ೨೦೩ರಷ್ಟು ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದಾಗಿದೆ. ಸಣ್ಣ, ಅತಿಸಣ್ಣ ರೈತರ ಒಟ್ಟು ಉತ್ಪಾದನೆಯು ೩೦ ಕ್ವಿಂಟಾಲ್‌ನಿಂದ ೫೫ ಕ್ವಿಂಟಾಲ್ ಅಧಿಕವಾಗಿದ್ದು ಅದು ಪ್ರತಿಶತ ೮೩ರಷ್ಟಕ್ಕೆ ಅಧಿಕವಾಗಿದ್ದು ಮೌಲ್ಯವು ೮೬೭೦ ರೂಪಾಯಿಗಳಿಂದ ೨೪,೯೨೦ ರೂಪಾಯಿಗಳಿಗೆ ಅಧಿಕವಾಗಿದೆ. ಅದರ ಪ್ರತಿಶತಮೌಲ್ಯ ೧೮೭.೪ರಷ್ಟಾಗಿದೆ.

ಕೃಷಿ ಉತ್ಪಾದನೆಯು ಬ್ಯಾಂಕಿನ ಸಾಲದ ನಂತರದಲ್ಲಿ ಅಧಿಕವಾಗಿದೆ. ಕೃಷಿ ವರಮಾನವು ಸರಾಸರಿ ೬೮೫೫ರೂಪಾಯಿಗಳಿಂದ ೨೯,೫೭೫ರೂಗಳಿಗೆ ಅಧಿಕವಾಗಿದೆ. ಹಾಗೆಯೇ ವೆಚ್ಚವು ಕೂಡ ೩೮೭೫ರೂಗಳಿಂದ ೧೮,೦೦೦ಸಾವಿರ ರೂಪಾಯಿಗಳಿಗೆ ಅಧಿಕವಾಗಿದೆ. ವರಮಾನವು ಹೆಚ್ಚಿದ ಹಾಗೆ ವೆಚ್ಚವು ಕೂಡ ಅಧಿಕವಾಗಿದೆ ಎನ್ನಬಹುದು. ೧೯೭೬ರಿಂದ ೨೦೦೬ರ ಕಾಲಾವಧಿಯಲ್ಲಿ ಉತ್ಪಾದನೆ ಪ್ರಮಾಣ ಅಧಿಕವಾಗಿದ್ದರೂ ಅದು ನಿರೀಕ್ಷಿತ ಪ್ರಮಾಣದಲ್ಲಿ ಸದೃಢವಾಗಿಲ್ಲ, ಏಕೆಂದರೆ ಈ ಬ್ಯಾಂಕಿನ ವ್ಯಾಪ್ತಿಯು ಸಂಪೂರ್ಣವಾಗಿ ಮಳೆಯಾಧಾರಿತ ಪ್ರದೇಶವಾಗಿದ್ದು, ಹದನಾದ ಮಳೆಯ ಕೊರತೆಯೇ ಅಧಿಕ ಉತ್ಪಾದನೆಗೆ ತೊಡಕಾಗಿದೆ ಎನ್ನಬಹುದು. ಆದರೂ ಕೃಷಿ ಚಟುವಟಿಕೆಗಳ ಮೇಲೆ ಈ ಗ್ರಾಮೀಣ ಬ್ಯಾಂಕಿನ ಪತ್ತಿನ ಪ್ರಭಾವವನ್ನು ಕಾಣಬಹುದು.

**೫. ವಿವಿಧ ವಲಯಗಳ ವರಮಾನ**

ಟಿಜಿಬಿ ಸಾಲವು ಸಮಾಜದಲ್ಲಿನ ದುರ್ಬಲ ವರ್ಗದವರ, ಆದ್ಯತಾ ವಲಯದವರ, ಪರಿಶಿಷ್ಟಜಾತಿ, ಪಂಗಡದವರ ಮೇಲೆ ಹೇಗೆ ಪ್ರಭಾವ ಬೀರಿದೆ ಹಾಗೆಯೇ ಅವರು ತಮ್ಮ ವರಮಾನವನ್ನು ಹೇಗೆ ಹೆಚ್ಚಿಸಿಕೊಂಡಿದ್ದಾರೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ದುರ್ಬಲ ವರ್ಗದವರೆಂದರೆ (ಸಣ್ಣ, ಅತಿಸಣ್ಣ ರೈತರು ಚಿಲ್ಲರೆ ವ್ಯಾಪಾರಿಗಳು, ಭೂರಹಿತ ಕಾರ್ಮಿಕರು, ಕರಕುಶಲ ಕರ್ಮಿಗಳು, ಸಣ್ಣ ಉದ್ದಿಮೆದಾರರು)

**೧. ಕೃಷಿ**

ಪಿಜಿಬಿ ಬ್ಯಾಂಕಿನ ಸಾಲದ ಪೂರ್ವದಲ್ಲಿ ಇವರ ವರಮಾನವು ೬೮೫೫ ರೂಪಾಯಿಗಳಾಗಿದ್ದು ಟಿಜಿಬಿ ಸಾಲದ ನಂತರ ೨೦೦೬ನೇ ವರ್ಷದಲ್ಲಿ ೨೯೫೭೫ ರೂಪಾಯಿಗಳಿಗೆ ಅಧಿಕವಾಗಿದೆ. ನಿವ್ವಳ ೧೩,೯೭೫ ರೂಗಳಿಗೆ ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದಾಗಿದೆ. ಬ್ಯಾಂಕಿನ ಸಾಲವು ಈ ವಲಯದ ಮೇಲೆ ಪ್ರಭಾವಬೀರಿದೆ ಎನ್ನಬಹುದು.

**೨. ಕೃಷಿ ಅವಲಂಬಿತ/ಭೂರಹಿತ ಕಾರ್ಮಿಕರು**

ಇವರು ಮೊದಲೇ ಭೂ ರಹಿತರಾಗಿದ್ದು, ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕಾರ್ಮಿಕರಾಗಿ ದುಡಿದು ಜೀವನ ನಿರ್ವಹಣೆ ಮಾಡುತ್ತಿದ್ದರು. ಆದರೂ ಜೀವನವು ಸಂಪೂರ್ಣವಾಗಿ ಬಡತನದಿಂದ ಕೂಡಿತ್ತು. ಇವರು ತಮ್ಮ ವರಮಾನ ಸುಧಾರಣೆಗೆ ಒಂದೆರಡು ಕುರಿ, ಮೇಕೆ ಹಾಗೂ ಹಸುಗಳನ್ನು ಸಾಕುತ್ತಿದ್ದರು. ಆ ಮೂಲಕ ತಮ್ಮ ಜೀವನ ನಿರ್ವಹಣೆ ಮಾಡುತ್ತಿದ್ದರು. ಆದರೆ ಸರ್ಕಾರದ ಕೆಲವೊಂದು ಕಾರ್ಯಕ್ರಮಗಳು ಪಿಜಿಬಿ ಬ್ಯಾಂಕನ ಮೂಲಕ ಜನಪದರಿಗೆ ದೊರೆತಾಗ ಅವರು ವಿಶೇಷವಾಗಿ ಎಮ್ಮೆಗಳ, ಹಸುಗಳ ಸಾಲವನ್ನು ಪಡೆದು ಆ ಮೂಲಕ ತಮ್ಮ ಜೀವನಮೌಲ್ಯ ಸುಧಾರಣೆಗೆ ಪ್ರಯತ್ನಿಸಿದ್ದಾರೆ. ಮರಿಯಮ್ಮನಹಳ್ಳಿ ಶಾಖೆಯು ಚಿಲಕನಹಟ್ಟಿ ಮತ್ತು ತಿಮ್ಮಲಾಪುರದ ಗ್ರಾಮದ ಭೂರಹಿತ ಕಾರ್ಮಿಕರಿಗೆ ೭೫೦೦ಗಳಿಂದ ೨೦ಸಾವಿರ ರೂಗಳವರೆಗೆ ಹಸು, ಎಮ್ಮೆ ಸಾಲಗಳನ್ನು ಒದಗಿಸಿದೆ. ಅದರಲ್ಲಿ ಕೆಲವರಿಗೆ

ಪ್ರತಿಶತ ೫೦ರಷ್ಟು ಧನಸಹಾಯ ಒದಗಿಸಿದೆ. ಇನ್ನುಳಿದ ಹಣವನ್ನು ಮಾತ್ರ ಬ್ಯಾಂಕ್ ಸಾಲ ತೀರಿಸಬೇಕು. ಇವರಿಗೆ ಬೇಕಾದ ಮೇವು, ನೀರು, ನೆರಳು ಆ ಭಾಗದಲ್ಲಿ ಸ್ವಲ್ಪ ಪ್ರಮಾಣದಲ್ಲಿ ಅರಣ್ಯ ಪ್ರದೇಶವಿರುವುದರಿಂದ ಮೇವಿನ ಕೊರತೆಯಿಲ್ಲ. ಹಾಗಾಗಿ ಇವರ ವರಮಾನದ ಪ್ರಮಾಣವು ೧೦೦೦ರೂಪಾಯಿಗಳಿಂದ ೨೦,೦೦೦ರೂಪಾಯಿಗಳ ವರೆಗೆ ಅಧಿಕವಾಗಿದೆ ಎನ್ನಬಹುದು. ಹೈನುಗಾರಿಕೆಯು ಅಧಿಕವಾಗಿರುವುದರಿಂದ ಪ್ರತಿನಿತ್ಯ ಡೈರಿಗೆ ಹಾಲುಹಾಕಿ ಅದರಿಂದ ಬಂದಂತಹ ವರಮಾನದಿಂದ ತಮ್ಮ ಜೀವನ ನಿರ್ವಹಣೆ ಮಾಡಿ, ಬಡತನ ರೇಖೆಯನ್ನು ದಾಟಲು ಬ್ಯಾಂಕಿನ ಸಾಲವು ಉತ್ತೇಜನಕಾರಿಯಾಗಿದೆ ಎಂದಿದ್ದಾರೆ. ೨೦ ಭೂರಹಿತ ಕಾರ್ಮಿಕರನ್ನು ಸಮೀಕ್ಷೆಗೆ ಒಳಪಡಿಸಿದಾಗ ತಮಗೆ ಬ್ಯಾಂಕು ಸಾಲ ನೀಡಿದ್ದು, ಅದರಲ್ಲಿ ಪ್ರತಿಶತ ೫೦ರಷ್ಟು ಸಹಾಯಧನ ಪಡೆದು ತಮ್ಮ ಜೀವನ ಸುಧಾರಣೆಗೆ ಸಹಾಯವಾಗಿದೆ ಎಂದಿದ್ದಾರೆ. ಭೂರಹಿತ ಕಾರ್ಮಿಕರಲ್ಲಿ ೪ ಜನಪದರು ಮಾತ್ರಸಾಲ ಮರುಪಾವತಿ ಮಾಡಿಲ್ಲ. ಇನ್ನುಳಿದ ಕುಟುಂಬಗಳು ಸಾಲ ಮರುಪಾವತಿ ಮಾಡುತ್ತಾ ಬಂದಿದ್ದು, ತಮ್ಮ ವರಮಾನದ ಜೊತೆಗೆ ಜೀವನ ಮಟ್ಟ ಸುಧಾರಿಸಿಕೊಳ್ಳಲು ಸಹಾಯಕವಾಗಿದೆ ಎಂದಿದ್ದಾರೆ.

**ಪಟ್ಟಿ ೬**

**ಭೂರಹಿತ ಕಾರ್ಮಿಕರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಭೂರಹಿತ ಕಾರ್ಮಿಕರು | ೨೦ | ೧೦೦೦ | ೨೦೦೦೦ | ೧೯೦೦೦ | ೧೯೦೦ |

ಬ್ಯಾಂಕ್ ಸಾಲದ ನಂತರದಲ್ಲಿ ಇವರ ವರಮಾನವು ೧೦೦೦ರೂಗಳಿಂದ ೨೦,೦೦೦ರೂಗಳವರೆಗೆ ಅಧಿಕವಾಗಿದೆ. ಅದರ ಪ್ರತಿಶತ ಹೆಚ್ಚಳ ೧೯೦೦ರಷ್ಟು ಅಧಿಕವಾಗಿದೆ. ಕಾರಣವೆಂದರೆ ಇವರಿಗೆ ಪ್ರತಿಶತ ೫೦ರಷ್ಟು ಸಹಾಯಧನ ದೊರೆತಿರುವುದು, ಹಾಲಿನ ಬೇಡಿಕೆಯ ಪ್ರಮಾಣವು ಅಧಿಕವಾಗಿರುವುದರಿಂದ ಈ ಕುಟುಂಬಗಳ ವರಮಾನ ಅಧಿಕವಾಗಿದೆ. ಹಾಗೆಯೇ ಇವುಗಳ ನಿರ್ವಹಣಾ ವೆಚ್ಚವು ಕೂಡ ಜಾಸ್ತಿಯಾಗಿದೆ. ಮೊದಲು ಪ್ರತಿ ಹಳ್ಳಿಗಳಿಗೆ ಗೋಮಾಳಗಳಿದ್ದವು. ಈಗ ಅವುಗಳಿಲ್ಲ. ಅವುಗಳಿಗೆ ಬೇಕಾದ ಮೇವು, ಔಷಧಿ ಉಪಚಾರಗಳನ್ನು ನಿರ್ವಹಿಸಬೇಕಾಗುತ್ತದೆ. ಒಟ್ಟಿನಲ್ಲಿ ಈ ಕುಟುಂಬಗಳ ವರಮಾನ\ಜೀವನಮಟ್ಟ, ಹಾಗೂ ವಿರುದ್ಯೋಗ ಮುಂತಾದವುಗಳು ಬ್ಯಾಂಕ್ ಸಾಲದ ನಂತರದಲ್ಲಿ ಸುಧಾರಿಸಿವೆ ಎಂದು ಮನಃಪೂರ್ವಕವಾಗಿ ತಿಳಿಸಿದ್ದಾರೆ.

**೩. ಕರಕುಶಲ ಕರ್ಮಿಗಳು/ಸಣ್ಣ ಉದ್ದಿಮೆದಾರರು**

ಸಂಪ್ರದಾಯಬದ್ಧವಾದಂತಹ ಗ್ರಾಮೀಣ ಕೈಗಾರಿಕೆಗಳೆಂದರೆ ನೂಲುವುದು, ನೇಯುವುದು, ಬುಟ್ಟಿ ಹೆಣೆಯುವುದು, ಎಣ್ಣೆಗಿರಣಿ ಇನ್ನು ಮುಂತಾದ ಕಸುಬುಗಳಿದ್ದವು. ಪುರಾತನ ಕಾಲದಿಂದ ಬಂದಂತಹ

ವೃತ್ತಿಗಳು ಈಗ ಕಣ್ಮರೆಯಾಗತೊಡಗಿವೆ. ಇತ್ತೀಚಿನ ದಿನಗಳಲ್ಲಿ ಬಟ್ಟೆ ಹೊಲಿಯುವರು, ಹೊಟೇಲ್ ಉದ್ಯಮದವರು, ಬಡಗಿ ಕಮ್ಮಾರರು, ಪೈಪ್‌ಮಾಡುವವರು, ಸೋಡ ಮಾಡುವವರು, ಹಿಟ್ಟಿನ ಗಿರಣಿ, ಅಕ್ಕಸಾಲಿಗರು ಇನ್ನು ಮುಂತಾದವರು ತಮ್ಮ ಉತ್ಪಾದನೆ ಮತ್ತು ಸೇವೆಯಿಂದ ವರಮಾನ ಪಡೆಯುತ್ತಾ ಬಂದಿದ್ದಾರೆ. ಇವರ ವರಮಾನವು ಗ್ರಾ.ಬ್ಯಾ. ಸಾಲದ ಪೂರ್ವದಲ್ಲಿ ೧೫೦೦ರೂಪಾಯಿಗಳಾಗಿದ್ದಿತು. ಆದರೆ ಪಿ.ಜಿ.ಬಿನ ಸಾಲದ ನಂತರದಲ್ಲಿ ಇವರ ವರಮಾನವು ಅಧಿಕವಾಗಿದೆ. ಏಕೆಂದರೆ ಹೋಟೆಲ್ ಉದ್ಯಮ ಅತ್ಯಂತ ಅವಶ್ಯಕ. ಟೈಲರಿಂಗ್, ಅಕ್ಕಸಾಲಿಗರು, ಹಿಟ್ಟಿನ ಗಿರಣಿಗಳು, ಬಡಗಿತನದ ಉಪಕರಣಗಳು ಇವುಗಳೆಲ್ಲದರ ಬೇಡಿಕೆ ಹೆಚ್ಚಾಗಿರುವುದರಿಂದ ಅದರ ಉತ್ಪಾದನೆಯು ಅತ್ಯಧಿಕವಾಗಿದೆ. ಸಮೀಕ್ಷೆಗೊಳಪಡಿಸಿದ ೨೫ ಕುಟುಂಬಗಳಲ್ಲಿ ಅವರ ಸಾಲದ ಪೂರ್ವ ಪರಿಸ್ಥಿತಿ ಬಹಳಷ್ಟು ಕಷ್ಟವಾಗಿತ್ತು. ಆದರೆ ಸಾಲದ ನಂತರದಲ್ಲಿ ತಮ್ಮ ಸ್ಥಿತಿ ಉತ್ತಮವಾಗಿದೆ. ಇದರಿಂದಾಗಿ ಪಡೆದ ಸಾಲವನ್ನು ಸರಿಯಾದ ಸಮಯದಲ್ಲಿ ಮರುಪಾವತಿಮಾಡಿ ಪುನಃ ಹೊಸಸಾಲ ಪಡೆಯಲು ಬಹಳಷ್ಟು ಸಹಾಯಕಾರಿಯಾಗಿದೆ ಎಂದಿದ್ದಾರೆ. ಪ್ರತಿದಿನ ತಮ್ಮ ಉತ್ಪನ್ನಕ್ಕೆ ಬೇಡಿಕೆ ಇರುವುದರಿಂದ ಪಿಗ್ಮಿರೂಪದಲ್ಲಿ ಹಣವನ್ನು ಸಂಗ್ರಹಿಸಿ ಮರುಪಾವತಿ ಮಾಡುತ್ತೇವೆ ಎಂದಿದ್ದಾರೆ. ಇವರೆಲ್ಲರ ಸರಾಸರಿ ವರಮಾನ ೨೦,೦೦೦ಕ್ಕಿಂತಲೂ ಅಧಿಕವಾಗಿದೆ ಎಂದಿದ್ದಾರೆ. ಇದನ್ನು ಪಟ್ಟಿ ಸಂಖ್ಯೆ ೭ರಲ್ಲಿ ಕಾಣಬಹುದು.

**ಪಟ್ಟಿ ೭**

**ಸಣ್ಣ ಉದ್ದಿಮೆದಾರರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಟಿಜಿಬಿ ಸಾಲದ ಪೂರ್ವ | ಟಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ಕರಕುಶಲ ಕರ್ಮಿಗಳು/ ಸಣ್ಣ ಉದ್ದಿಮೆದಾರರು | ೨೫ | ೧೫೦೦ | ೨೦,೦೦೦ | ೧೮೫೦೦ | ೧೨೩೩ |

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಈ ಉದ್ಯಮದವರು ಕಾಲಕ್ಕೆ ತಕ್ಕಂತೆ ಹೊಂದಿಕೊಂಡು ತಮ್ಮ ಉತ್ಪನ್ನವನ್ನು ಬ್ಯಾಂಕ್‌ನ ಸಹಕಾರದಿಂದ ಉತ್ಪಾದಿಸಿದ್ದಾರೆ. ಆ ಉತ್ಪನ್ನದ ಮಾರಾಟದಿಂದ ವರಮಾನವನ್ನು ೨೦,೦೦೦ರೂಗಳಿಗೆ ಹೆಚ್ಚಿಸಿಕೊಂಡಿದ್ದಾರೆ. ನಿವ್ವಳ ಹೆಚ್ಚಳ ೧೮,೫೦೦ರೂಗಳಾದರೆ ಪ್ರತಿಶತ ಹೆಚ್ಚಳ ೧೨೩೩ರಷ್ಟು ಅಧಿಕವಾಗಿದೆ. ಅದು ವಾರ್ಷಿಕವಾಗಿ ೮೨.೨ರಷ್ಟು ಬೆಳವಣಿಗೆಯನ್ನು ಕಳೆದ ೧೬ ವರ್ಷಗಳಲ್ಲಿ ಕಾಣಬಹುದಾಗಿದೆ.

### ೪. ಗ್ರಾಮೀಣ ವ್ಯಾಪಾರಿಗಳು

ಗ್ರಾಮೀಣ ಪ್ರದೇಶದಲ್ಲಿನ ವ್ಯವಹಾರಗಳೆಂದರೆ ಕಿರಾಣಿ ಅಂಗಡಿ, ಬಟ್ಟೆ ವ್ಯಾಪಾರ, ಹೂವಿನ

ಅಂಗಡಿ, ತರಕಾರಿ ವ್ಯಾಪಾರ, ಹಾಲಿನ ವ್ಯಾಪಾರ, ಪಾತ್ರೆ ಸಾಮಾನು ವ್ಯಾಪಾರ, ಸಾಂಬಾರ ಪದಾರ್ಥಗಳ ವ್ಯಾಪಾರಗಳಾಗಿರುತ್ತವೆ. ಗ್ರಾಮೀಣ ಪ್ರದೇಶದಲ್ಲಿ ಇವರೆಲ್ಲರೂ ತಮ್ಮ ವ್ಯವಹಾರವನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ. ಇವರ ವರಮಾನವು ಬ್ಯಾಂಕ್‌ಸಾಲದ ಪೂರ್ವದಲ್ಲಿ ೨೦೦೦ರೂಪಾಯಿಗಳಾಗಿದ್ದು, ಸಾಲದನಂತರದಲ್ಲಿ ಇವರ ವರಮಾನವು ಗಣನೀಯ ಪ್ರಮಾಣದಲ್ಲಿ ಅಧಿಕವಾಗಿರುವುದನ್ನು ಕಾಣಬಹುದು. ಇಲ್ಲಿ ಸಮೀಕ್ಷಿಸಿದ ೧೫ ಕುಟುಂಬಗಳು ತಾವು ಬ್ಯಾಂಕನಿಂದ ಸಾಲಪಡೆದ ನಂತರ ತಮ್ಮ ವ್ಯವಹಾರ ಸುಧಾರಿಸಿದೆ. ತಮ್ಮ ಮಾರಾಟಕ್ಕೆಬೇಕಾದ ಸರಕುಗಳನ್ನು ಪಟ್ಟಣದಿಂದ ತಂದು ಮಾರಾಟ ಮಾಡುತ್ತೇವೆ. ತಾವು ಕೊಂಡ ವಸ್ತುಗಳಿಗೆ ಪ್ರತಿಶತ ೨೦ ರಿಂದ ೨೫ರಷ್ಟು ಬೆಲೆಯನ್ನು ಅಧಿಕಗೊಳಿಸಿ ಮಾರಾಟ ಮಾಡುವುದರಿಂದ ನಮಗೆ ಅನುಕೂಲವಾಗಿದೆ ಎನ್ನುತ್ತಾರೆ. ಬ್ಯಾಂಕ್‌ನಲ್ಲಿ ಸಾಲಪಡೆದು ನಿರಂತರವಾಗಿ ಸಾಲ ಪಡೆಯುವ ಮತ್ತು ಹಿಂದಿರುಗಿಸುವ ಕಾರ್ಯದಲ್ಲಿ ತೊಡಗಿಕೊಂಡಿರುವುದರಿಂದ ನಮ್ಮ ವರಮಾನ ಸುಧಾರಿಸಿದೆ ಎನ್ನುತ್ತಾರೆ. ಶಾಖೆಯಿಂದ ೧೦,೦೦೦ರೂ ನಿಂದ ೫೦,೦೦೦ರೂ ವರೆಗೆ ಸಾಲವನ್ನು ಪಡೆದಿದ್ದಾರೆಂದು ಬ್ಯಾಂಕ್‌ನ ಲೆಕ್ಕಪತ್ರಗಳು ತಿಳಿಸುತ್ತವೆ. ಅವರು ತಮ್ಮ ವ್ಯವಹಾರವನ್ನು ವೃದ್ಧಿಸಿಕೊಂಡಿದ್ದಾರೆ.

**ಪಟ್ಟಿ ೮**

**ಗ್ರಾಮೀಣ ವ್ಯಾಪಾರಿಗಳು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ವ್ಯಾಪಾರಸ್ಥರು | ೧೫ | ೨೫೦೦ | ೨೦೦೦೦ | ೧೭೫೦೦ | ೭೦೦ |

ಈ ಪಟ್ಟಿಯನ್ನು ಗಮನಿಸಿದಾಗ ಪಿಜಿಬಿ ಬ್ಯಾಂಕನ ಸಾಲದ ಪೂರ್ವದಲ್ಲಿ ವರಮಾನ ೨೫೦೦ರೂಗಳಿದ್ದು ಸಾಲದ ನಂತರದಲ್ಲಿ ೨೦,೦೦೦ರೂಗಳಿಗೆ ಅಧಿಕವಾಗಿದೆ. ೧೭೫೦೦ರೂಗಳಿಗೆ ಅಧಿಕವಾಗಿದ್ದು ಅದನ್ನು ಶೇಕಡವಾರಿಗೆ ಪರಿವರ್ತಿಸಿದಾಗ ಪ್ರತಿಶತ ೭೦೦ಪಟ್ಟು ಅಧಿಕವಾಗಿರುವುದನ್ನು ಕಾಣಬಹುದು. ಒಟ್ಟಾರೆಯಾಗಿ ನಾಲ್ಕುವರ್ಗಗಳೂ ಕೂಡ ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳುವಲ್ಲಿ ಈ ಬ್ಯಾಂಕ ಮಹತ್ತರವಾದ ಪಾತ್ರವಹಿಸಿದೆ ಎನ್ನುತ್ತಾರೆ.

### ೭. ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲ

ಸಾಂಸ್ಥಿಕೇತರ ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿ ಅನಾದಿ ಕಾಲವಧಿಯಿಂದಲೂ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾ ಬಂದಿದ್ದಾರೆ. ಸಾಹುಕಾರರು, ಸ್ನೇಹಿತರು, ಜಮೀನ್ದಾರರು, ಮದ್ಯವರ್ತಿಗಳು, ದಲ್ಲಾಳಿಗಳು ಬಂಧುಗಳು ಇನ್ನು ಮುಂತಾದವರಿಂದ ಜನಪದರು ತಮಗೆ ಬೇಕಾದ ಹಣಕಾಸಿನ ನೆರವನ್ನು ಪಡೆದಿದ್ದಾರೆ.

ಪಿಜಿಬಿ ಬ್ಯಾಂಕ ಸ್ಥಾಪನೆಯಾದ ಕಾಲಾನಂತರ ಇದರ ಪ್ರಭಾವವು ಕಡಿಮೆಯಾಗಿದೆ. ಇಂದು ಕೂಡ ಕೆಲವು ಕುಟುಂಬಗಳು ಸಗಟು ವ್ಯಾಪಾರಿಗಳಿಂದ ಬಾಳಿಕೆ ಬರುವ ವಸ್ತುಗಳನ್ನು ಸ್ವಲ್ಪ ಹಣಕೊಟ್ಟು, ಉಳಿದ ಹಣವನ್ನು ಕಂತಿನ ಆಧಾರದ ಮೇಲೆ ಮರುಪಾವತಿ ಮಾಡುತ್ತಾರೆ. ಇನ್ನು ಕೆಲವು ರೈತರು ದಲ್ಲಾಳರಿಂದ ಸಾಲ ಪಡೆದು ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ಇನ್ನು ಕೆಲವರು ಬೆಳೆಸಾಲವಾಗಿ ಮಧ್ಯವರ್ತಿಗಳಿಂದ ಸಾಲವನ್ನು ಪಡೆದಿದ್ದಾರೆ.

**ಪಟ್ಟಿ ೦೯**

**ಸಾಂಸ್ಥಿಕೇತರ ಹಣಕಾಸಿನ ಸಂಸ್ಥೆಗಳಿಂದ ಸಾಲ ಪಡೆದಿರುವುದು**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಟಿಜಿಬಿ ಸಾಲದ ಪೂರ್ವ | | | | ಟಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | A | B | C | D | A | B | C | D | A | B | C | D |
| ೦೧. | ಸಣ್ಣ/ಅತಿಸಣ್ಣ ರೈತರು | ೩೫ | ೧೫ | ೧೫ | ೨ | ೩ | ೩ | ೧ | .. | .. | ೩ | ೧ | .. | .. |
| ೦೨. | ಗ್ರಾ.ಕರಕುಶಲ/ಉದ್ದಿಮೆದಾರರು | ೨೫ | ೧೮ | ೫ | ೨ | .. | ೨ | ೧ | .. | .. | ೨ | ೧ | .. | .. |
| ೦೩. | ಗ್ರಾ.ವ್ಯಾಪಾರಸ್ಥರು | ೧೫ | ೧೩ | ೧ | ೧ | .. | ೨ | .. | .. | .. | ೨ | .. | .. | .. |
| ೦೪. | ಭೂ.ರಹಿತ ಕಾರ್ಮಿಕರು | ೨೫ | ೨೦ | ೩ | ೨ | .. | ೦೪ | .. | .. | .. | ೪ | .. | .. | .. |

A ಲೇವಾದೇವಿಗಾರರು **B** ವ್ಯಾಪಾರಸ್ಥರು **C** ಸ್ನೇಹಿತರು/ಬಂಧುಗಳು **D** ಇತರೆ

**೭. ಹಣಕಾಸಿನ ಸಂಸ್ಥೆಗಳ ಮೂಲಕ ಸಾಲ ಪಡೆದಿರುವುದು**

ಗ್ರಾಮೀಣ ಪ್ರದೇಶದಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳಾದ ಪ್ರಾಥಮಿಕ ಸಹಕಾರ ಸಂಘಗಳಿಂದಲೂ ಭೂ ಅಭಿವೃದ್ಧಿ ಬ್ಯಾಂಕು ಮತ್ತು ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯಲು ಪ್ರಯತ್ನಿಸುತ್ತಿದ್ದರು. ಆದರೆ ತುಂಗಭದ್ರಾ ಗ್ರಾಮೀಣ ಬ್ಯಾಂಕ್ ಸ್ಥಾಪನೆಯ ನಂತರದಲ್ಲಿ ಈ ಬ್ಯಾಂಕುಗಳಿಂದ ಪಡೆಯುವ ಸಾಲದ ಪ್ರಮಾಣ ಕಡಿಮೆಯಾಯಿತು. ಸಮಾಜದಲ್ಲಿನ ದುರ್ಬಲ ವರ್ಗದವರಿಗೆ ಯಾವ ಬ್ಯಾಂಕುಗಳು ಸಾಲವನ್ನು ಕೊಡಲು ನಿರಾಕರಿಸಿದ್ದವೋ ಅಂತಹ ಕುಟುಂಬಗಳಿಗೆ ಹಣಕಾಸಿನ ನೆರವನ್ನು ನೀಡಲು ಮುಂದೆ ಟಿಜಿಬಿ ಬಂದಿತು. ಇದರಿಂದಾಗಿ ಗ್ರಾಮೀಣ ಪ್ರದೇಶದಲ್ಲಿನ ದುರ್ಬಲ ವರ್ಗದವರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಈ ಬ್ಯಾಂಕಿನಿಂದ ಹಣಕಾಸಿನ ನೆರವನ್ನು ಪಡೆದು ತಮ್ಮ ಜೀವನಮಟ್ಟ ಸುಧಾರಿಸಿಕೊಳ್ಳುವುದಕ್ಕೆ ಸಾಧ್ಯವಾಗಿದೆ. ಹಾಗೂ ಗ್ರಾಮೀಣ ಪ್ರದೇಶದ ಅಭಿವೃದ್ಧಿಯಲ್ಲಿ ಗ್ರಾಮಿಣ ಬ್ಯಾಂಕು ಮಹತ್ತರವಾದ ಪಾತ್ರವಹಿಸಿದೆ ಎನ್ನಬಹುದು.

ಪಟ್ಟಿ ೧೦

ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದಿರುವುದು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | E | F | G | H | E | F | G | H | E | F | G | H |
| ೦೧. | ಸಣ್ಣ/ಅತಿಸಣ್ಣ ರೈತರು | ೩೫ | ೧೫ | ೩ | .. | .. | ೩೫ | .. | .. | .. | ೩೫ | .. | .. | .. |
| ೦೨. | ಕರಕುಶಲ/ಗ್ರಾಮೀಣ ಉದ್ದಿಮೆದಾರರು | ೨೫ | ೧೦ | ೨ | .. | .. | ೨೫ | .. | .. | .. | ೨೫ | .. | .. | .. |
| ೦೩. | ಗ್ರಾ.ವ್ಯಾಪಾರಸ್ಥರು | ೧೫ | ೪ | .. | .. | .. | ೧೫ | .. | .. | .. | ೧೫ | .. | .. | .. |
| ೦೪. | ಭೂ.ರಹಿತ ಕಾರ್ಮಿಕರು | ೨೫ | .. | .. | .. | .. | ೨೫ | .. | .. | .. | ೨೫ | .. | .. | .. |

E ಪ್ರಾ.ಸ.ಸಂಘಗಳು **F** ವಾಣಿಜ್ಯ ಬ್ಯಾಂಕುಗಳು **G** ಭೂಅಬ್ಯಾ **H** ಪ್ರಾಗ್ರಾಬ್ಯಾ

ಗ್ರಾಮೀಣ ಪ್ರದೇಶಗಳಲ್ಲಿ ಗ್ರಾ.ಬ್ಯಾ. ಅಸ್ತಿತ್ವಕ್ಕೆ ಬಂದನಂತರದಲ್ಲಿ ಈ ನಾಲ್ಕು ವರ್ಗಗಳಿಗೆ ಆದ್ಯತೆ ನೀಡಿದ್ದಾರೆ. ಇದರಿಂದಾಗಿ ಈ ಬ್ಯಾಂಕಿನಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಸಾಲ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಈ ಪ್ರದೇಶದಲ್ಲಿ ತರಕಾರಿ ಮಾರುವವರು, ಹೂ ಮಾರುವವರು ಈ ಬ್ಯಾಂಕ್ ನಮ್ಮ ಭಾಗದ ದೇವರು ಎಂದಿದ್ದಾರೆ. ಅತ್ಯಂತ ಕಡಿಮೆ ಬಡ್ಡಿಗೆ ಸಾಲವನ್ನು ಒದಗಿಸಿ, ಲೇವಾದೇವಿಗಾರರ ಬಿಗಿಮುಷ್ಟಿಯಿಂದ ಬಿಡಿಸಿದ್ದಾರೆಂದು ಮನಃಪೂರ್ವಕವಾಗಿ ತಿಳಿಸಿದ್ದಾರೆ.

## ೮. ಗ್ರಾಮೀಣ ಬ್ಯಾಂಕುಗಳ ಬಗ್ಗೆ ತಿಳುವಳಿಕೆ

೯೫ ಕುಟುಂಬದವರಲ್ಲಿ ೫೮ ಕುಟುಂಬಗಳು ಬ್ಯಾಂಕ್ ಬಗ್ಗೆ ಅದರ ಸಿಬ್ಬಂದಿಯಿಂದ ತಿಳಿದುಕೊಂಡಿದ್ದಾರೆ. ೧೩ ಕುಟುಂಬಗಳು ಗ್ರಾಮಸಭೆಯ ಮೂಲಕ ೧೦ ಕುಟುಂಬಗಳು ಗ್ರಾಮದ ಮುಖಂಡರುಗಳ ಮೂಲಕ ೫ ಕುಟುಂಬಗಳು ಸ್ವಂತ ತಿಳುವಳಿಕೆಯ ಮೂಲಕ ೯ ಕುಟುಂಬಗಳು ಸ್ನೇಹಿತರುಗಳ ಮೂಲಕ ಮಾಹಿತಿಯನ್ನು ಪಡೆದಿದ್ದಾರೆ. ಇವುಗಳು ಪ್ರತಿಶತ ೬೧, ೧೩.೬, ೧೦.೫, ೫.೨ ಮತ್ತು ೯.೪ ಅನುಕ್ರಮವಾಗಿವೆ. ಗ್ರಾಮೀಣ ಬ್ಯಾಂಕ್ ಸಿಬ್ಬಂದಿಯು ಗರಿಷ್ಠ ಪ್ರಮಾಣದಲ್ಲಿ ಗ್ರಾಮೀಣ ಜನಪದರಿಗೆ ಬ್ಯಾಂಕ್‌ನ ಉಪಯೋಗದ ಬಗ್ಗೆ ಮಾಹಿತಿ ಒದಗಿಸಿಕೊಡಲು ಯಶಸ್ವಿಯಾಗಿದ್ದಾರೆ. ಎಂಬುದನ್ನು ಪಟ್ಟಿ ಸಂಖ್ಯೆ ೧೧ರಲ್ಲಿ ಕಾಣಬಹುದು.

### ಗ್ರಾ.ಬ್ಯಾ. ಬಗ್ಗೆ ಅಭಿಪ್ರಾಯಗಳು

ಸಮೀಕ್ಷಿಸಿದ ೯೫ ಕುಟುಂಬಗಳು ಬ್ಯಾಂಕ್ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ೯೦ ಕುಟುಂಬಗಳು ಸಂಪೂರ್ಣವಾಗಿ ತೃಪ್ತಿ ವ್ಯಕ್ತಪಡಿಸಿದ್ದಾರೆ. ಅದು ಪ್ರತಿಶತ ೯೪.೭ರಷ್ಟಾಗಿದೆ. ಇನ್ನುಳಿದ ೫ ಕುಟುಂಬಗಳು ಸಾಲವನ್ನು ಪಡೆಯುವಾಗ ಮಾತ್ರ ಬ್ಯಾಂಕ್‌ಗೆ ಬಂದುಹೋಗಿದ್ದಾರೆ. ಆದರೆ ಸಾಲ ಮರುಪಾವತಿ ಮಾಡದ ಕಾರಣ ಬ್ಯಾಂಕ್ ಬಗ್ಗೆ ಅತೃಪ್ತಿ ವ್ಯಕ್ತಪಡಿಸಿದ್ದಾರೆ. ಅದು ಪ್ರತಿಶತ ೫.೩.ರಷ್ಟಾಗಿದೆ. ಎಲ್ಲಾ ಕುಟುಂಬಗಳು ಗ್ರಾ.ಬ್ಯಾ. ಮುಂದುವರೆಸುವ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ. ಕೆಲವು ಫಲಾನುಭವಿಗಳು ಬ್ಯಾಂಕ್‌ಸಿಬ್ಬಂದಿಯು ನಮಗೆ ಸಾಲದ ಬಗ್ಗೆ ಮಾಹಿತಿ ಒದಗಿಸಿದ್ದಾರೆ, ಹಾಗೂ ಇತರೆಡೆಗೆ ಸಾಲ ಮಾಡುವಾಗ ಆಗುವ ತೊಂದರೆಗಳ ಬಗ್ಗೆ ಮಾಹಿತಿ ನೀಡಿ ತಮ್ಮ ಬ್ಯಾಂಕ್‌ನಲ್ಲಿ ೨೦೦೦ ರಿಂದ ಕಿಸಾನ್ ಕ್ರೆಡಿಟ್ ಕಾರ್ಡುಗಳನ್ನು ಜಾರಿಗೆ ತಂದಿರುವುದರಿಂದ ರೈತರಿಗೆ ಯಾವುದೇ ತೊಂದರೆ ಆಗದೆ ಸಾಲ ವಿತರಣೆಯಾಗಿರುವುದನ್ನು ಮತ್ತು ಸಾಲ ಮರುಪಾವತಿ ಮಾಡಿದ ಒಂದೆರಡು ದಿನದೊಳಗಾಗಿ ಹೊಸಸಾಲ ಮಂಜೂರಾಗುತ್ತದೆ ಎಂಬ ಅಭಿಪ್ರಾಯವನ್ನು ಬ್ಯಾಂಕನ ಫಲಾನುಭವಿಗಳು ವ್ಯಕ್ತಪಡಿಸಿದ್ದಾರೆ. ಈ ಶಾಖೆ ಸತತವಾಗಿ ಲಾಭಗಳಿಸಿ ಉತ್ತಮಶಾಖೆ ಎಂಬ ಪ್ರಶಸ್ತಿಯನ್ನು ಕೂಡ ಪಡೆದಿದೆ ಎನ್ನಬಹುದು.

ಟಿಜಿಬಿ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದ ಕಾಲಾನಂತರದಲ್ಲಿ ಈ ಬ್ಯಾಂಕಿನ ಬಗ್ಗೆ ಜನಸಾಮಾನ್ಯರಿಗೆ ಅರಿವು ಮೂಡಿಸಿದ ನಂತರದಲ್ಲಿ ಲೇವಾದೇವಿಗಾರರು, ವ್ಯಾಪಾರಸ್ಥರು, ಸ್ನೇಹಿತರಿಂದ ಸಾಲ ಪಡೆಯುವುದನ್ನು ಕಡಿಮೆ ಮಾಡಿದ್ದಾರೆ.

ಪಟ್ಟಿ ೧೧

ಈ ಬ್ಯಾಂಕ್ ಬಗ್ಗೆ ಜ್ಞಾನ ಪಡೆದವರ ಅಭಿಪ್ರಾಯ

| ಕ್ರ. ಸಂಖ್ಯೆ | ವರ್ಗಗಳು | ಕು ಸಂಖ್ಯೆ | ಗ್ರಾಮದ ಮುಖಂಡರಿಂದ | ಸ್ವಂತ | ಸ್ನೇಹಿತರು | ಬ್ಯಾಂಕ್ ಸಿಬ್ಬಂಧಿ | ಗ್ರಾಮ ಸಭಾ | ಬಂಧು ಗಳಿಂದ | ಬ್ಯಾ.ತೃಪ್ತಿ | | ಸಾ.ಪ. ತೊಂದರೆಗಳು | | ಅಧಿಕಾರಿಗಳ ಬಗ್ಗೆ ತೃಪ್ತಿ | | ಬ್ಯಾಂಕ ಮುಂದುವರೆಸುವ ಬಗ್ಗೆ | |
|---|---|---|---|---|---|---|---|---|---|---|---|---|---|---|---|---|
| | | | | | | | | | ಹೌದು | ಇಲ್ಲ | ಹೌದು | ಇಲ್ಲ | ಹೌದು | ಇಲ್ಲ | ಬೇಕು | ಬೇಡ |
| ೦೧. | ಸಣ್ಣ/ಅತಿಸಣ್ಣ ರೈತರು | ೩೫ | ೮ | .. | ೧ | ೨೪ | ೨ | .. | ೩೩ | ೨ | ೨ | ೩೩ | ೩೩ | ೨ | ೩೫ | .. |
| ೦೨. | ಕುಶಲ/ಗ್ರಾಮೀಣ ಉದ್ಯಮಿಗಳು | ೨೫ | ೧ | ೧ | ೪ | ೧೫ | ೪ | .. | ೨೪ | .. | ೧ | ೨೪ | ೨೪ | ೧ | ೨೫ | .. |
| ೦೩. | ಗ್ರಾಮೀಣ ವ್ಯಾಪಾರಸ್ಥರು | ೧೫ | .. | ೨ | .. | ೧೦ | ೩ | .. | ೧೪ | ೧ | ೧ | ೧೪ | ೧೪ | ೧ | ೧೫ | .. |
| ೦೪. | ಭೂ.ರಹಿತ ಕಾರ್ಮಿಕರು | ೨೦ | ೧ | ೬ | .. | ೯ | ೪ | .. | ೧೯ | .. | ೧ | ೧೯ | ೧೯ | ೧ | ೨೦ | .. |

**ಮರಿಯಮ್ಮನಹಳ್ಳಿ ಬ್ಯಾಂಕ್‌ನ ಸ್ಥಿತಿ**

ಗ್ರಾಮೀಣ ಬ್ಯಾಂಕಿನ ಬಾಕಿಯ ಪರಿಸ್ಥಿತಿಯು ಸಾಲ ಮರುಪಾವತಿ ಮಾಡುವವರನ್ನು ಅವಲಂಬಿಸಿದೆ. ಈ ಶಾಖೆಯು ೧೯೭೪ರ ಜುಲೈನಲ್ಲಿ ಅಸ್ತಿತ್ವಕ್ಕೆ ಬಂದನಂತರದಲ್ಲಿ ೨೫ ಗ್ರಾಮಗಳಲ್ಲಿನ ಜನಪದರಿಗೆ ಬೇಕಾಗಿರುವ ಹಣಕಾಸಿನ ನೆರವನ್ನು ಒದಗಿಸಿದೆ. ಅದರಲ್ಲಿ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಅತಿ ಹೆಚ್ಚಿನ ಸಾಲವನ್ನೊದಗಿಸಿದ ಹೆಗ್ಗಳಿಕೆಯಿದೆ. ಬ್ಯಾಂಕು ಪ್ರತಿಶತ ೮೦ರಷ್ಟು ಒಡನಾಟವು ಈ ಮೇಲಿನ ವರ್ಗದವರನ್ನು ಒಳಗೊಂಡಿದೆ. ಕೃಷಿ ಚಟುವಟಿಕೆಗಳ ಕೆಸಿಸಿ ೮೭೫ಖಾತೆಗಳಿದ್ದು ೩ ಕೋಟಿ ೧೧ಲಕ್ಷ ರೂಪಾಯಿಗಳ ನೆರವನ್ನು ಒದಗಿಸಿದೆ. ಕೃಷಿ ಚಟುವಟಿಕೆಗಳಿಗೆ ಕನಿಷ್ಠ ೨೫,೦೦೦ದಿಂದ ಗರಿಷ್ಠ ೬೦,೦೦೦ ರೂಪಾಯಿಗಳ ಸಾಲವನ್ನು ಒದಗಿಸಿದೆ. ಸಣ್ಣ ಉದ್ದಿಮೆದಾರರಿಗೆ ೭೪ ಖಾತೆಗಳಿಗೆ ೧೩ ಲಕ್ಷ ರೂಪಾಯಿಗಳ ನೆರವನ್ನು ಒದಗಿಸಿದೆ. ಸಣ್ಣ ವ್ಯಾಪಾರಿಗಳಿಗೆ ೩೭ಲಕ್ಷ ರೂಪಾಯಿಗಳನ್ನು ಭೂರಹಿತ ಕಾರ್ಮಿಕರಿಗೆ ೫ ಲಕ್ಷ ರೂಪಾಯಿಗಳ ಸಾಲವನ್ನು ಒದಗಿಸಿದೆ. ಇಷ್ಟೇ ಅಲ್ಲದೆ ಶಿಕ್ಷಣ, ಗೃಹನಿರ್ಮಾಣ, ಸ್ವಸಹಾಯ ಗುಂಪುಗಳಿಗೆ ಹಣಕಾಸಿನ ನೆರವನ್ನು ಒದಗಿಸಿದೆ. ಒಟ್ಟಾರೆ ಸಾಲದ ಮರುಪಾವತಿಯು ೮೫ರಷ್ಟಿದೆ ಎಂದು ಬ್ಯಾಂಕು ಅಂಕಿ ಅಂಶಗಳು ತಿಳಿಸುತ್ತವೆ. ಉಮಶಂಕರ ಎನ್ನುವ ವ್ಯಕ್ತಿ ಈ ಶಾಖೆಯಲ್ಲಿ ೫.೮೪ ಎಕರೆ ಭೂಮಿಯನ್ನು ಒತ್ತೆ ಹಾಕಿ ಸಾಲಪಡೆದರು. ಆದರೆ ಬ್ಯಾಂಕು ಅನುಮತಿಯಿಲ್ಲದೆ ೧ ಎಕರೆಯನ್ನು ಬೇರೆಯವರಿಗೆ ಮಾರಾಟ ಮಾಡಿರುತ್ತಾರೆ. ಹೀಗಾಗಿ ಬ್ಯಾಂಕಿನ ವಿಶ್ವಾಸವನ್ನು ಕಳೆದುಕೊಂಡಿದ್ದಾರೆ ಎಂದು ಅಲ್ಲಿನ ಅಧಿಕಾರಿಗಳು ತಿಳಿಸಿರುತ್ತಾರೆ. ಕೆಲವರು ತಾವೇ ಬ್ಯಾಂಕಿಂಗೆ ಉದ್ದೇಶಪೂರ್ವಕವಾಗಿ ಸಾಲ ಮರುಪಾವತಿ ಮಾಡುವುದಿಲ್ಲ ಎಂದಿದ್ದಾರೆ. ಹೀಗಾಗಿ ಬಾಕಿಯ ಪ್ರಮಾಣ ಉಳಿಯುತ್ತದೆ ಎಂದಿದ್ದಾರೆ. ಆದರೆ ಪ್ರತಿಶತ ೧೫ರಷ್ಟು ಬಾಕಿಯು ಸಾಲಮನ್ನಾ ಕಾರ್ಯಕ್ರಮದಲ್ಲಿ ಮನ್ನಾವಾಗಿದೆ, ಹಾಗು ಶಾಖೆಯು ಹಲವಾರು ಪ್ರಶಸ್ತಿಗಳನ್ನು ಪಡೆದುಕೊಂಡಿದೆ ಎಂದು ಬ್ಯಾಂಕು ಅಧಿಕಾರಿಗಳು ತಿಳಿಸಿದ್ದಾರೆ.

ಒಟ್ಟಾರೆ ನಾಲ್ಕು ವರ್ಗಗಳಲ್ಲಿ ಜನಪದರನ್ನು ಸಮೀಕ್ಷೆಗೆ ಒಳಪಡಿಸಿದಾಗ ನಾವು ಈ ಪೂರ್ವದಲ್ಲಿ ಸಾಹುಕಾರರು, ಮದ್ಯವರ್ತಿಗಳ ಹಿಡಿತಕ್ಕೊಳಗಾಗಿದ್ದೆವು. ಆದರೆ ಇಂದು ಅವರ ಹಿಡಿತದಿಂದ ಬಿಡುಗಡೆ ಹೊಂದಿದ್ದೇವೆ. ಅನಿವಾರ್ಯ ಸ್ಥಿತಿಯಲ್ಲಿ ಅಂತಹವರಿಂದ ಸಾಲ ಪಡೆಯುತ್ತೇವೆ ಎಂದಿದ್ದಾರೆ. ಬಡ್ಡಿಯ ದರದ ಬಗ್ಗೆ ಬಹಳಷ್ಟು ಸಂತೋಷ ವ್ಯಕ್ತಪಡಿಸಿದ್ದಾರೆ. ಈ ಬ್ಯಾಂಕು ನಮ್ಮ ಭಾಗದ ದೇವರು ಎಂದರೆ ತಪ್ಪಲ್ಲ ಎಂಬ ಅಭಿಪ್ರಾಯ ವನ್ನು ಮನಃಪೂರ್ವಕವಾಗಿ ಹೇಳಿದ್ದಾರೆ.

**೫. ಹಗರಿಬೊಮ್ಮನಹಳ್ಳಿ ಕ್ಷೇತ್ರ**

**ಹಂಪಸಾಗರ ಪ್ರಗತಿ ಗ್ರಾಮೀಣ ಬ್ಯಾಂಕ ಶಾಖೆ**

ಈ ಶಾಖೆಯು ಹಂಪಸಾಗರ ಮತ್ತು ಕಾಲುವೆ ತಾಂಡ ಗ್ರಾಮಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಪತ್ತಿನ ಕಾರ್ಯನಿರ್ವಹಿಸುತ್ತಿದೆ. ಎರಡು ಗ್ರಾಮಗಳಿಂದ ೧೧೦ ಜನ ಫಲಾನುಭವಿಗಳನ್ನು ಪ್ರಾತಿನಿಧಿಕವಾಗಿ

ಆಯ್ಕೆಮಾಡಿಕೊಳ್ಳಲಾಗಿದೆ. ಫಲಾನುಭವಿಗಳಲ್ಲಿ ೪೦ ಕುಟುಂಬಗಳು ಸಣ್ಣ/ಅತಿಸಣ್ಣ ರೈತರು, ೩೦ ಸಣ್ಣ ಉದ್ದಿಮೆದಾರರು, ೨೫ ಭೂರಹಿತ ಕಾರ್ಮಿಕರು, ೧೫ ಸಣ್ಣ ವ್ಯಾಪಾರಿಗಳನ್ನು ಸಮೀಕ್ಷೆಗೆ ಒಳಪಡಿಸಲಾಯಿತು. ಈ ಸಮೀಕ್ಷೆಯಲ್ಲಿ ಫಲಾನುಭವಿಗಳ ಸಂಖ್ಯೆ ಸಾಕ್ಷರಸ್ಥರ ಪ್ರಮಾಣ, ಉದ್ಯೋಗ, ಮನೆಗಳ ವಿಧ ಅವಲಂಬಿಸಿರುವವರ ಸಂಖ್ಯೆ ಮುಂತಾದ ಅಂಶಗಳ ಬಗ್ಗೆ ಅವರಿಂದಲೇ ಪಡೆದ ಮಾಹಿತಿಯನ್ನು ಪಟ್ಟಿ ೧ರಲ್ಲಿ ಕಾಣಬಹುದು.

## ಪಟ್ಟಿ ೧

## ಸಾಮಾನ್ಯ ಮಾಹಿತಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಸರಾಸರಿ ಸದಸ್ಯರು | ಸಾಕ್ಷರಸ್ಥ ಸಂಖ್ಯೆ | ದುಡಿಯುವವರ ಸಂಖ್ಯೆ | ಗುಡಿಸಲುಗಳು | ಮನೆಗಳ ವಿಧ: ಮಾಳಿಗೆ ಮನೆ | ಹೆಂಚಿನ ಮನೆ | ತಗಡಿನ ಮನೆ | ಜನತಾ ಮನೆ | ಆರ್.ಸಿ.ಸಿ. ಮನೆ |
|---|---|---|---|---|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೬ | ೪ | ೩ | .. | ೩೬ | ೧ | .. | ೨ | ೧ |
| ೦೨ | ಗ್ರಾಮೀಣ ಕುಶಲ/ಉದ್ದಿಮೆ ದಾರರು | ೩೦ | ೫ | ೩ | ೩ | - | ೨೫ | - | ೧ | ೩ | ೧ |
| ೦೩. | ಭೂ ರಹಿತ ಕಾರ್ಮಿಕರು | ೨೫ | ೬ | ೨ | ೪ | ೨ | ೧೧ | ೨ | ೧ | ೧೧ | - |
| ೦೪. | ಸಣ್ಣ ವ್ಯಾಪಾರಿಗಳು | ೧೫ | ೫ | ೩ | ೪ | .. | ೮ | ೨ | ೧ | ೦೪ | .. |
| | ಒಟ್ಟು | ೧೧೦ | | | | ೦೨ | ೭೯ | ೦೫ | ೦೩ | ೧೯ | ೨ |

ಪಟ್ಟಿ ೧ರಲ್ಲಿ ಅವಲೋಕಿಸಿದಾಗ ಭೂರಹಿತ ಕಾರ್ಮಿಕರ ಕುಟುಂಬಗಳಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು, ಇತರ ಮೂರು ವರ್ಗಗಳಲ್ಲಿ ಸಾಕ್ಷರತೆಯ ಪ್ರಮಾಣ ಅಧಿಕವಾಗಿದೆ. ೧೧೦ ಕುಟುಂಬಗಳಲ್ಲಿ ಎರಡು ಕುಟುಂಬಗಳು ಗುಡಿಸಲುಗಳಲ್ಲಿ ೭೯ ಕುಟುಂಬಗಳು ಮಾಳಿಗೆ ಮನೆಯಲ್ಲಿ ೦೫ ಕುಟುಂಬಗಳು ಹೆಂಚಿನ ಮನೆಯಲ್ಲಿ ೦೩ ಕುಟುಂಬಗಳು ತಗಡಿನ ಮನೆಯಲ್ಲಿ ೧೯ ಕುಟುಂಬಗಳು ಸರ್ಕಾರ ನಿರ್ಮಿಸಿಕೊಟ್ಟಿರುವ ಜನತಾಮನೆಯಲ್ಲಿ ಎರಡು ಕುಟುಂಬಗಳು ಆರ್.ಸಿ.ಸಿ. ಮನೆಗಳಲ್ಲಿ ವಾಸವಾಗಿದ್ದಾರೆ. ಪಟ್ಟಿಯಲ್ಲಿ ತೋರಿಸಿದಂತೆ ದುಡಿಯುವವರ ಸಂಖ್ಯೆ ೧ ಮತ್ತು ೨ ವರ್ಗಗಳಲ್ಲಿ ೩ ಜನರು ಮೂರು ಮತ್ತು ನಾಲ್ಕನೇ ವರ್ಗಗಳಲ್ಲಿ ೪ ಜನರು ದುಡಿಯುತ್ತಿದ್ದಾರೆ. ಅವರು ವಾಸಿಸುವ ಮನೆಗಳನ್ನಾಧರಿಸಿ ಅವರ ಆರ್ಥಿಕ ಮತ್ತು ಸಾಮಾಜಿಕ ಮಟ್ಟವನ್ನು ಪರಿಗಣಸಬಹುದಾಗಿದೆ.

### ೧. ಆಸ್ತಿಗಳು

ಗ್ರಾಮೀಣ ನಿವಾಸಿಗಳು ತಮ್ಮದೇ ಆದ ಆಸ್ತಿಯನ್ನು ಹೊಂದಿರುತ್ತಾರೆ. ಮೊದಲನೆಯದಾಗಿ ಕೃಷಿ

ಚಟುವಟಿಕೆಗಳಿಗೆ ಬೇಕಾದ ಕೃಷಿ ಉಪಕರಣಗಳು ಕೃಷಿ ಅನುಭವದ ವ್ಯಕ್ತಿಗಳು, ದನ, ಕರುಗಳು ಇತ್ಯಾದಿ, ಹಾಗೆಯೇ ಮನೆಯಲ್ಲಿನ ಉಪಯುಕ್ತ ವಸ್ತುಗಳಾದ ಸೈಕಲ್, ಕಪಾಟು, ಇತ್ಯಾದಿಗಳು ಹಾಗೂ ಕುರಿ, ಕೋಳಿ, ಆಡು ಇತ್ಯಾದಿಗಳ ಒಡೆತನವನ್ನು ಹೊಂದಿರುತ್ತಾರೆ.

### ಪಟ್ಟಿ ೨

### ವಿವಿಧ ವರ್ಗಗಳ ಸರಾಸರಿ ಆಸ್ತಿಯ ಮೌಲ್ಯ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೩೪೦೦ | ೨೬೦೦೦ | ೨೨೬೦೦ | ೬೬೪.೭ |
| ೦೨. | ಕರಕುಶಲ/ಸಣ್ಣ ಉದ್ದಿಮೆದಾರರು | ೩೦ | ೨೮೦೦ | ೧೮೦೦೦ | ೧೫೨೦೦ | ೫೪೨.೮ |
| ೦೩. | ಚಿಲ್ಲರೆ ವ್ಯಾಪಾರಿ | ೨೫ | ೩೦೦೦ | ೨೫೦೦೦ | ೨೨೦೦೦ | ೭೩೩ |
| ೦೪. | ಭೂರಹಿತ ಕಾರ್ಮಿಕರು | ೧೫ | ೫೦೦ | ೧೬೫೦೦ | ೧೬೦೦೦ | ೩೨೦೦ |
| | ಸರಾಸರಿ | ೧೧೦ | ೨೪೨೫ | ೨೧೩೭೫ | ೧೮೯೫೦ | ೭೮೧ |

ಮೇಲಿನ ಪಟ್ಟಿಯಲ್ಲಿ ೧೧೦ ಕುಟುಂಬಗಳ ಸರಾಸರಿ ಮೌಲ್ಯದ ಆಸ್ತಿಯನ್ನು ನೋಡಬಹುದಾಗಿದೆ. ನಾಲ್ಕುವರ್ಗಗಳಲ್ಲಿ ಭೂರಹಿತ ಕಾರ್ಮಿಕರು ಕಡಿಮೆ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಇನ್ನುಳಿದ ಮೂರು ವರ್ಗಗಳಲ್ಲಿ ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದವರಾಗಿದ್ದಾರೆ. ಭೂರಹಿತ ಕಾರ್ಮಿಕರನ್ನು ಹೊರತುಪಡಿಸಿ ಉಳಿದವರ್ಗಗಳ ಆಸ್ತಿಯ ಪ್ರಮಾಣವು ಸಾಲದ ಪೂರ್ವದಲ್ಲಿ ಅಧಿಕವಾಗಿದ್ದವು. ಆದರೆ ಬ್ಯಾಂಕ ಸಾಲದ ನಂತರದಲ್ಲಿ ನಾಲ್ಕು ವರ್ಗಗಳಲ್ಲಿ ಆಸ್ತಿಯ ಪ್ರಮಾಣವು ಅಧಿಕವಾಗಿದೆ ಸಾಲದ ನಂತರದಲ್ಲಿ ಸಣ್ಣ/ಅತಿಸಣ್ಣ ರೈತರ ಆಸ್ತಿಯು ಪ್ರತಿಶತ ೬೬೪.೭ರಷ್ಟು ಗ್ರಾಮೀಣ ಕರಕುಶಲ ಉದ್ದಿಮೆದಾರರ ಆಸ್ತಿಯು ಪ್ರತಿಶತ ೫೪೨ರಷ್ಟು ಗ್ರಾಮೀಣ ವ್ಯಾಪಾರಸ್ಥರ ಆಸ್ತಿಯು ಪ್ರತಿಶತ ೭೩೩ರಷ್ಟು ಹಾಗು ಭೂ.ರ.ಕಾರ್ಮಿಕರ ಆಸ್ತಿಯಲ್ಲಿ ಪ್ರತಿಶತ ೩೨೦೦ರಷ್ಟು ಅಧಿಕವಾಗಿರುವುದನ್ನು ಪಟ್ಟಿಯಲ್ಲಿ ಕಾಣಬಹುದು. ನಾಲ್ಕುವರ್ಗಗಳಲ್ಲಿ ಬ್ಯಾಂಕ್‌ಸಾಲದ ಪೂರ್ವದಲ್ಲಿ ಆಸ್ತಿಯ ಮೌಲ್ಯ ೨೪೨೫ರೂಗಳಾದರೆ, ಬ್ಯಾಂಕ್‌ಸಾಲದ ನಂತರದಲ್ಲಿ ಸರಾಸರಿ ೨೧,೩೭೫ರೂ ಕ್ಕೆ ಅಧಿಕವಾಗಿದ್ದು, ನಿವ್ವಳ ಹೆಚ್ಚಳ ೧೮೯೫೦ರೂ ಅದರ ನಿವ್ವಳ ಪ್ರತಿಶತ ಪ್ರಮಾಣವು ೭೮೧ರಷ್ಟು ಅಧಿಕವಾಗಿರುವುಗುದನ್ನು ಕಾಣಬಹುದು.

### ೨. ಭೂ ಹಿಡುವಳಿ

ಗ್ರಾಮೀಣ ನಿವಾಸಿಗಳ ಜೀವನಾಧಾರಿತ ವೃತ್ತಿಯೆಂದರೆ ಕೃಷಿ. ಕೃಷಿಯು ಸಂಪೂರ್ಣವಾಗಿ ಮಳೆಯಾಧಾರಿತವಾಗಿದೆ. ಭೂ ಹಿಡುವಳಿಯನ್ನು ಸಾಮಾನ್ಯವಾಗಿ ಎರಡು ವರ್ಗಗಳಲ್ಲಿ

ತೊಡಗಿಸಿಕೊಂಡಿದ್ದಾರೆ. ಗ್ರಾಮೀಣ ಬ್ಯಾಂಕ್‌ಸಾಲದ ಪೂರ್ವದಲ್ಲಿ ಹಿಡುವಳಿಯು ಸರಾಸರಿಯಾಗಿ ೨.೫ ಎಕರೆ ಇದ್ದುದು, ಸಾಲದ ನಂತರದಲ್ಲಿ ಸರಾಸರಿ ೩.೫. ಎಕರೆ ಪ್ರದೇಶಕ್ಕೆ ವಿಸ್ತರಿಸಿಕೊಂಡಿದ್ದಾರೆ. ಇಲ್ಲಿನ ಫಲಾನುಭವಿಗಳು ಮಳೆಯನ್ನಾಧರಿಸಿದ ಕೃಷಿ ಭೂಮಿಯನ್ನು ಹೊಂದಿರುವುದರಿಂದ ಇವರ ಆಸ್ತಿಯ ಪ್ರತಿಶತ ಪ್ರಮಾಣ ೦.೪ಂದಲ್ಲಿ ಅಧಿಕವಾಗಿರುವುದನ್ನು ಪಟ್ಟಿ ೩ರಲ್ಲಿ ಕಾಣಬಹುದು.

**ಪಟ್ಟಿ ೩**

**ಸರಾಸರಿ ಭೂ ಹಿಡುವಳಿ ಗಾತ್ರ**

ಎಕರೆಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೩.೦ | ೪.೦ | ೧.೦ | ೦.೩೩ |
| ೦೨. | ಗ್ರಾಮೀಣ ವ್ಯಾಪಾರಿಗಳು | ೧೫ | ೨.೦ | ೩.೦ | ೧.೦ | ೦.೫೦ |
| | ಸರಾಸರಿ | ೫೫ | ೨.೫ | ೩.೫ | ೧.೦ | ೦.೪೦ |

ಈ ಪ್ರದೇಶವು ಸಂಪೂರ್ಣವಾಗಿ ಮಳೆಯಾಧಾರಿತವಾಗಿರುವುದರಿಂದ, ವಾರ್ಷಿಕವಾಗಿ ಮುಂಗಾರು ಸಾಧ್ಯವಾದರೆ ಹಿಂಗಾರಿ ಬೆಳೆಯನ್ನು ಬೆಳೆಯುತ್ತಾರೆ. ಬಂದ ಅಲ್ಪವರಮಾನದಿಂದಲೇ ತಮ್ಮ ಕೃಷಿ ಭೂಮಿಯನ್ನು ಪ್ರತಿಶತ ೦.೪ಂರಷ್ಟು ಹೆಚ್ಚಳವಾಗಿದೆ.

**೩. ಕೃಷಿ ಹೂಡುವಳಿ ವೆಚ್ಚ**

ಗ್ರಾಮೀಣ ಜನಪದರ ಮುಖ್ಯ ವೃತ್ತಿಯೆಂದರೆ ಕೃಷಿ. ಇವರ ಹೂಡುವಳಿ ವೆಚ್ಚವು ಭೂಮಿಯನ್ನು ಹದಮಾಡುವುದರಿಂದ, ಸುಗ್ಗಿಯ ಕಾಲದವರೆಗೆ ವಿವಿಧ ಭೂಮಿಯನ್ನು ಹಂತಗಳ ವೆಚ್ಚಗಳನ್ನು ಒಳಗೊಂಡಿರುತ್ತದೆ. ಅವುಗಳನ್ನು ಪ್ರಮುಖವಾಗಿ ೩ ಹಂತಗಳಲ್ಲಿ ನೋಡಬಹುದು.

೧. ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳು

೨. ಕೃಷಿ ಕಾರ್ಮಿಕರ ಕೂಲಿ ಮತ್ತು ಜಾನುವಾರುಗಳ ನಿರ್ವಹಣಾ ವೆಚ್ಚ

೩. ಬೆಳೆದ ಧಾನ್ಯಗಳ ಕೊಯಿಲು, ಸಾಗಾಣೆ, ಒಕ್ಕಲುತನ ಮಾಡುವುದು ಮತ್ತು ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳು.

ಈ ಪ್ರದೇಶದಲ್ಲಿನ ೫೫ ಕೃಷಿ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಕಡಿಮೆ ಪ್ರಮಾಣದಲ್ಲಿ ಪಿಜಿಬಿ ಸಾಲದ ಪೂರ್ವದಲ್ಲಿ ಉಪಯೋಗಿಸುತ್ತಿದ್ದರು.

ಆದರೆ ಪಿಜಿಬಿ ಸಾಲದ ನಂತರದಲ್ಲಿ ಅಧಿಕ ಇಳುವರಿ ಕೊಡುವ ಸಂಕರಣ ಬೀಜಗಳನ್ನು, ರಾಸಾಯನಿಕ ಗೊಬ್ಬರಗಳನ್ನು, ರೋಗಗಳಿಂದ ಬೆಳೆಯನ್ನು ಕಾಪಾಡಲು ಕ್ರಿಮಿನಾಶಕಗಳನ್ನು ಬಳಸಲಾರಂಭಿಸಿದರು. ಎರಡನೇ ಹಂತದಲ್ಲಿ ಬೀಜ ಬಿತ್ತಿದ ೧೫ ರಿಂದ ೪೦ ದಿನಗಳ ಬೆಳೆಯಲ್ಲಿ ಕಳೆಯನ್ನು ನಾಶಪಡಿಸಲು ಕೃಷಿ ಕಾರ್ಮಿಕರನ್ನು ದಿನಗೂಲಿಗೆ ನೇಮಿಸಿಕೊಳ್ಳುತ್ತಾರೆ. ಬ್ಯಾಂಕ್‌ಸಾಲದ ಪೂರ್ವದಲ್ಲಿ ಕೂಲಿಯ ಪ್ರಮಾಣವು ಕಡಿಮೆ ಇದ್ದು ಇತ್ತೀಚಿನ ದಿನಗಳಲ್ಲಿ ಕೂಲಿಯ ಪ್ರಮಾಣವು ಅಧಿಕವಾಗಿದೆ. ೨೦೦೭ನೇ ಇಸ್ವಿಯಲ್ಲಿ ಕೂಲಿಯ ಪ್ರಮಾಣವು ದಿನವೊಂದಕ್ಕೆ ೬೦ ರಿಂದ ೮೦ ರೂಪಾಯಿಗಳವರೆಗೆ ಅಧಿಕವಾಗಿದೆ.

ಈ ಕೃಷಿ ಕುಟುಂಬಗಳಲ್ಲಿ ೩೦ ಕುಟುಂಬಗಳು ಸ್ವಂತ ಎತ್ತುಗಳನ್ನು ಹೊಂದಿರುತ್ತಾರೆ. ಇನ್ನುಳಿದ ೨೫ ಕುಟುಂಬಗಳು ಬಾಡಿಗೆ ಎತ್ತುಗಳ ಮೂಲಕ ಇಲ್ಲಿವೆ. ಟ್ರಾಕ್ಟರ್ ಸಹಾಯದಿಂದ ಭೂಮಿಯನ್ನು ಹದಗೊಳಿಸುತ್ತಾರೆ. ೩೦ ಕುಟುಂಬಗಳು ತಮ್ಮ ಸ್ವಂತ ಎತ್ತುಗಳ ಮೂಲಕ ಭೂಮಿಯನ್ನು ಹದಗೊಳಿಸಿಕೊಳ್ಳುತ್ತಾರೆ. ಅವುಗಳ ನಿರ್ವಹಣಾ ವೆಚ್ಚವನ್ನು ಕೃಷಿಕರು ಭರಿಸಿಕೊಳ್ಳಬೇಕಾಗುತ್ತದೆ. ಬಾಡಿಗೆ ಎತ್ತುಗಳು, ಟ್ರಾಕ್ಟರ ಮೂಲಕ ಕೃಷಿಕಾರ್ಯವನ್ನು ಕೈಗೊಂಡ ಕೃಷಿಕರು ಬಾಡಿಗೆ ಹಣವನ್ನು ಭರಿಸಬೇಕಾಗುತ್ತದೆ. ಹೀಗೆ ಕೃಷಿಕರು ವಿವಿಧ ಹಂತಗಳ ವೆಚ್ಚಗಳಿಗೆ ಒಳಗಾಗಬೇಕಾಗುತ್ತದೆ.

ಕೃಷಿಕರು ಬೀಜ ಬಿತ್ತನೆ ಮಾಡಿದನಂತರ ಮಳೆಯು ಸಕಾಲದಲ್ಲಿ ಬಿದ್ದರೆ ಬೀಜ ಬಿತ್ತನೆ ಮಾಡಿದ ೯೦ ರಿಂದ ೧೩೦ ದಿನದೊಳಗಾಗಿ ಬೆಳೆಯು ಕೊಯ್ಯುವ ಹಂತಕ್ಕೆ ಬರುತ್ತದೆ. ಬೆಳೆಯನ್ನು ಕೊಯ್ಯುವ ಸಾಗಿಸುವ, ಧಾನ್ಯಗಳನ್ನು ಒಕ್ಕುವುದು, ತೂರುವುದು ಧಾನ್ಯಗಳನ್ನು ಮನೆಗೆ ಹಾಗು ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳಿಗೆ ಒಳಗಾಗಬೇಕಾಗುತ್ತದೆ. ಈ ಎಲ್ಲಾ ಹಂತದ ವೆಚ್ಚಗಳು ಅವರುಗಳು ಹೊಂದಿರುವ ಭೂಮಿಯ ಗಾತ್ರಕ್ಕೆ ಅನುಗುಣವಾಗಿರುತ್ತದೆ. ಕೃಷಿ ಚಟುವಟಿಕೆಗಳಲ್ಲಿ ೪೦ ಕುಟುಂಬಗಳು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿದ್ದಾರೆ. ಇನ್ನುಳಿದ ೧೫ ಕುಟುಂಬಗಳು ತಮ್ಮ ವ್ಯಾಪಾರದ ಜೊತೆಗೆ ಕೃಷಿಯಲ್ಲಿ ಭಾಗಶಃ ತೊಡಗಿಸಿಕೊಂಡಿದ್ದಾರೆ.

೫೫ ಕೃಷಿ ಕುಟುಂಬಗಳು ಮೂರು ಹಂತದ ಸರಾಸರಿ ವೆಚ್ಚಗಳನ್ನು ಒಳಗೊಂಡಿದ್ದಾರೆ. ಪಿಜಿಬಿ ಸಾಲದ ಪೂರ್ವದಲ್ಲಿ ಸರಾಸರಿ ೩೮೫೦ ರೂಪಾಯಿಗಳ ವೆಚ್ಚಗಳನ್ನು ಒಳಗೊಂಡಿರುತ್ತಾರೆ. ಆದರೆ ಬ್ಯಾಂಕು ಸಾಲದ ನಂತರ ಇವರ ಸರಾಸರಿ ವೆಚ್ಚವು ೧೫,೫೦೦ರೂಪಾಯಿಗಳಷ್ಟು ನಿವ್ವಳ ೧೧೬೫೦ರೂ ಅದು ಪ್ರತಿಶತ ೩೦೨.೫ರಷ್ಟು ಹೆಚ್ಚಳವಾಗಿದೆ. ಏಕೆಂದರೆ ಪ್ರತಿವರ್ಷ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳ ಬೆಲೆಯು ಹೆಚ್ಚುತ್ತಾ ಹೋಗಿರುವುದರಿಂದ ಉತ್ಪಾದನಾ ವೆಚ್ಚವು ಅಧಿಕವಾಗಿದೆ. ಹಂಪಸಾಗರ ಗ್ರಾಮೀಣ ಬ್ಯಾಂಕು ಶಾಖೆಯು ೧೦,೦೦೦ರೂಗಳಿಂದ ೪೦,೦೦೦ರೂಪಾಯಿಗಳವರೆಗೆ ಬೆಳೆಸಾಲ ನೀಡಿದ್ದಾರೆ.

## ಪಟ್ಟಿ ೪

## ಒಟ್ಟು ಉತ್ಪಾದನಾ ವೆಚ್ಚ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೪೯೦೦ | ೨೦೦೦೦ | ೧೫೧೦೦ | ೩೦೮ |
| ೦೨. | ಗ್ರಾಮೀಣ ವ್ಯಾಪಾರಿಗಳು | ೧೫ | ೨೮೦೦ | ೧೧೦೦೦ | ೮೨೦೦ | ೨೯೨.೮ |
| | ಸರಾಸರಿ | ೫೫ | ೩೮೫೦ | ೧೫೫೦೦ | ೧೧೬೫೦ | ೩೦೨.೯ |

ಪಿಜಿಬಿ ಪ್ರಾರಂಭದಲ್ಲಿ ಬೆಳೆಸಾಲಕ್ಕೆ ಬಡ್ಡಿಯ ದರಗಳು ೧೧.೫೦% ರಿಂದ ೧೩%ವರೆಗೆ ಇತ್ತು. ಆದರೆ ಇತ್ತೀಚಿನ ಆರ್‌ಬಿಐನ ನೀತಿಯಿಂದಾಗಿ ಬೆಳೆಸಾಲದ ಬಡ್ಡಿಯ ಧರವು ಪ್ರತಿಶತ ೭ಕ್ಕೆ ಇಳಿದಿರುವುದರಿಂದ ರೈತರು ಅಧಿಕ ಪ್ರಮಾಣದಲ್ಲಿ ಸಾಲವನ್ನು ಪಡೆದಿದ್ದಾರೆ. ಇವರ ಎಲ್ಲಾ ಹಂತದ ವೆಚ್ಚಗಳು ಅಧಿಕವಾಗಿರುವುದರಿಂದ ಕೃಷಿಕರ ವೆಚ್ಚವು ಅಧಿಕವಾಗಿದೆ ಎನ್ನಬಹುದು.

### ೪. ಉತ್ಪಾದನೆ

ಮುಂಗಾರು ಮತ್ತು ಹಿಂಗಾರು ಬೆಳೆಗಳ ಉತ್ಪಾದನೆಯು ವರ್ಷದ ಸಮಗ್ರ ಉತ್ಪಾದನೆಯಾಗಿರುತ್ತದೆ. (ಬ್ಯಾಂಕ್ ಸಾಲದ ಪೂರ್ವ ಮತ್ತು ನಂತರ) ಈ ಕುಟುಂಬಗಳು ತಮ್ಮ ಜೀವನ ನಿರ್ವಹಣೆಗೆ ಬೇಕಾದ ಆಹಾರ ಪದಾರ್ಥಗಳನ್ನು ಮತ್ತು ವರಮಾನಕ್ಕೋಸ್ಕರ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಆಹಾರ ಪದಾರ್ಥಗಳ ಉತ್ಪಾದನೆಯು ಅಧಿಕವಾದಾಗ ತಮ್ಮ ಜೀವನ ನಿರ್ವಹಣೆಗೆ ಬೇಕಾದಷ್ಟು ಆಹಾರ ಪದಾರ್ಥಗಳನ್ನು ಶೇಖರಿಸಿಕೊಂಡು, ಅಧಿಕವಾದ ಧಾನ್ಯಗಳನ್ನು ಮಾರಾಟ ಮಾಡುತ್ತಾರೆ.

ಕೃಷಿಕರು ಬ್ಯಾಂಕ್ ಸಾಲದ ಪೂರ್ವದಲ್ಲಿ ಹೆಚ್ಚಾಗಿ ಸಾಲವನ್ನು ಮಧ್ಯವರ್ತಿಗಳಿಂದ, ಸಾಹುಕಾರರಿಂದ, ಸಹಕಾರ ಸಂಘಗಳಿಂದ, ಜಮೀನ್ದಾರರಿಂದ ಅತಿ ಹೆಚ್ಚಿನ ಬಡ್ಡಿಯ ದರಕ್ಕೆ ಪಡೆಯುತ್ತಿದ್ದರು. ಆ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶದ ಹಣಕಾಸಿನ ವ್ಯವಹಾರದಲ್ಲಿ ಪೂರ್ಣ ವಹಿವಾಟನ್ನು ನಡೆಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಇವರ ವಹಿವಾಟಿನ ಪ್ರಮಾಣ ಕಡಿಮೆಯಾಗಿದೆ. ಮೊದಲು ಕೃಷಿಕರು ಸಂಪ್ರದಾಯ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅವರು ತಾವು ಬೆಳೆದ ಧಾನ್ಯಗಳನ್ನೇ ಪುನಃ ತಮ್ಮ ಭೂಮಿಯಲ್ಲಿ ಬಿತ್ತಲು ಉಪಯೋಗಿಸುತ್ತಿದ್ದರು. ರಾಷ್ಟ್ರದಲ್ಲಿ ಹಸಿರುಕ್ರಾಂತಿಯಾದ ನಂತರದಲ್ಲಿ, ಅಧಿಕ ಇಳುವರಿಕೊಡುವ ಬೀಜಗಳನ್ನು, ರಾಸಾಯನಿಕ ಗೊಬ್ಬರಗಳನ್ನು ಮತ್ತು ಕ್ರಿಮಿನಾಶಕಗಳನ್ನು ಬಳಕೆಮಾಡಿಕೊಂಡರು. ಈ ಪ್ರದೇಶದಲ್ಲಿ ಬ್ಯಾಂಕು ಅಸ್ತಿತ್ವಕ್ಕೆ ಬಂದನಂತರದಲ್ಲಿ ಬೇಸಾಯ ಪದ್ಧತಿಯಲ್ಲಿ

ಸುಧಾರಣೆ ಕಂಡುಕೊಂಡರು. ಆಧುನಿಕ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡರು. ಇಲ್ಲಿ ಹೆಚ್ಚಾಗಿ ಸೂರ್ಯಕಾಂತಿ, ಸೇಂಗಾ, ನವಣೆ, ಈರುಳ್ಳಿ, ಹತ್ತಿ, ಮೆಕ್ಕೆಜೋಳ ಇನ್ನು ಮುಂತಾದವುಗಳನ್ನು ಮಳೆಯನ್ನವಲಂಬಿಸಿ ಬೆಳೆಯುತ್ತಾರೆ. ಆ ಮೂಲಕ ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

ಬ್ಯಾಂಕು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಈ ಪ್ರದೇಶದಲ್ಲಿ ಉತ್ಪದನಾ ವೆಚ್ಚ ಮತ್ತು ವರಮಾನಗಳೆರಡೂ ಅಧಿಕವಾಗಿವೆ. ೪೦ ಕೃಷಿ ಕುಟುಂಬಗಳ ವರಮಾನವು ಇನ್ನಿತರ ಕುಟುಂಬಗಳ ವರಮಾನಕ್ಕಿಂತ ಅಧಿಕವಾಗಿದೆ. ಏಕೆಂದರೆ ಸಣ್ಣ/ಅತಿಸಣ್ಣ ರೈತರು ತಮ್ಮನ್ನು ಕೃಷಿ ಕಾಯಕದಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ೧೫ ಗ್ರಾ.ವ್ಯಾಪಾರಿಗಳಿಗೆ ತಮ್ಮ ವ್ಯಾಪಾರವು ಮುಖ್ಯವಾಗಿರುವುದರಿಂದ ಅವರ ಕೃಷಿ ಉತ್ಪಾದನೆ ಕಡಿಮೆಯಾಗಿದೆ. ಇವರು ಉತ್ಪಾದನೆ ಮಾಡಿದ ಬೆಳೆಗಳನ್ನು ವಿವಿಧ ಮಾರುಕಟ್ಟೆಗಳಲ್ಲಿ ವಿವಿಧ ಬೆಲೆಗೆ ಮಾರಾಟ ಮಾಡಿರುತ್ತಾರೆ. ವಾಣಿಜ್ಯ ಬೆಳೆಗಳಿಗೆ ಉತ್ತಮ ಬೆಲೆ ಇದ್ದು ಆಹಾರದ ಬೆಳೆಗಳಿಗೆ ಸ್ವಲ್ಪ ಕಡಿಮೆ ಬೆಲೆ ಇದೆ. ಆದರೂ ೫೫ ಕುಟುಂಬಗಳು ತಮ್ಮ ಉತ್ಪನ್ನವನ್ನು ಹೆಚ್ಚಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

**ಪಟ್ಟಿ ೫**

**ಉತ್ಪಾದನೆ**

| ಕ್ರಸಂ. | ವರ್ಗವು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | ಪಿಜಿಬಿ ಸಾಲದ ನಂತರ | | ನಿವ್ವಳ ಹೆಚ್ಚಳ | |
|---|---|---|---|---|---|---|---|---|
| | | | ಪ್ರಮಾಣ ಕ್ವಿಂ | ಮೌಲ್ಯ ರೂ | ಪ್ರಮಾಣ ಕ್ವಿಂ | ಮೌಲ್ಯದಲ್ಲಿ ರೂ | ಪ್ರಮಾಣ ಕ್ವಿಂ | ಮೌಲ್ಯದಲ್ಲಿ ರೂ |
| ೧. | ಸಣ್ಣ/ಅತಿಸಣ್ಣ ರೈತರು | ೪೦ | ೩೩ | ೯೯೦೦ | ೪೮ | ೪೬೪೦೦ | ೨೫<br>(೦.೭೫) | ೨೦೦೦೦<br>(೨೦೨) |
| ೨. | ಗ್ರಾಮೀಣ ವ್ಯಾಪಾರಸ್ಥರು | ೧೫ | ೨೦ | ೬೦೦೦ | ೪೦ | ೩೨೦೦೦ | ೨೦<br>(೧೦೦) | ೧೬೦೦೦<br>(೨೬೬) |
| | ಸರಾಸರಿ | ೫೫ | ೨೬.೫ | ೭೯೫೦ | ೪೩ | ೩೯೨೦೦ | ೨೨೫<br>(೮೪.೯) | ೧೮೦೦೦<br>(೨೨೬) |

(ಬ್ರಾಕೆಟಿನಲ್ಲಿರುವುದು ಶೇಕಡಾವಾರನ್ನು ಪ್ರತಿನಿಧಿಸುತ್ತದೆ.)

೫೫ ಕುಟುಂಬಗಳ ಉತ್ಪಾದನೆ ಪಿಜಿಬಿ ಸಾಲದ ಪೂರ್ವದಲ್ಲಿ ೨೬.೫ ಕ್ವಿಂಟಾಲ್ ಆಗಿದ್ದು ಸಾಲದ ನಂತರದಲ್ಲಿ ಸರಾಸರಿ ೪೩ ಕ್ವಿಂಟಾಲ್‌ಗೆ ಅಧಿಕವಾಗಿದೆ. ನಿವ್ವಳ ಉತ್ಪಾದನೆ ೨೨.೫ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ. ಹಾಗೆಯೇ ಪ್ರತಿಶತಮೌಲ್ಯ (೧೮,೦೦೦ರೂಗಳಷ್ಟು) ೨೨೬ಪಟ್ಟು ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದು. ಸಣ್ಣ ಮತ್ತು ಅತಿಸಣ್ಣ ರೈತರ ಉತ್ಪಾದನೆಯು ಸಾಲದ ಪೂರ್ವ ೩೩ ಕ್ವಿಂಟಾಲ್‌ನಿಂದ ಸಾಲದ ನಂತರ ೪೮ ಕ್ವಿಂಟಲ್‌ನಷ್ಟು ಅಧಿಕವಾಗಿದ್ದು, ಅದು ಪ್ರತಿಶತ ೨೦೨ ಪಟ್ಟು

ಅಧಿಕವಾಗಿದೆ. ಗ್ರಾ.ವ್ಯಾಪಾರಸ್ಥರ ಉತ್ಪಾದನೆಯ ಸಾಲದ ಪೂರ್ವ ೨೦ ಕ್ವಿಂಟಾಲ್‌ನಷ್ಟು ಇದ್ದುದು, ಸಾಲದ ನಂತರದಲ್ಲಿ ೪೦ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ. ಅದರ ಪ್ರತಿಶತ ಮೌಲ್ಯವು ೨೬೬ರಷ್ಟು ಅಧಿಕವಾಗಿದೆ.

ಕೃಷಿ ವರಮಾನವು ಬ್ಯಾಂಕ್‌ಸಾಲದ ನಂತರ ಅಧಿಕವಾಗಿದೆ. ಏಕೆಂದರೆ ಆಧುನಿಕ ಕೃಷಿ ಪದ್ಧತಿ, ಬೀಜಗಳು ಮುಂತಾದವುಗಳ ಜೊತೆ ಮಳೆಯು ಸಕಾಲದಲ್ಲಿ ಆಗಿದ್ದರಿಂದ ಇಳುವರಿ ಹೆಚ್ಚಾಗಿದೆ, ಹಾಗೆಯೇ ಬೆಲೆಯ ಪ್ರಮಾಣದಲ್ಲಿ ಸುಧಾರಣೆಯಾಗಿದೆ. ಇದರಿಂದಾಗಿ ಸಾಲದ ಪೂರ್ವ ೭೯೫೦ರೂಗಳ ಸರಾಸರಿ ವರಮಾನವು ೩೯,೨೦೦ರೂಗಳಿಗೆ ಅಧಿಕವಾಗಿರುವುದನ್ನು ಕಾಣಬಹುದು. ಹಾಗೆಯೇ ವೆಚ್ಚವು ಕೂಡ ಸರಾಸರಿ ३೮೫೦ರೂಗಳಿಂದ ೧೫,೫೦೦ರೂಪಾಯಿಗಳಿಗೆ ಅಧಿಕವಾಗಿದೆ. ವರಮಾನವು ವೆಚ್ಚಕ್ಕಿಂತ ೨೩೫೦೦ರೂಗಳಷ್ಟು ಅಧಿಕವಾಗಿದೆ. ಉತ್ಪಾದನೆಯು ಸಂಪೂರ್ಣವಾಗಿ ಮಳೆಯಾಧಾರಿತವಾಗಿದ್ದರಿಂದ ಒಂದೊಂದು ವರುಷ ಒಂದೊಂದು ರೀತಿಯಲ್ಲಿ ಉತ್ಪಾದನೆಯಾಗುತ್ತದೆ. ಒಟ್ಟಿನಲ್ಲಿ ಉತ್ಪಾದನೆ ವರಮಾನ ಎರಡೂ ಬ್ಯಾಂಕ್‌ಸಾಲದ ನಂತರ ಅಧಿಕವಾಗಿರುವುದನ್ನು ಕಾಣಬಹುದು.

೧೯೭೭ರಿಂದ ೨೦೦೭ರ ಅವಧಿಯಲ್ಲಿ ಕೃಷಿ ಉತ್ಪನ್ನವು ಪ್ರತಿಶತ ೮೪.೯ರಷ್ಟು ಅಧಿಕವಾಗಿದೆ. ಹಾಗೆಯೆ ಅದೇ ಕಾಲಾವಧಿಯಲ್ಲಿ ಉತ್ಪನ್ನ ಮೌಲ್ಯ ಪ್ರತಿಶತ ೨೨೬ರಷ್ಟು ಅಧಿಕವಾಗಿದ್ದು ವಾರ್ಷಿಕವೆಚ್ಚದ ಮೌಲ್ಯ ३೦೨ರಷ್ಟು ಅಧಿಕವಾಗಿರುವುದನ್ನು ಕಾಣಬಹುದು. ಇವೆರಡರ ಅನುಪಾತವು ೨३३ರಷ್ಟು ಅಧಿಕವಾಗಿರುವುದನ್ನು ಕಾಣಬಹುದು.

**೫. ವಿವಿಧ ವಲಯಗಳ ವರಮಾನ**

ಪಿಜಿಬಿ ಸಾಲವು ಸಮಾಜದಲ್ಲಿನ ದುರ್ಬಲ ವರ್ಗದವರ ಸಣ್ಣ/ಅತಿಸಣ್ಣ ರೈತರು, ಸಣ್ಣ ಉದ್ದಿಮೆದಾರರು, ಭೂರಹಿತ ಕಾರ್ಮಿಕರು, ಸಣ್ಣ ವ್ಯಾಪಾರಿಗಳು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಮತ್ತು ಆದ್ಯತಾ ವಲಯದವರ ಮೇಲೆ ಹೇಗೆ ಪ್ರಭಾವ ಬೀರಿದೆ ಹಾಗೂ ವರಮಾನ ಸುಧಾರಣೆಗೆ ಹೇಗೆ ಪ್ರಯತ್ನಿಸಿದೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

**೧. ಕೃಷಿ:** ಕೃಷಿ ಚಟುವಟಿಕೆಗಳಿಂದ ಬಂದ ವರಮಾನವು ೭೯೫೦ ರೂಪಾಯಿಗಳಾಗಿದ್ದು, ಸಾಲದ ನಂತರದಲ್ಲಿ ೨೦೦೭ ಇಸ್ವಿಯ ಹೊತ್ತಿಗೆ ३೯,೨೦೦ರೂಪಾಯಿಗಳಾಗಿದ್ದು, ನಿವ್ವಳ ೧೮,೦೦೦ರೂಪಾಯಿಗಳಿಗೆ ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದು. ಹೀಗಾಗಿ ಕೃಷಿಕರ ಮೇಲೆ ಬ್ಯಾಂಕು ಪ್ರಭಾವ ಬೀರಿ ಜೀವನಮಟ್ಟ ಸುಧಾರಣೆಗೆ ಕಾರಣವಾಗಿದೆ ಎನ್ನಬಹುದು.

**೨. ಭೂ ರಹಿತ ಕಾರ್ಮಿಕರು/ಕೃಷಿ ಅವಲಂಬಿತ ಚಟುವಟಿಕೆಗಳು**

ಇವರು ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕಾರ್ಮಿಕರಾಗಿ ಕಾರ್ಯನಿರ್ವಹಿಸುತ್ತಾರೆ. ಹಾಗೆಯೇ ಆಡು, ಕುರಿ ಹಸುಗಳನ್ನು ಸಾಕಿ ಅವುಗಳ ಉತ್ಪನ್ನದಿಂದ ಬಂದಂತಹ ವರಮಾನದಲ್ಲಿ ಜೀವನ ನಿರ್ವಹಿಸುತ್ತಿದ್ದರು. ಭಾರತ ಸರ್ಕಾರ ಬಡತನ ನಿರ್ಮೂಲನ ಕಾರ್ಯಕ್ರಮವನ್ನು ಜಾರಿಗೆ ತಂದಿದ್ದರಿಂದ ಭೂರಹಿತ ಕಾರ್ಮಿಕರು

ಆ ಸೌಲಭ್ಯವನ್ನು ಪಡೆದುಕೊಂಡರು. ಈ ಶಾಖೆಯು ಗ್ರಾಮಗಳಲ್ಲಿನ ಭೂ ರಹಿತ ಕಾರ್ಮಿಕರನ್ನು ಗುರುತಿಸಿ, ಅವರಿಗೆ ೧೦,೦೦೦ರೂಗಳಿಂದ ೨೦,೦೦೦ರೂಪಾಯಿಗಳವರೆಗೆ ಹಣಕಾಸಿನ ನೆರವನ್ನು ನೀಡಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿದ್ದ ದೇಶೀಯ ಹಸು, ಎಮ್ಮೆಗಳಿಗೆ ಬದಲಾಗಿ ವಿದೇಶಿ ತಳಿಗಳ ಹಸು, ಎಮ್ಮೆಗಳನ್ನು ಬ್ಯಾಂಕ್ ಸಾಲದ ಮೂಲಕ ಪಡೆದಿದ್ದಾರೆ. ಈ ಹೊಸ ತಳಿಗಳ ಜಾನುವಾರುಗಳು ಅಧಿಕ ಪ್ರಮಾಣದಲ್ಲಿ ಹಾಲು ಕೊಡುತ್ತವೆ. ಹೆಚ್ಚುವರಿ ಹಾಲನ್ನು ಡೈರಿಗೆ ಹಾಕುತ್ತಾರೆ. ಆ ಮೂಲಕ ಪ್ರತಿತಿಂಗಳು ಡೈರಿಯಿಂದ ವರಮಾನವನ್ನು ಪಡೆಯುತ್ತಾರೆ. ಪ್ರತಿ ತಿಂಗಳು ಇವುಗಳ ನಿರ್ವಹಣೆಗೆ ೧೦೦೦ರೂಗಳಿಗಿಂತಲೂ ಅಧಿಕ ಹಣವನ್ನು ವೆಚ್ಚಮಾಡುತ್ತಾರೆ. ಇವರ ವರಮಾನವು ವಾರ್ಷಿಕವಾಗಿ ೧೮,೦೦ರೂಗಳಿಗೂ ಮೇಲ್ಪಟ್ಟು ಪಡೆಯುತ್ತಾರೆ. ಬ್ಯಾಂಕುಗಳಿಂದ ಹಸು, ಎಮ್ಮೆ, ಆಡುಗಳ ಸಾಲ ಪಡೆದು ಅವುಗಳ ನಿರ್ವಹಣೆಯಿಂದ ತಮ್ಮ ಜೀವನಕ್ಕೆ ಯಾವುದೇ ತೊಂದರೆಯಿಲ್ಲ. ಪ್ರತಿ ತಿಂಗಳು ಬಂದಂತಹ ವರಮಾನದಲ್ಲಿ ಅವುಗಳ ನಿರ್ವಹಣೆ ಮತ್ತು ಬ್ಯಾಂಕ್ ಕಂತನ್ನು ತೀರಿಸಿ, ಜೀವನ ನಿರ್ವಹಣೆ ಮಾಡಿಕೊಂಡು ಹೋಗುತ್ತಿದ್ದೇವೆ ಎಂದಿದ್ದಾರೆ.

೨೦ ಭೂ ರಹಿತ ಕಾರ್ಮಿಕರನ್ನು ಸಮೀಕ್ಷೆಗೆ ಒಳಪಡಿಸಿದಾಗ ತಮಗೆ ಬ್ಯಾಂಕು ೨೦೦೫-೦೬ರಲ್ಲಿ ೧೫,೦೦ರೂಗಳ ಸಾಲವನ್ನು ನೀಡಿತ್ತು. ಆ ಸಾಲದಲ್ಲಿ ೭೫೦೦ರೂಗಳನ್ನು ಸಹಾಯಧನವನ್ನಾಗಿ ನೀಡಿದೆ. ಉಳಿದ ೭೫೦೦ರೂಗಳಿಗೆ ಕಂತಿನ ಮೂಲಕ ಸಾಲ ಮರುಪಾವತಿ ಮಾಡುತ್ತಾ ಬಂದಿದ್ದೇವೆ. ಬ್ಯಾಂಕಿನೊಂದಿಗೆ ನಿರಂತರವಾಗಿ ಸಂಪರ್ಕದಲ್ಲಿದ್ದೇವೆ. ಬ್ಯಾಂಕುಸಾಲವು ತಮ್ಮ ಬಡತನವನ್ನು ನಿರ್ಮೂಲನೆ ಮಾಡಿದೆ ಜೊತೆಗೆ ನಿರುದ್ಯೋಗ ಕಡಿಮೆ ಮಾಡಿ ತಮ್ಮ ಜೀವನ ಮಟ್ಟ ಸುಧಾರಿಸಿದೆ ಎನ್ನುತ್ತಾರೆ. ಈ ಎಲ್ಲಾ ಅಂಶಗಳನ್ನು ಸಮೀಕ್ಷೆಯ ಮೂಲಕ ಕಂಡುಕೊಳ್ಳಲಾಯಿತು.

**ಪಟ್ಟಿ ೬**

**ಭೂ ರಹಿತ ಕಾರ್ಮಿಕರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಭೂ.ರ ಕಾರ್ಮಿಕರು | ೨೫ | ೮೦೦ | ೧೮೦೦೦ | ೧೭೨೦೦ | ೨೧೫೦ |

ಪಿಜಿಬಿ ಸಾಲದ ಪೂರ್ವದಲ್ಲಿ ಭೂ.ರ.ಕಾವರಮಾನವು ಕಡಿಮೆ ಇದ್ದು, ಸಾಲದ ನಂತರದಲ್ಲಿ ೨೦೦೬ರ ಹೊತ್ತಿಗೆ ವರಮಾನವು ೧೮೦೦೦ರೂಪಾಯಿಗಳಿಗೆ ಅಧಿಕವಾಗಿದೆ. ನಿವ್ವಳ ಹೆಚ್ಚುವರಿ ೧೭೨೦೦ರೂಗಳಾಗಿದ್ದು ಅದರ ಪ್ರತಿಶತ ಪ್ರಮಾಣವು ೨೧೫೦ರಷ್ಟಾಗಿದೆ. ಹೀಗೆ ಬ್ಯಾಂಕು ಸಾಲದ ನಂತರದಲ್ಲಿ ಬಡತನ ರೇಖೆಯಿಂದ ಮೇಲೆ ಬರಲು ಬ್ಯಾಂಕು ಸಹಾಯಮಾಡಿದೆ. ಬ್ಯಾಂಕು ತಮ್ಮ ಅನ್ನದಾತ ಎಂದು ಫಲಾನುಭವಿಗಳು ಮನಃಪೂರ್ವಕವಾಗಿ ತಿಳಿಸಿದ್ದಾರೆ.

೩. ಸಣ್ಣ ಉದ್ದಿಮೆದಾರರು/ಕರಕುಶಲ ಕರ್ಮಿಗಳು

ಗ್ರಾಮೀಣ ಪ್ರದೇಶದಲ್ಲಿನ ಕುಲಕಸುಬುಗಳು ಅನಾದಿ ಕಾಲದಿಂದಲೂ ಅಸ್ತಿತ್ವದಲ್ಲಿದ್ದರೂ, ಆ ಸಂಪ್ರದಾಯ ಕಸುಬುಗಳು ಇಂದು ಕೆಲ ಪ್ರದೇಶಗಳಲ್ಲಿ ಮರೆಯಾಗಿ ಆಧುನಿಕ ಕಾಲದ ಕಸುಬುಗಳು ಗ್ರಾಮೀಣ ಪ್ರದೇಶದಲ್ಲಿ ಅಸ್ತಿತ್ವಕ್ಕೆ ಬಂದಿರುವುದನ್ನು ಕಾಣಬಹುದು. ಕುಂಬಾರಿಕೆ, ಬಡಗಿತನ, ಎಣ್ಣೆಗಾಣಗಳು, ನೇವಾರಿಕೆ, ಬಟ್ಟೆ ಹೊಲಿಯುವವರು, ಖಾನಾವಳಿ, ಸೋಡಾಮೇಕರ್ಸ್, ಸೇಂಗಾಸುಲಿಯುವ ಯಂತ್ರ, ಬುಟ್ಟಿ ಹೆಣೆಯುವುದು, ಸ್ವೀಟ್‌ಸ್ಟಾಲ್, ಏರ್‌ಕಂಪ್ರಸೆರ್ ಇನ್ನು ಮುಂತಾದ ಉದ್ಯಮಗಳು ಗ್ರಾಮೀಣ ಪ್ರದೇಶದಲ್ಲಿ ಅಸ್ತಿದಲ್ಲಿವೆ. ಈ ಮೊದಲಿದ್ದ ಸಾಂಪ್ರದಾಯಿಕ ಉದ್ಯಮಗಳಿಗೆ ತಿಲಾಂಜಲಿ ನೀಡಿ, ಆ ಸ್ಥಾನಕ್ಕೆ ಹೊಸ ಉದ್ಯಮಗಳು ಅಸ್ತಿತ್ವಕ್ಕೆ ಬಂದಿವೆ. ತುಂಗಭದ್ರಾ ಗ್ರಾಮೀಣ ಬ್ಯಾಂಕ್ ಸ್ಥಾಪನಾ ಪೂರ್ವದಲ್ಲಿ ಸಂಪ್ರದಾಯ ಕಸುಬುಗಳು ಅಸ್ತಿತ್ವದಲ್ಲಿದ್ದು, ಆ ನಂತರದಲ್ಲಿ ಕಾಲಕ್ಕೆ ತಕ್ಕಂತೆ ಉದ್ಯಮಗಳು ಕೂಡ ಬದಲಾಗಿವೆ ಎನ್ನಬಹುದು. ಈ ಪ್ರದೇಶದಲ್ಲಿನ ಗ್ರಾ.ಬ್ಯಾ.ಸ್ಥಾಪನಾ ಪೂರ್ವದಲ್ಲಿ ಇವರ ವರಮಾನ ಕಡಿಮೆಯಿದ್ದು, ನಂತರದಲ್ಲಿ ಇವರ ವರಮಾನವು ಅಧಿಕವಾಗಿರುವುದನ್ನು ಕಾಣಬಹುದು. ಇವರುಗಳು ೨೦೦೫-೦೬ನೇ ಇಸ್ವಿಯಲ್ಲಿ ೨೫,೦೦ರೂಗಳಿಂದ ೫೦,೦೦೦ರೂಗಳವರೆಗೆ ಬ್ಯಾಂಕನಿಂದ ಸಾಲ ಪಡೆದು ತಮ್ಮ ಉದ್ಯಮವನ್ನು ನಿರ್ವಹಿಸುತ್ತಿದ್ದಾರೆ. ಬ್ಯಾಂಕ್‌ನಿಂದ ಸಾಲ ಪಡೆದು ಉದ್ಯಮವನ್ನು ಸ್ಥಾಪಿಸಿದ ಮೇಲೆ ತಮ್ಮ ವರಮಾನ ಸುಧಾರಿಸಿದೆ. ಅಲ್ಲದೆ ಗ್ರಾಮೀಣ ಪ್ರದೇಶದಲ್ಲಿನ ನಿರುದ್ಯೋಗಿಗಳಿಗೆ ಉದ್ಯೋಗವನ್ನು ಕಲ್ಪಿಸಿಕೊಟ್ಟಿವೆ. ಬ್ಯಾಂಕುಗಳೊಂದಿಗೆ ನಿರಂತರ ಸಂಪರ್ಕವಿದ್ದು ಸಾಲ ಪಡೆಯುವ ಮತ್ತು ಹಿಂತಿರುಗಿಸುವ ಕ್ರಿಯೆ ನಿರಂತರವಾಗಿ ನಡೆದಿದೆ ಎನ್ನುತ್ತಾರೆ.

ವಿವಿಧ ಉದ್ಯಮದವರು ವಿವಿಧ ವಸ್ತುಗಳನ್ನು ಉತ್ಪಾದಿಸುತ್ತಾರೆ. ವಿವಿಧ ವಸ್ತುಗಳನ್ನು ವಿವಿಧ ಮಾರುಕಟ್ಟೆಯಲ್ಲಿ ವಿವಿಧ ಬೆಲೆಗಳಿಗೆ ಮಾರಾಟ ಮಾಡುತ್ತಾರೆ. ಇವರೆಲ್ಲರ ಸರಾಸರಿ ವರಮಾನವು ವೆಚ್ಚವನ್ನು ಕಳೆದು ೨೬೦೦೦ರೂಗಳಿಗಿಂತ ಅಧಿಕವಾಗಿದೆ ಎಂಬುದನ್ನು ಸಮೀಕ್ಷೆಯಿಂದ ಕಂಡುಕೊಳ್ಳಲಾಯಿತು. ಇದನ್ನು ಪಟ್ಟಿ ೭ರಲ್ಲಿ ಕಾಣಬಹುದು.

**ಪಟ್ಟಿ ೭**

**ಸಣ್ಣ ಉದ್ದಿಮೆದಾರರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಟಿಜಿಬಿ ಸಾಲದ ಪೂರ್ವ | ಟಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಕರಕುಶಲ ಕರ್ಮಿಗಳು/ ಸಣ್ಣ ಉದ್ದಿಮೆದಾರರು | ೩೦ | ೧೩೦೦ | ೨೬೦೦೦ | ೨೪೭೦೦ | ೧೯೦೦ |

ಈ ಮೇಲಿನ ಪಟ್ಟಿಯನ್ನು ಗಮನಿಸಿದಾಗ ಆಧುನಿಕತೆಗೆ ತಕ್ಕಂತೆ ಉದ್ಯಮಗಳನ್ನು ರೂಢಿಸಿಕೊಂಡು ತಮ್ಮ ವರಮಾನವನ್ನು ಬ್ಯಾಂಕ್ ಸಹಕಾರದೊಂದಿಗೆ ೨೬,೦೦೦ರೂಗಳಿಗೆ ಅಧಿಕಗೊಳಿಸಿಕೊಂಡಿದ್ದಾರೆ. ನಿವ್ವಳ ಹೆಚ್ಚಳವು ೨೪,೭೦೦ರೂಗಳಾದರೆ ಪ್ರತಿಶತ ೧೯೦೦ರಷ್ಟು ಅಧಿಕವಾಗಿದೆ. ಕಳೆದ ೩೦ ವರ್ಷಗಳ ಅವಧಿಯಲ್ಲಿ ವಾರ್ಷಿಕವಾಗಿ ೬೩.೩೩ರಷ್ಟು ಅಧಿಕವಾಗಿದೆ ಎನ್ನಬಹುದು.

### ೪. ಗ್ರಾಮೀಣ ವ್ಯಾಪಾರಿಗಳು

ಗ್ರಾಮೀಣ ಪ್ರದೇಶದಲ್ಲಿನ ವ್ಯವಹಾರಗಳೆಂದರೆ ಕಿರಾಣಿ ಅಂಗಡಿ, ವಿದ್ಯುತ್ ಕಂಟ್ರಾಕ್ಟರ್, ಹಾಲು ಮಾರಾಟ, ಕಾಳುಕಡಿ ವ್ಯಾಪಾರ, ಬಟ್ಟೆ ವ್ಯಾಪಾರ, ಬಳೆ ಮಾರುವವರು, ಕಟ್ಟಿಗೆ ವ್ಯಾಪಾರ ಇನ್ನು ಮುಂತಾದ ವ್ಯಾಪಾರಗಳನ್ನು ನಿರ್ವಹಿಸುತ್ತಾರೆ. ಬ್ಯಾಂಕ್ ಸಾಲದ ಪೂರ್ವದಲ್ಲಿ ಹಣಕಾಸನ್ನು ಇತರೆ ಕಡೆಗಳಿಂದ ತಂದು ಕಾರ್ಯನಿರ್ವಹಿಸುತ್ತಿದ್ದರು. ಬ್ಯಾಂಕ್ ಸಾಲದ ನಂತರದಲ್ಲಿ ಇವರು ತಮ್ಮ ವ್ಯವಹಾರವನ್ನು ಉತ್ತಮ ಪಡಿಸಿಕೊಂಡಿದ್ದಾರೆ. ತಮ್ಮ ವ್ಯವಹಾರಕ್ಕೆ ಬೇಕಾದ ಸರಕನ್ನು ಹತ್ತಿರದ ಪಟ್ಟಣದಿಂದ ತಂದು ಮಾರಾಟ ಮಾಡುತ್ತಾರೆ. ತಾವು ಕೂಡ ವಸ್ತುಗಳ ಸಾಕಾಣಿಕೆ ಇತರೆ ವೆಚ್ಚಗಳ ಜೊತೆಗೆ ಪ್ರತಿಶತ ೨೦ ಮತ್ತು ೩೦ ಪಟ್ಟು ಬೆಲೆಯನ್ನು ಅಧಿಕಗೊಳಿಸಿಕೊಂಡು ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಇದರಿಂದ ಲಾಭವನ್ನು ಪಡೆಯುತ್ತಾರೆ. ವಿವಿಧ ವ್ಯಾಪಾರಸ್ಥರು ೨೦೦೫ ಮತ್ತು ೦೬ನೇ ಸಾಲಿನಲ್ಲಿ ಇದರಿಂದ ಲಾಭವನ್ನು ಪಡೆಯುತ್ತಾರೆ. ವಿವಿಧ ವ್ಯಾಪಾರಸ್ಥರು ೨೦೦೫-೦೬ನೇ ಸಾಲಿನಲ್ಲಿ ೧೫,೦೦೦ರೂಗಳಿಂದ ೫೦,೦೦೦ರೂಗಳವರೆಗೆ ಗ್ರಾಮೀಣ ಬ್ಯಾಂಕಿನಿಂದ ಸಾಲ ಪಡೆದಿದ್ದಾರೆ ಎಂಬುದನ್ನು ಬ್ಯಾಂಕ್‌ನ ಲೆಕ್ಕಪತ್ರಗಳು ತಿಳಿಸುತ್ತವೆ. ಬ್ಯಾಂಕ್ ಸಾಲದ ಪೂರ್ವದಲ್ಲಿ ಇವರ ವರಮಾನವು ೩೨೦೦ರೂಗಳಿದ್ದು ಸಾಲದ ನಂತರದಲ್ಲಿ ವಾರ್ಷಿಕ ವೆಚ್ಚವನ್ನು ಕಳೆದು ೨೧,೫೦೦ರೂಗಳವರೆಗೆ ವರಮಾನ ವೃದ್ಧಿಸಿಕೊಂಡಿದ್ದಾರೆ. ಈ ಅಂಶಗಳನ್ನು ಸಮೀಕ್ಷಾ ಸಮಯದಲ್ಲಿ ಕಂಡುಕೊಳ್ಳಲಾಯಿತು.

ಪಟ್ಟಿ ೮

ಗ್ರಾಮೀಣ ವ್ಯಾಪಾರಿಗಳು

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ವ್ಯಾಪಾರಿಗಳು | ೧೫ | ೩.೨೦೦ | ೨೬.೫೦೦ | ೨೩.೩೦೦ | ೭೨೮ |

ಮೇಲಿನ ಪಟ್ಟಿಯನ್ನು ಗಮನಿಸಿದಾಗ ಪಿಜಿಬಿ ಸಾಲದ ಪೂರ್ವದಲ್ಲಿ ವರಮಾನವು ೩೨೦೦ರೂಗಳಿದ್ದು ಸಾಲದ ನಂತರ ೨೬,೫೦೦ರೂಗಳಿಗೆ ಅಧಿಕವಾಗಿದೆ. ಅದನ್ನು ಶೇಕಡವಾರಿಗೆ ಪರಿವರ್ತಿಸಿದರೆ ೭೨೮ರಷ್ಟು ಹೆಚ್ಚಳವಾಗಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಈ ನಾಲ್ಕು ವರ್ಗಗಳು ಗ್ರಾಮೀಣ ಬ್ಯಾಂಕ್‌ನ ಸಾಲದ ನಂತರದಲ್ಲಿ ತಮ್ಮ ವರಮಾನ ವೃದ್ಧಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

### ೬. ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲ

ಸಾಂಸ್ಥಿಕೇತರ ಹಣಕಾಸಿನ ಸಂಸ್ಥೆಗಳು ಧೀರ್ಘಕಾಲಾವದಿಯಿಂದ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾ ಬಂದಿವೆ. ಸಾಹುಕಾರರು, ಸ್ನೇಹಿತರು, ಬಂಧುಗಳು, ಜಮೀನ್ದಾರರು, ಕಮಿಷನ್ ಏಜೆಂಟ್ಸ್, ದಲ್ಲಾಲರು ಇನ್ನು ಮುಂತಾದವರಿಂದ ಗ್ರಾಮೀಣ ಜನಪದರು ಹಣಕಾಸಿನ ನೆರವನ್ನು ಪಡೆದಿದ್ದಾರೆ. ೧೯೭೬ರ ನಂತರದಲ್ಲಿ ಗ್ರಾಮೀಣ ಬ್ಯಾಂಕ್ ಸ್ಥಾಪನೆಯಾದ ನಂತರದಲ್ಲಿ ಇವರ ಪ್ರಭಾವ ಕಡಿಮೆಯಾಗಿದೆ. ಇಂದಿಗೂ ಕೂಡ ಕೆಲವು ಕುಟುಂಬಗಳು ತಮಗೆ ಅನಿವಾರ್ಯವಾದಾಗ ಇವರಿಂದ ಸಾಲ ಪಡೆಯುತ್ತಾರೆ. ಇನ್ನು ಕೆಲವು ರೈತ ಕುಟುಂಬಗಳು ತಮ್ಮ ಕೃಷಿ ಚಟುವಟಿಕೆಗಳಿಗೆ ಬೇಕಾದ ಹಣಕಾಸಿನ ನೆರವನ್ನು ದಲ್ಲಾಳರಿಂದ ಪಡೆದಿರುವುದನ್ನು ಇಂದಿಗೂ ಕಾಣುತ್ತೇವೆ. ಆದರೆ ಪ್ರಮಾಣವು ಕಡಿಮೆಯಾಗಿದೆ.

**ಪಟ್ಟಿ ೧೯**

**ಸಾಂಸ್ಥಿಕೇತರ ಹಣಕಾಸಿನ ಸಂಸ್ಥೆಗಳ ಸಾಲ**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | A | B | C | D | A | B | C | D | A | B | C | D |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೨೬ | ೧೫ | ೫ | ೪ | ೬ | ೨ | .. | .. | ೬ | ೨ | .. | .. |
| ೦೨. | ಗ್ರಾ.ಕರಕುಶಲ/ ಸಣ್ಣಉದ್ದಿಮೆದಾರರು | ೩೦ | ೮ | ೧೮ | ೩ | ೧ | ೩ | ೧ | .. | .. | ೩ | ೧ | .. | .. |
| ೦೩. | ಗ್ರಾ. ವ್ಯಾಪಾರಸ್ಥರು | ೨೫ | ೨ | ೨೩ | .. | .. | .. | ೩ | .. | .. | ೩ | .. | .. | .. |
| ೦೪. | ಭೂ.ರಹಿತ ಕಾರ್ಮಿಕರು | ೧೫ | ೪ | .. | .. | .. | .. | ೧ | .. | .. | ೧ | .. | .. | .. |

A ಲೇವಾದೇವಿಗಾರರು B ವ್ಯಾಪಾರಸ್ಥರು C ಸ್ನೇಹಿತರು/ಬಂಧುಗಳು D ಇತರೆ

### ೭. ಹಣಕಾಸಿನ ಸಂಸ್ಥೆಗಳ ಮೂಲಕ ಸಾಲ ಪಡೆದಿರುವುದು

ಗ್ರಾಮೀಣ ಪ್ರದೇಶದಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳಾದ ಪ್ರಾಥಮಿಕ ಸಹಕಾರಿ ಸಂಘಗಳು, ವಾಣಿಜ್ಯ ಬ್ಯಾಂಕುಗಳು, ಧೀರ್ಘಾವಧಿ ಸಾಲಕ್ಕೆ ಭೂ ಅಭಿವೃದ್ಧಿ ಬ್ಯಾಂಕುಗಳು ಹಣಕಾಸಿನ ನೆರವನ್ನು ನೀಡುತ್ತಿದ್ದವು. ಆದರೆ ಈ ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿನ ಉಳ್ಳವರಿಗೆ ಮಾತ್ರ ಸಾಲ ನೀಡುತ್ತಿದ್ದರು. ಸಮಾಜದಲ್ಲಿನ ದುರ್ಬಲ ವರ್ಗ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಸಾಲವನ್ನು ನಿರಾಕರಿಸಲಾಗುತ್ತಿತ್ತು. ಆದರೆ ಪ್ರಗತಿ ಗ್ರಾಮೀಣ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದ ನಂತರದಲ್ಲಿ

ಸಮಾಜದಲ್ಲಿನ ಸಣ್ಣ/ಅತಿಸಣ್ಣ ರೈತರು ಆದ್ಯತಾ ವಲಯಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದರಿಂದ ಜನಪದರು ಈ ಬ್ಯಾಂಕಿನಿಂದ ಹಣಕಾಸಿನ ನೆರವನ್ನು ಪಡೆದುಕೊಳ್ಳಲಾರಂಭಿಸಿದರು.

ಇದರಿಂದಾಗಿ ದುರ್ಬಲವರ್ಗದ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರು ದಲ್ಲಾಳಿಗಳಿಂದ ಮಧ್ಯವರ್ತಿಗಳಿಂದ ಮುಕ್ತವಾಗಿ ಜೀವನ ನಿರ್ವಹಿಸಲು ಸಾಧ್ಯವಾಯಿತು. ಮೊದಲು ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳು ವಿಧಿಸುತ್ತಿದ್ದ ಬಡ್ಡಿಯ ದರಗಳಿಗಿಂತ ಕಡಿಮೆ ಬಡ್ಡಿಯ ದರದಲ್ಲಿ ಸಾಲವು ಗ್ರಾಮೀಣ ಬ್ಯಾಂಕುಗಳಲ್ಲಿ ದೊರೆಯುತ್ತಿದ್ದರಿಂದ ಗ್ರಾಮೀಣ ಬ್ಯಾಂಕುಗಳ ಪ್ರಭಾವ ಗ್ರಾಮೀಣ ಪ್ರದೇಶದಲ್ಲಿ ಅಧಿಕವಾಯಿತು ಎನ್ನಬಹುದು ಹಾಗಾಗಿ ಈ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯಲ್ಲಿ ಮಹತ್ತರ ಪಾತ್ರವಹಿಸಿವೆ ಎನ್ನಬಹುದು.

**ಪಟ್ಟಿ ೧೦**

**ಸಾಂಸ್ಥಿಕ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದಿರುವುದು**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | E | F | G | H | E | F | G | H | E | F | G | H |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೨೦ | ೩ | .. | .. | .. | .. | .. | ೪೦ | .. | .. | .. | ೪೦ |
| ೦೨. | ಗ್ರಾಮೀಣ ಉದ್ಯಮ | ೩೦ | .. | ೨ | .. | .. | .. | .. | .. | ೩೦ | .. | .. | .. | ೩೦ |
| ೦೩. | ಗ್ರಾ. ವ್ಯಾಪಾರಸ್ಥರು | ೨೫ | .. | ೫ | .. | .. | .. | .. | .. | ೨೫ | .. | .. | .. | ೨೫ |
| ೦೪. | ಭೂ.ರಹಿತ ಕಾರ್ಮಿಕರು | ೧೫ | .. | .. | .. | .. | .. | .. | .. | ೧೫ | .. | .. | .. | ೧೫ |

E ಪ್ರಾಥಮಿಕ ಸಹಕಾರ ಸಂಘಗಳು F ವಾಣಿಜ್ಯ ಬ್ಯಾಂಕುಗಳು G ಅಭಿವೃದ್ಧಿ ಬ್ಯಾಂಕು H ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು.

**೮. ಗ್ರಾಮೀಣ ಬ್ಯಾಂಕುಗಳ ಬಗ್ಗೆ ತಿಳುವಳಿಕೆ**

ಗ್ರಾಮೀಣ ಬ್ಯಾಂಕುಗಳ ಬಗ್ಗೆ ಸಮೀಕ್ಷೆ ನಡೆಸಿದ ೧೧೦ ಕುಟುಂಬಗಳಲ್ಲಿ ೭೦ ಕುಟುಂಬಗಳು ಬ್ಯಾಂಕಿನ ಸಿಬ್ಬಂದಿಯಿಂದ, ೨೦ ಕುಟುಂಬಗಳು ಗ್ರಾಮಸಭಾದ ಮೂಲಕ ೧೦ ಕುಟುಂಬಗಳು ಗ್ರಾಮದ ಮುಖಂಡರಿಂದ ೫ ಕುಟುಂಬಗಳು ಸ್ನೇಹಿತರಿಂದ ೫ ಕುಟುಂಬಗಳು ಸ್ವಂತ ತಿಳುವಳಿಕೆಯಿಂದ ಬ್ಯಾಂಕಿನ ಬಗ್ಗೆ ತಿಳಿದುಕೊಂಡಿದ್ದಾರೆ. ಇವುಗಳು ಪ್ರತಿಶತ ೬೩, ೧೮, ೯, ೪ ಮತ್ತು ೪ರಷ್ಟು ಅನುಕ್ರಮವಾಗಿವೆ.

ಈ ಅಂಶವನ್ನು ಪಟ್ಟಿಯ ೧೧ರ ಮೂಲಕ ಕಂಡುಕೊಳ್ಳಲಾಗಿದೆ. ಇದರಿಂದ ತಿಳಿದು ಬರುವುದೇನೆಂದರೆ ಅಧಿಕ ಪ್ರಮಾಣದ ಜನಪದರು ಆ ಬ್ಯಾಂಕಿನ ಬಗ್ಗೆ ಅಲ್ಲಿನ ಸಿಬ್ಬಂದಿಯಿಂದ ಮಾಹಿತಿ ಪಡೆದಿದ್ದಾರೆ.

ಹಾಗೆಯೆ ಸಿಬ್ಬಂದಿಯು ಆ ಪ್ರದೇಶದ ಜನಪದರಿಗೆ ಸಾಲ ದೊರಕಿಸಿ ಕೊಡುವುದರಲ್ಲಿ ನೆರವು ನೀಡಿದ್ದಾರೆ. ಈ ಬ್ಯಾಂಕು ಸಿಬ್ಬಂದಿಯನ್ನು ನೇಮಕಮಾಡುವಾಗ ಆ ಪ್ರದೇಶದ ಬಗ್ಗೆ ಕಾಳಜಿ ಇರುವವರಿಗೆ, ಸ್ಥಳೀಯ ಸಮಸ್ಯೆಗಳಿಗೆ ಅರಿತವರಿಗೆ ಉದ್ಯೋಗಾವಕಾಶವನ್ನು ಕಲ್ಪಿಸುವುದರ ಮೂಲಕ ಆ ಭಾಗದ ಜನಪದರಿಗೆ ಸಾಲದ ಅವಶ್ಯಕತೆಯನ್ನು ಪೂರೈಸಲು ಸಾಧ್ಯವಾಗುತ್ತದೆ.

### ಗ್ರಾಮೀಣ ಬ್ಯಾಂಕುಗಳ ಬಗ್ಗೆ ಅಭಿಪ್ರಾಯಗಳು

ಸಮೀಕ್ಷಿಸಿದ ೧೧೦ ಕುಟುಂಬಗಳು ಬ್ಯಾಂಕ್ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದರಲ್ಲಿ ೯೦ ಕುಟುಂಬಗಳು ಪೂರ್ಣ ಪ್ರಮಾಣದ ತೃಪ್ತಿ ವ್ಯಕ್ತಪಡಿಸಿದ್ದಾರೆ. ಅದು ಪ್ರತಿಶತ ೮೧ರಷ್ಟಾಗುತ್ತದೆ. ಇನ್ನುಳಿದ ೨೦ ಕುಟುಂಬಗಳು ಅನೇಕ ರೀತಿಯ ಕಾರಣಗಳನ್ನು ನೀಡಿರುತ್ತಾರೆ. ಕೆಲವು ಕುಟುಂಬಗಳು ಸಾಲಕ್ಕೆ ಬೇಕಾದ ಸರಿಯಾದ ದಾಖಲೆಗಳನ್ನು ಒದಗಿಸದೇ ಇರುವುದು, ಮಳೆ ಬಂದಾಗ ಸಾಲ ವಿತರಣೆಯಲ್ಲಿ ವಿಳಂಬವಾಗಿದೆ ಎನ್ನುತ್ತಾರೆ. ಅಂತಹ ಸಂದರ್ಭಗಳಲ್ಲಿ ಈ ಕುಟುಂಬಗಳು ಅತೃಪ್ತಿ ವ್ಯಕ್ತಪಡಿಸಿವೆ. ಅದು ಪ್ರತಿಶತ ೧೯ರಷ್ಟಾಗುತ್ತದೆ. ಎಲ್ಲಾ ಕುಟುಂಬಗಳು ಬ್ಯಾಂಕು ಮುಂದುವರೆಸುವ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ. ಇತ್ತೀಚಿನ ಗ್ರಾಮೀಣ ಬ್ಯಾಂಕು ಕೆಸಿಸಿ ಕಾರ್ಡುಗಳನ್ನು ಜಾರಿಗೆ ತಂದು ರೈತರಿಗೆ ಅನುಕೂಲ ಕಲ್ಪಿಸಿದ್ದಾರೆ. ಬ್ಯಾಂಕು ಕೂಡ ಸತತವಾಗಿ ಲಾಭಗಳಿಸಿದೆ ಎನ್ನಬಹುದು.

ಪಟ್ಟಿ ೧೧

ಪಿಜಿಬಿ ಬ್ಯಾಂಕ್ ಬಗ್ಗೆ ಜ್ಞಾನ ಪಡೆದವರು ಮತ್ತು ಅದರ ಬಗೆಗಿನ ಅಭಿಪ್ರಾಯ

| ಕ್ರ. ಸಂಖ್ಯೆ | ವರ್ಗಗಳು | ಕು ಸಂಖ್ಯೆ | ಗ್ರಾಮದ ಮುಖಂಡರಿಂದ | ಸ್ವಂತ | ಸ್ನೇಹಿತರು | ಬ್ಯಾಂಕ್ ಸಿಬ್ಬಂಧಿ | ಗ್ರಾಮ ಸಭಾ | ಬಂಧು ಗಳಿಂದ | ಬ್ಯಾ.ತೃಪ್ತಿ | | ಸಾ.ಪ. ತೊಂದರೆಗಳು | | ಅಧಿಕಾರಿಗಳ ಬಗ್ಗೆ ತೃಪ್ತಿ | | ಬ್ಯಾಂಕು ಮುಂದುವ ರೆಸುವ ಬಗ್ಗೆ | |
|---|---|---|---|---|---|---|---|---|---|---|---|---|---|---|---|---|
| | | | | | | | | | ಹೌದು | ಇಲ್ಲ | ಹೌದು | ಇಲ್ಲ | ಹೌದು | ಇಲ್ಲ | ಬೇಕು | ಬೇಡ |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೦೫ | ೨ | ೨೫ | ೬ | ೨ | ೩೮ | ೨ | ಇಲ್ಲ | ೨ | ೩೮ | ೨ | ೪೦ | .. | .. |
| ೦೨. | ಕರಕುಶಲ/ಸಣ್ಣ ಉದ್ಯಮಿಗಳು | ೩೦ | ೨ | ೩ | ೨೦ | ೫ | .. | ೨೮ | ೨ | | ೨ | ೨೮ | ೨ | ೩೦ | .. | .. |
| ೦೩. | ಭೂರ.ಕಾ. | ೨೫ | ೦೧ | | ೨೦ | ೩ | ೧ | ೨೦ | ೫ | | ೫ | ೨೦ | ೫ | ೨೫ | .. | .. |
| ೦೪. | ಸಣ್ಣ ವ್ಯಾಪಾರಸ್ಥರು | ೧೫ | ೨ | | ೦೫ | ೬ | ೨ | ೦೪ | ೧೧ | | ೧೧ | ೦೪ | ೧೧ | ೧೫ | .. | .. |
| | | | ೧೦ | ೦೫ | ೭೦ | ೨೦ | ೦೫ | ೯೦ | | | | | | | | |

**ಹಂಪಸಾಗರ ಪಿಜಿಬಿ ಶಾಖೆಯ ಸ್ಥಿತಿ**

ಬ್ಯಾಂಕುಗಳ ಪರಿಸ್ಥಿತಿ ಸುಧಾರಿಸಬೇಕಾದರೆ ಸಾಲ ಪಡೆದವರು ನಿಗದಿತ ವೇಳೆಗೆ ಸಾಲ ಮರುಪಾವತಿ ಮಾಡಿದರೆ ಬ್ಯಾಂಕಿನ ಹಣಕಾಸಿನ ಪರಿಸ್ಥಿತಿ ಸುಧಾರಿಸುತ್ತದೆ. ಭಾರತ ಸರ್ಕಾರದ ಸಾಲಮನ್ನಾ ನೀತಿಯಲ್ಲಿ ಬಹುತೇಕ ಫಲಾನುಭವಿಗಳು ಇದರ ಪ್ರತಿಫಲ ಪಡೆದಿದ್ದಾರೆ. ಸಣ್ಣ/ಅತಿಸಣ್ಣ ರೈತರು ಪೂರ್ಣ ಪ್ರಮಾಣದಲ್ಲಿ ಸಾಲ ಮನ್ನಾ ಪಡೆದಿದ್ದಾರೆ. ದೊಡ್ಡ ರೈತರು ೨೫,೦೦೦ರೂಗಳವರೆಗೆ ಸಾಲಮನ್ನಾ ಪಡೆದಿದ್ದಾರೆ. ಈ ಹಣವನ್ನು ಕೇಂದ್ರಸರ್ಕಾರವು ಬ್ಯಾಂಕುಗಳಿಗೆ ತುಂಬಿಕೊಡುತ್ತದೆ.

ಹೀಗಾಗಿ ಬ್ಯಾಂಕಿನ ಬಾಕಿಯ ಸ್ಥಿತಿಯು ಸಾಮಾನ್ಯವಾಗಿ ಪ್ರತಿಶತ ೮೪ರಷ್ಟು ಮರುಪಾವತಿಯಾಗಿರುತ್ತದೆ. ಪ್ರತಿಶತ ೨೦ರಷ್ಟು ಮಾತ್ರ ಬಾಕಿಯ ಪ್ರಮಾಣವಿದ್ದು, ಇಂದು ಬಾಕಿದಾರರಿಲ್ಲದ ಹಾಗೆ ಆಗಿದೆ ಎನ್ನುತ್ತಾರೆ ಬ್ಯಾಂಕು ಅಧಿಕಾರಿಗಳು.

ಈ ಬ್ಯಾಂಕು ೨೦೦೭ರ ಸೆಪ್ಟೆಂಬರ್ ಹೊತ್ತಿಗೆ ೬.೮೦ಕೋಟಿ ರೂಪಾಯಿಗಳ ವ್ಯವಹಾರವನ್ನು ನಿರ್ವಹಿಸಿದೆ. ಅದರಲ್ಲಿ ಕೃಷಿಗೆ ೧.೫೫ ಲಕ್ಷ ರೂಪಾಯಿಗಳು, ಸಣ್ಣ ಉದ್ಯಮಕ್ಕೆ ೧೧ಲಕ್ಷ ರೂಪಾಯಿಗಳು, ಸಣ್ಣ ವ್ಯಾಪಾರಕ್ಕೆ ೮೦೦೦ರೂಪಾಯಿಗಳಿಂದ ೫೦ ಸಾವಿರ ರೂಪಾಯಿಗಳವರೆಗೆ ಸಾಲವನ್ನು ನೀಡಿದೆ. ಭೂರಹಿತ ಕಾರ್ಮಿಕರಿಗೆ, ಸಾಕಷ್ಟು ಪ್ರಮಾಣದಲ್ಲಿ ಸಾಲವನ್ನೊದಗಿಸಿದ್ದಾರೆ. ಶಿಕ್ಷಣ, ಗೃಹನಿರ್ಮಾಣ, ಸ್ವಸಹಾಯ ಗುಂಪುಗಳಿಗೆ ಹಣಕಾಸಿನ ನೆರವನ್ನು ನೀಡಿದೆ. ಕಾಲುವೆ ತಾಂಡದಲ್ಲಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಅತ್ಯಧಿಕ ಪ್ರಮಾಣದಲ್ಲಿ ಹೈನುಗಾರಿಕೆ ಸಾಲ ಪಡೆದು ತಮ್ಮ ಸ್ಥಿತಿಯನ್ನು ಸುಧಾರಿಸಿಕೊಂಡಿದ್ದಾರೆ. ಬ್ಯಾಂಕು ಎರಡು ಸಾರಿ A+Ve ಅವಾರ್ಡ್ ಪಡೆದಿದ್ದು ನಿರಂತರವಾಗಿ ಲಾಭಗಳಿಸುತ್ತಿರುವ ಬ್ಯಾಂಕಾಗಿದೆ. ಸಾಲ ಮರುಪಾವತಿ ಉತ್ತಮವಾಗಿದ್ದು ಅದು ಪ್ರತಿಶತ ೮೪ರಷ್ಟಾಗಿದೆ. ಪ್ರತಿಶತ ೧೬ರಷ್ಟು ಮಾತ್ರ ಪಾವತಿಯಾಗಬೇಕಾಗಿದೆ.ಬ್ಯಾಂಕು ಗ್ರಾಮೀಣ ಜನರಲ್ಲಿ ಮನೆ ಮಾತಾಗಿದ್ದು ತಮ್ಮನ್ನು ಉದ್ಧರಿಸಲು ಬಂದ ಹಣಕಾಸಿನ ಸಂಸ್ಥೆ ಎಂದು ಮನದುಂಬಿ ಹೇಳುತ್ತಾರೆ.

**೬. ಕೂಡ್ಲಿಗಿ ಕ್ಷೇತ್ರ: ಹೊಸಹಳ್ಳಿ ಗ್ರಾಮೀಣ ಬ್ಯಾಂಕ ಶಾಖೆ**

ಈ ಶಾಖೆಯು ಕೂಡ್ಲಿಗಿ ತಾಲೂಕಿನ ಕಾನಹೊಸಹಳ್ಳಿ, ಆಲೂರು ಗ್ರಾಮಗಳಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಪತ್ತಿನ ಕಾರ್ಯವನ್ನು ನಿರ್ವಹಿಸುತ್ತಿದೆ. ಎರಡು ಗ್ರಾಮಗಳಿಂದ ೧೦೦ಜನ ಫಲಾನುಭವಿಗಳನ್ನು ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಳ್ಳಲಾದೆ. ಈ ಪಲಾನುಭವಿಗಳಲ್ಲಿ ೪೦ ಕುಟುಂಬಗಳು ಸಣ್ಣ, ಅತಿಸಣ್ಣ ರೈತರು, ೨೫ ಕುಟುಂಬಗಳು ಸಣ್ಣ ಉದ್ದಿಮೆದಾರರು ೨೦ ಭೂರಹಿತ ಕಾರ್ಮಿಕರು ೧೫ ಸಣ್ಣ ವ್ಯಾಪಾರಿಗಳನ್ನು ಸಮೀಕ್ಷೆಗೆ ಒಳಪಡಿಸಲಾಗಿದೆ. ಈ ಸಮೀಕ್ಷೆಯಲ್ಲಿ ಫಲಾನುಭವಿ ಸದಸ್ಯರುಗಳ ಸಂಖ್ಯೆ ಸಾಕ್ಷರಸ್ಥರ ಪ್ರಮಾಣ, ಅವರ ಉದ್ಯೋಗ, ಮನೆಗಳ ವಿಧ, ಅವಲಂಬಿಸಿರುವವರ ಸಂಖ್ಯೆ ಮುಂತಾದ ಅಂಶಗಳ ಬಗ್ಗೆ ಅವರಿಂದಲೇ ಪಡೆದ ಮಾಹಿತಿಯನ್ನು ಪಟ್ಟಿ ೧ರಲ್ಲಿ ಕಾಣಬಹುದು.

## ಪಟ್ಟಿ ೧

## ಸಾಮಾನ್ಯ ಮಾಹಿತಿ

ಮನೆಗಳ ವಿಧ

| ಕ್ರಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಸರಾಸರಿ ಸದಸ್ಯರು | ಸಾಕ್ಷರಸ್ಥ ಸಂಖ್ಯೆ | ದುಡಿಯುವ ವರಸಂಖ್ಯೆ | ಗುಡಿಸಲು ಗಳು | ಮಾಳಿಗೆ ಮನೆ | ಹೆಂಚಿನ ಮನೆ | ತಗಡಿನ ಮನೆ | ಜನತಾ ಮನೆ | ಆರ್‌ಸಿಸಿ ಮನೆ |
|---|---|---|---|---|---|---|---|---|---|---|---|
| ೦೧ | ಸಣ್ಣ/ಅತಿಸಣ್ಣ ರೈತರು | ೪೦ | ೫ | ೪ | ೩ | .. | ೨೩ | ೨ | ೩ | ೯ | ೩ |
| ೦೨ | ಗ್ರಾಮೀಣ ಕುಶಲ ಉದ್ದಿಮೆ ದಾರರು | ೨೫ | ೬ | ೪ | ೩ | ೧ | ೧೭ | ೩ | ೩ | ೧ | .. |
| ೦೩. | ಸಣ್ಣ ವ್ಯಾಪಾರಿಗಳು | ೧೫ | ೬ | ೬ | ೪ | .. | ೬ | ೨ | .. | ೬ | ೧ |
| ೦೪. | ಭೂ ರಹಿತ ಕಾರ್ಮಿಕರು | ೨೦ | ೫ | ೩ | ೨ | ೨ | ೮ | ೧ | .. | ೯ | .. |
| | ಒಟ್ಟು | ೧೦೦ | | | | ೩ | ೫೪ | ೮ | ೬ | ೨೫ | ೪ |

ಪಟ್ಟಿ ೧ರಲ್ಲಿ ಅವಲೋಕಿಸಿದಾಗ ಭೂರಹಿತ ಕಾರ್ಮಿಕರ ಕುಟುಂಬಗಳಲ್ಲಿ ಸಾಕ್ಷರಸ್ಥರ ಪ್ರಮಾಣ ಕಡಿಮೆ ಇದ್ದು, ಇತರ ಮೂರು ವರ್ಗಗಳಲ್ಲಿ ಸಾಕ್ಷರಸ್ಥರ ಪ್ರಮಾಣ ಹೆಚ್ಚಾಗಿದೆ. ೧೦೦ ಫಲಾನುಭವಿಗಳಲ್ಲಿ ಮೂರು ಕುಟುಂಬಗಳು ಗುಡಿಸಲುಗಳಲ್ಲಿ, ೫೪ ಕುಟುಂಬಗಳು ಮಾಳಿಗೆ ಮನೆಯಲ್ಲಿ ೮ ಕುಟುಂಬಗಳು ಹೆಂಚಿನ ಮನೆಯಲ್ಲಿ ೬ ಕುಟುಂಬಗಳು ತಗಡಿನ ಮನೆಯಲ್ಲಿ ೨೫ ಕುಟುಂಬಗಳು ಸರ್ಕಾರ ನಿರ್ಮಿಸಿಕೊಟ್ಟಿರುವ ಜನತಾಮನೆಯಲ್ಲಿ ೪ ಕುಟುಂಬಗಳು ಆರ್‌ಸಿಸಿ ಮನೆಗಳಲ್ಲಿ ವಾಸವಾಗಿದ್ದಾರೆ. ದುಡಿಯುವವರ ಸಂಖ್ಯೆ ವರ್ಗ ಒಂದು ಮತ್ತು ಎರಡರಲ್ಲಿ ಮೂರು ಸದಸ್ಯರು, ವರ್ಗ೩ರಲ್ಲಿ ಎರಡು ಸದಸ್ಯರು, ವರ್ಗ ನಾಲ್ಕರಲ್ಲಿ ೪ ಸದಸ್ಯರಿದ್ದಾರೆ. ಅವರ ಆರ್ಥಿಕ ಮತ್ತು ಸಾಮಾಜಿಕ ಮಟ್ಟವನ್ನು ಅವರ ಮನೆಯನ್ನಾಧರಿಸಿ ಪರಿಗಣಿಸಬಹುದಾಗಿದೆ. ಭೂರಹಿತ ಮತ್ತು ಸಣ್ಣ, ಅತಿಸಣ್ಣ ರೈತರಲ್ಲಿ ಸರ್ಕಾರದಿಂದ ಕೊಡಲ್ಪಟ್ಟ ಜನತಾ, ಇಂದಿರಾ ಅವಾಸ ಮನೆಗಳಲ್ಲಿ ಹೆಚ್ಚಾಗಿ ವಾಸವಾಗಿದ್ದಾರೆ.

### ೧. ಆಸ್ತಿಗಳು

ಗ್ರಾಮೀಣ ನಿವಾಸಿಗಳು ತಮ್ಮದೇ ಆದ ಆಸ್ತಿಯನ್ನು ಹೊಂದಿರುತ್ತಾರೆ. ಮೊದಲನೆಯದಾಗಿ ಕೃಷಿ ಚಟುವಟಿಕೆಗಳಿಗೆ ಬೇಕಾದ ಕೃಷಿ ಉಪಕರಣಗಳು, ದನಕರುಗಳು ಹಾಗೆಯೆ ಮನೆಯಲ್ಲಿ ಬಾಳಿಕೆ ಬರುವ ವಸ್ತುಗಳಾದ ಟಿ.ವಿ, ಸೈಕಲ್, ಕಪಾಟು ಮತ್ತು ಕುರಿ, ಕೋಳಿ, ಆಡು ಇತ್ಯಾದಿಗಳನ್ನು ಹೊಂದಿರುತ್ತಾರೆ.

### ಪಟ್ಟಿ ೨

### ವಿವಿಧ ಕುಟುಂಬಗಳ ಸರಾಸರಿ ಆಸ್ತಿಯ ಮೌಲ್ಯ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೩೫೦೦ | ೨೮೦೦೦ | ೨೪೫೦೦ | ೭೦೦ |
| ೦೨. | ಕರಕುಶಲ ಸಣ್ಣ ಉದ್ದಿಮೆದಾರರು | ೨೫ | ೨೪೦೦ | ೧೯೦೦೦ | ೧೬೬೦೦ | ೬೯೧ |
| ೦೩. | ಚಿಲ್ಲರೆ ವ್ಯಾಪಾರಿಗಳು | ೧೫ | ೩೧೦೦ | ೨೬೦೦೦ | ೨೨೯೦೦ | ೭೩೮ |
| ೦೪. | ಭೂರಹಿತ ಕಾರ್ಮಿಕರು | ೧೫ | ೬೦೦ | ೧೮೦೦೦ | ೧೭೪೦೦ | ೨೯೦೦ |
| | ಸರಾಸರಿ | ೧೦೦ | ೨೪೦೦ | ೨೨೭೫೦ | ೨೦೩೫೦ | ೮೪೭ |

ಮೇಲಿನ ಪಟ್ಟಿಯಲ್ಲಿ ೧೦೦ ಕುಟುಂಬಗಳ ಸರಾಸರಿ ಮೌಲ್ಯದ ಆಸ್ತಿಯನ್ನು ನೋಡಬಹುದಾಗಿದೆ. ನಾಲ್ಕು ವರ್ಗಗಳಲ್ಲಿ ಭೂರಹಿತ ಕಾರ್ಮಿಕರು ಕಡಿಮೆ ಪ್ರಮಾಣ ಆಸ್ತಿಯನ್ನು ಹೊಂದಿದ್ದಾರೆ. ಇನ್ನುಳಿದ ಮೂರು ವರ್ಗಗಳು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದವರಾಗಿದ್ದಾರೆ. ಭೂರಹಿತ ಕಾರ್ಮಿಕರನ್ನು ಹೊರತುಪಡಿಸಿ ಉಳಿದ ವರ್ಗಗಳ ಆಸ್ತಿಗಳು ಗ್ರಾಮೀಣ ಬ್ಯಾಂಕ ಸಾಲದ ಪೂರ್ವದಲ್ಲಿ ಅಧಿಕವಾಗಿದ್ದವು. ಆದರೆ ಗ್ರಾಮೀಣ ಬ್ಯಾಂಕ್ ಸಾಲದ ನಂತರದಲ್ಲಿ ನಾಲ್ಕು ವರ್ಗಗಳ ಆಸ್ತಿಯ ಪ್ರಮಾಣವು ಅಧಿಕವಾಗಿದ್ದವು. ಆದರೆ ಗ್ರಾಮೀಣ ಬ್ಯಾಂಕ್ ಸಾಲದನಂತರದಲ್ಲಿ ನಾಲ್ಕು ವರ್ಗಗಳ ಆಸ್ತಿಯ ಪ್ರಮಾಣವು ಅಧಿಕವಾಗಿದೆ ಎಂಬುದನ್ನು ಪಟ್ಟಿಯಲ್ಲಿ ಗಮನಿಸಬಹುದಾಗಿದೆ. ಸಾಲದ ನಂತರದಲ್ಲಿ ಸಣ್ಣ, ಅತಿಸಣ್ಣ ರೈತರ ಆಸ್ತಿಯು ಪ್ರತಿಶತ ೧೦೦ ಪಟ್ಟು, ಗ್ರಾಹಕರು, ಉದ್ಯಮಿಗಳ ಆಸ್ತಿಯು ಪ್ರತಿಶತ ೬೯೧ರಷ್ಟು, ಗ್ರಾಮೀಣ ವ್ಯಾಪಾರಿಗಳ ಆಸ್ತಿಯು ೭೩೮ರಷ್ಟು ಹಾಗೂ ಭೂರಹಿತ ಕಾರ್ಮಿಕರ ಆಸ್ತಿಯಲ್ಲಿ ೨೯೦೦ಪಟ್ಟು ಅಧಿಕವಾಗಿರುವುದನ್ನು ಕಾಣಬಹುದಾಗಿದೆ. ಸರಾಸರಿ ಆಸ್ತಿಯು ಸಾಲದ ಪೂರ್ವದಲ್ಲಿ ೨೪೦೦ರೂಗಳಾಗಿದ್ದು, ಸಾಲದನಂತರ ೨೨೭೫೦ರೂಗೆ ನಿವ್ವಳ ೨೦,೩೫೦ರೂಗಳಿಗೆ ಹಾಗೂ ಪ್ರತಿಶತ ಹೆಚ್ಚಳ ೮೪೭ರಷ್ಟು ಅಧಿಕವಾಗಿರುವುದನ್ನು ಕಾಣಬಹುದು.

### ೨. ಭೂ ಹಿಡುವಳಿ

ಗ್ರಾಮೀಣ ನಿವಾಸಿಗಳ ಜೀವನಾಧಾರಿತ ವೃತ್ತಿಯೆಂದರೆ ಕೃಷಿ. ಕೃಷಿಯು ಸಂಪೂರ್ಣವಾಗಿ ಮಳೆಯಾಶ್ರಿತವಾಗಿದೆ. ಭೂ ಹಿಡುವಳಿಯನ್ನು ಸಾಮಾನ್ಯವಾಗಿ ಎರಡು ವರ್ಗಗಳಲ್ಲಿ ಕಾಣಬಹುದಾಗಿದೆ. ಸಣ್ಣ, ಅತಿಸಣ್ಣ ರೈತರು, ಗ್ರಾಮೀಣ ವ್ಯಾಪಾರಿಗಳು ಭೂ ಸಾಗುವಳಿಯಲ್ಲಿ ತೊಡಗಿಸಿಕೊಂಡಿದ್ದಾರೆ.

ಗ್ರಾಮೀಣ ಬ್ಯಾಂಕ್‌ನ ಅಸ್ತಿತ್ವದ ಪೂರ್ವದಲ್ಲಿ ಭೂಹಿಡುವಳಿಯು ಸರಾಸರಿಯಾಗಿ ೨.೭೫ ಎಕರೆ ಇದ್ದುದು, ಪಿಜಿಬಿ ಸಾಲದ ನಂತರದಲ್ಲಿ ಸರಾಸರಿ ೩.೭೫ ಎಕರೆ ಪ್ರದೇಶಕ್ಕೆ ವಿಸ್ತರಿಸಿಕೊಂಡಿದ್ದಾರೆ. ದೊಡ್ಡ ರೈತರು ಕೊಳೆವೆಬಾವಿಗಳನ್ನು ಹೊಂದಿದ್ದಾರೆ. ಇಲ್ಲಿನ ಫಲಾನುಭವಿಗಳು ಹೆಚ್ಚಾಗಿ ಖುಷ್ಕಿ ಭೂಮಿಯನ್ನೇ ಹೊಂದಿರುವುದರಿಂದ ಇವರ ಆಸ್ತಿಯ ಪ್ರಮಾಣವು ಪ್ರತಿಶತ ೦.೩೬ ಅಧಿಕವಾಗಿರುವುದನ್ನು ಪಟ್ಟಿ ೩ರ ಮೂಲಕ ಕಾಣಬಹುದು.

**ಪಟ್ಟಿ ೩**

**ಸರಾಸರಿ ಭೂ ಹಿಡುವಳಿ ಗಾತ್ರ**

ಎಕರೆಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೪.೦ | ೫.೦ | ೧.೦ | ೨೫ |
| ೦೨. | ಗ್ರಾಮೀಣ ವ್ಯಾಪಾರಿಗಳು | ೧೫ | ೧.೫ | ೨.೫ | ೧.೦ | ೦.೬೬ |
| | | ೫೫ | ೨.೭೫ | ೩.೭೫ | ೧.೦ | ೦.೩೬ |

**ಕೃಷಿ ಹೂಡುವಳಿ ವೆಚ್ಚ**

ಗ್ರಾಮೀಣ ಜನಪದರ ಜೀವನಾಧಾರ ವೃತ್ತಿಯೆಂದರೆ ಕೃಷಿ. ಇವರ ಹೂಡುವಳಿ ವೆಚ್ಚವು ಭೂಮಿಯನ್ನು ಹದ ಮಾಡುವುದರಿಂದ,ಮಾರುಕಟ್ಟೆಗೆ ಸಾಗಿಸುವವರೆಗೆ ವಿವಿಧ ಹಂತಗಳ ವೆಚ್ಚಗಳನ್ನು ಒಳಗೊಂಡಿದ್ದಾರೆ. ಅವುಗಳನ್ನು ಪ್ರಮುಖವಾಗಿ ಮೂರು ಹಂತಗಳಲ್ಲಿ ನೋಡಬಹುದು.

೧. ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳ ಮೇಲಿನ ವೆಚ್ಚ

೨. ಕೃಷಿ ಕಾರ್ಮಿಕರ ಕೂಲಿ ಮತ್ತು ಜಾನುವಾರುಗಳ ವೆಚ್ಚ

೩. ಬೆಳೆದ ಧಾನ್ಯಗಳನ್ನು ಕೊಯಿಲು, ಸಾಗಾಣಿಕೆ, ಒಕ್ಕಲುತನ ಮಾಡುವುದು ಮತ್ತು ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳು

ಈ ಪ್ರದೇಶದಲ್ಲಿನ ೫೫ ಕೃಷಿ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಕಡಿಮೆ ಪ್ರಮಾಣದಲ್ಲಿ ಪಿಜಿಬಿ ಸಾಲದ ಪೂರ್ವದಲ್ಲಿ ಉಪಯೋಗಿಸುತ್ತಿದ್ದರು. ಆದರೆ ಬ್ಯಾಂಕ್‌ಸಾಲದ ನಂತರದಲ್ಲಿ ಅಧಿಕ ಇಳುವರಿ ಕೊಡುವ ಬೀಜಗಳನ್ನು, ರಸಾಯನಿಕ ಗೊಬ್ಬರಗಳನ್ನು ರೋಗಗಳಿಂದ ಬೆಳೆಯನ್ನು ಕಾಪಾಡಲು ಕ್ರಿಮಿನಾಶಗಳನ್ನು ಬಳಸಲಾರಂಭಿಸಿದರು. ಎರಡನೇ ಹಂತದಲ್ಲಿ ಬೀಜ ಬಿತ್ತಿದ ೨೫ ರಿಂದ ೪೦ ದಿನದ ಬೆಳೆಯಲ್ಲಿನ ಕಳೆಯನ್ನು ನಾಶಪಡಿಸಲು

ಕೃಷಿಕಾರ್ಮಿಕರನ್ನು ದಿನಗೂಲಿಗೆ ನೇಮಿಸಿಕೊಳ್ಳುತ್ತಾರೆ. ಬ್ಯಾಂಕ್ ಸಾಲದ ಪೂರ್ವದಲ್ಲಿ ಕೂಲಿ ಪ್ರಮಾಣ ಕಡಿಮೆ ಇದ್ದು, ಇತ್ತೀಚಿನ ದಿನಗಳಲ್ಲಿ ಕೂಲಿಯ ಪ್ರಮಾಣವು ದಿನಕ್ಕೆ ೬೦ ರಿಂದ ೮೦ ರೂಪಾಯಿಗಳವರೆಗೆ ಅಧಿಕವಾಗಿದೆ.

೫೫ ಕುಟುಂಬಗಳಲ್ಲಿ ೩೫ ಕುಟುಂಬಗಳು ಸ್ವಂತ ಎತ್ತುಗಳನ್ನು ಹೊಂದಿರುತ್ತಾರೆ. ಇನ್ನುಳಿದ ೨೦ ಕುಟುಂಬಗಳು ಬಾಡಿಗೆ ಎತ್ತುಗಳ ಮೂಲಕ ಇಲ್ಲವೆ ಟ್ರಾಕ್ಟರ್ ಸಹಾಯದಿಂದ ಭೂಮಿಯನ್ನು ಹದಗೊಳಿಸಿಕೊಳ್ಳುತ್ತಾರೆ. ೩೫ ಕುಟುಂಬಗಳು ತಮ್ಮ ಸ್ವಂತ ಎತ್ತುಗಳ ಮತ್ತು ಜಾನುವಾರುಗಳ ನಿರ್ವಹಣೆಗೆ ವೆಚ್ಚಮಾಡಿಕೊಳ್ಳಬೇಕಾಗುತ್ತದೆ. ೨೦ ಕುಟುಂಬಗಳು ಬಾಡಿಗೆ ಎತ್ತುಗಳ ಹಣವನ್ನು ಬಾಡಿಗೆದಾರರಿಗೆ ನೀಡಬೇಕಾಗುತ್ತದೆ. ಹೀಗೆ ಸ್ವಂತ ಎತ್ತುಗಳನ್ನು ಹೊಂದಿದವರು ಅವುಗಳ ನಿರ್ವಹಣಾ ವೆಚ್ಚವನ್ನು ಭರಿಸಬೇಕಾಗುತ್ತದೆ. ಹಾಗೆಯೇ ಬಾಡಿಗೆಯ ಎತ್ತುಗಳು, ಟ್ರಾಕ್ಟರ್ ಮೂಲಕ ಅನಿವಾರ್ಯವಾಗುತ್ತದೆ. ಇತ್ತೀಚಿಗೆ ಟ್ರಾಕ್ಟರ್ ಮತ್ತು ಬಾಡಿಗೆ ಬೇಸಾಯದ ವೆಚ್ಚ ಅಧಿಕವಾಗಿರುವುದನ್ನು ಕಾಣಬಹುದು. ಪ್ರತಿ ಎಕರೆಗೆ ೧೨೦೦ರೂಗಳಿಂದ ೧೫೦೦ರೂಗಳವರೆಗೆ ಉಳುಮೆ ವೆಚ್ಚ ಬರುತ್ತದೆ ಎಂದಿದ್ದಾರೆ.

ಕೃಷಿಕರು ಬೀಜ ಬಿತ್ತನೆ ಮಾಡಿದ ನಂತರ, ಹದವರಿತು ಮಳೆಯಾದರೆ ೯೦ ರಿಂದ ೧೨೦ ದಿನಗಳೊಳಗಾಗಿ ಬೆಳೆಯು ಕೊಯ್ಯುವ ಹಂತಕ್ಕೆ ಬರುತ್ತದೆ. ಬೆಳೆಯನ್ನು ಕೊಯ್ಯುವ, ಸಾಗಿಸುವ, ಧಾನ್ಯಗಳನ್ನು ಒಕ್ಕುವುದು, ತೂರುವುದು ಅದನ್ನು ಮಾರುಕಟ್ಟೆಗೆ ಸಾಗಿಸುವ, ಇನ್ನಿತರೆ ವೆಚ್ಚಗಳಿಗೆ ಒಳಗಾಗಬೇಕಾಗುತ್ತದೆ. ೩ ಹಂತದ ವೆಚ್ಚವು ಅವರು ಹೊಂದಿರುವ ಭೂಮಿಯ ಗಾತ್ರಕ್ಕನುಗುಣವಾಗಿರುತ್ತದೆ. ಕೃಷಿ ಚಟುವಟಿಕೆಗಳಲ್ಲಿ ೪೦ ಕುಟುಂಬಗಳು ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡರೆ ೧೫ ಕುಟುಂಬಗಳು ತಮ್ಮ ವ್ಯಾಪಾರದ ಜೊತೆಗೆ ಕೃಷಿಯಲ್ಲಿ ಭಾಗಶಹವಾಗಿ ತೊಡಗಿಸಿಕೊಂಡಿದ್ದಾರೆ.

೫೫ ಕುಟುಂಬಗಳು ಮೂರುಹಂತದ ಸರಾಸರಿ ವೆಚ್ಚಗಳನ್ನೊಳಗೊಂಡಿದ್ದರೆ, ಪಿಜಿಬಿ ಸಾಲದ ಪೂರ್ವದಲ್ಲಿ ಸರಾಸರಿ ೩೭೦೦ ರೂಪಾಯಿಗಳ ವೆಚ್ಚವನ್ನು ಒಳಗೊಂಡಿರುತ್ತಾರೆ. ಆದರೆ ಬ್ಯಾಂಕು ಸಾಲದ ನಂತರ ಇವರ ಸರಾಸರಿ ವೆಚ್ಚವು ೧೫೬೦೦ರೂಪಾಯಿಗಳಷ್ಟು ಅಧಿಕವಾಗಿದೆ. ನಿವ್ವಳ ವೆಚ್ಚದ ಹೆಚ್ಚಳವು ೧೧೯೦೦ರೂಪಾಯಿಗಳಷ್ಟಾಗಿದ್ದು ಅದು ಪ್ರತಿಶತ ೩೨೧ರಷ್ಟು ಅಧಿಕವಾಗಿರುವುದನ್ನು ಪಟ್ಟಿ ೪ರಲ್ಲಿ ಕಾಣಬಹುದಾಗಿದೆ. ಖಾನಹೊಸಹಳ್ಳಿ ಪಿಜಿಬಿ ಶಾಖೆಯ ವ್ಯಾಪ್ತಿಯಲ್ಲಿನ ಫಲಾನುಭವಿಗಳನ್ನು ಭೇಟಿಮಾಡಿದಾಗ ಅವರೆಲ್ಲರೂ ಬೆಳೆಸಾಲವನ್ನು ಕಿಸಾನ್‌ಕ್ರೆಡಿಟ್ ಕಾರ್ಡುಗಳ ಮೂಲಕ ಪಡೆದಿದ್ದಾರೆ. ಇವರಿಗೆ ಬ್ಯಾಂಕ್ ಕನಿಷ್ಠ ೧೦,೦೦೦ ರೂಪಾಯಿಗಳಿಂದ ೪೦,೦೦೦ಗರಿಷ್ಠ ಸಾಲವನ್ನು ಬೆಳೆಸಾಲವಾಗಿ ನೀಡಿದ್ದಾರೆ. ಬೆಳೆ ಸಾಲವು ವಿವಿಧ ಬೆಳೆಗಳಿಗೆ ವಿವಿಧ ರೀತಿಯಲ್ಲಿರುತ್ತದೆ ಎಂದು ಬ್ಯಾಂಕು ಅಧಿಕಾರಿಗಳು ತಿಳಿಸಿರುತ್ತಾರೆ.

ಪಟ್ಟಿ ೪

ಒಟ್ಟು ಉತ್ಪಾದನಾ ವೆಚ್ಚ

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೪೮೦೦ | ೧೮೦೦೦ | ೧೩.೨೦೦ | ೨೭೫ |
| ೦೨. | ಗ್ರಾಮೀಣ ವ್ಯಾಪಾರಿಗಳು | ೧೫ | ೨೬೦೦ | ೧೩.೨೦೦ | ೧೦೬೦೦ | ೪೦೭ |
| | | ೫೫ | ೩೭೦೦ | ೧೫೬೦೦ | ೧೧.೯೦೦ | ೩೨೧ |

ಈ ಹಿಂದೆ ಬ್ಯಾಂಕುಗಳು ರೈತರ ಬೆಳೆಸಾಲಕ್ಕೂ ಶೇಕಡಾ ೧೧.೫೦ ವಾರ್ಷಿಕವಾಗಿ ಬಡ್ಡಿಯಧರ ವಿಧಿಸುತ್ತಿದ್ದರು. ೫೦,೦೦೦ರೂಗಳಿಗೆ ಮೇಲ್ಪಟ್ಟು ಪ್ರತಿಶತ ೧೩ ಬಡ್ಡಿಯನ್ನು ವಿಧಿಸುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಬ್ಯಾಂಕ ಬಡ್ಡಿಯ ಧರಗಳ ಪ್ರಮಾಣ ಬೆಳೆಸಾಲಕ್ಕೆ ಪ್ರತಿಶತ ೬ ರಿಂದ ೭ರಷ್ಟು ಮಾತ್ರ ಇದೆ. ಹಾಗಾಗಿ ಬ್ಯಾಂಕನಿಂದ ಸಾಲ ಪಡೆಯುವವರ ಸಂಖ್ಯೆ ಅಧಿಕವಾಗಿದೆ. ಇದಲ್ಲದೆ ಬೀಜ, ಗೊಬ್ಬರ, ಕೂಲಿ, ಸಾಗಾಟ ವೆಚ್ಚವು ಇನ್ನಿತರ ವೆಚ್ಚದ ಹೆಚ್ಚಳದಿಂದಾಗಿ ಜನಪದರ ವೆಚ್ಚವು ಅಧಿಕವಾಗಿದೆ ಎನ್ನಬಹುದು.

## ೪. ಉತ್ಪಾದನೆ

ಮುಂಗಾರು ಮತ್ತು ಹಿಂಗಾರು ಬೆಳೆಗಳ ಉತ್ಪಾದನೆಯು ವರ್ಷದ ಸಮಗ್ರ ಉತ್ಪಾದನೆಯಾಗಿರುತ್ತದೆ. (ಬ್ಯಾಂಕಸಾಲದ ಪೂರ್ವ ಮತ್ತು ನಂತರ) ಈ ಕುಟುಂಬಗಳು ತಮ್ಮ ಜೀವನ ನಿರ್ವಹಣೆಗೆ ಬೇಕಾದ ಆಹಾರ ಪದಾರ್ಥಗಳನ್ನು ಮತ್ತು ವರಮಾನಕ್ಕೋಸ್ಕರ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ಆಹಾರ ಪದಾರ್ಥಗಳ ಉತ್ಪನ್ನದಲ್ಲಿ ತಮಗೆ ಬೇಕಾದಷ್ಟು ಆಹಾರ ಧಾನ್ಯಗಳನ್ನು ಶೇಖರಿಸಿಕೊಂಡು, ಅಧಿಕವಾಗಿದ್ದನ್ನು ಮಾರಾಟ ಮಾಡುತ್ತಾರೆ.

ಕೃಷಿಕರು ಬ್ಯಾಂಕು ಅಸ್ತಿತ್ವದ ಪೂರ್ವದ ಹೆಚ್ಚಾಗಿ ಸಾಲವನ್ನು ಮದ್ಯವರ್ತಿಗಳಿಂದ, ಸಾಹುಕಾರರಿಂದ, ಸಹಕಾರ ಸಂಘಗಳಿಂದ ಜಮೀನ್ದಾರರಿಂದ ಪಡೆಯುತ್ತಿದ್ದರು. ಆ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹಣಕಾಸಿನ ವಹಿವಾಟನ್ನು ನಡೆಸುವವರು ಅವರೇ ಆಗಿದ್ದರು. ಇತ್ತೀಚಿನ ದಿನಗಳಲ್ಲೂ ಕೂಡ ಇವರ ವಹಿವಾಟಿನ ಪ್ರಮಾಣ ಕಡಿಮೆಯಾಗಿದೆ. ಕೃಷಿಕರು ಈ ಮೊದಲು ಸಂಪ್ರದಾಯ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅವರು ತಾವು ಉತ್ಪಾದನೆ ಮಾಡಿದ ಬೀಜಗಳನ್ನೇ ತೆಗೆದಿಟ್ಟು ಪುನಃ ಭೂಮಿಯಲ್ಲಿ ಬಿತ್ತಲು ಉಪಯೋಗಿಸುತ್ತಿದ್ದರು. ರಾಷ್ಟ್ರದಲ್ಲಿ ಹಸಿರು ಕ್ರಾಂತಿಯಾದ ನಂತರ ಅಧಿಕ ಇಳುವರಿ ಕೊಡುವ

ಬೀಜಗಳನ್ನು, ರಾಸಾಯನಿಕ ಗೊಬ್ಬರಗಳನ್ನು, ಕ್ರಿಮಿನಾಶಕಗಳ ಉಪಯೋಗವನ್ನು ಕಂಡುಕೊಂಡರು. ಈ ಪ್ರದೇಶದಲ್ಲಿ ಬ್ಯಾಂಕು ಅಸ್ತಿತ್ವಕ್ಕೆ ಬಂದ ನಂತರ ಅವರ ಮಾರ್ಗದರ್ಶನದಂತೆ ಆಧುನಿಕ ಬೇಸಾಯ ಪದ್ಧತಿಯನ್ನು ಅನುಸರಿಸಿ, ಉತ್ತಮ ಬೆಳೆಯನ್ನು ಬೆಳೆಯಲು ಯತ್ನಿಸಿದ್ದಾರೆ. ಜೋಳ, ಸೂರ್ಯಕಾಂತಿ, ಸೇಂಗಾ, ನವಣೆ, ಈರುಳ್ಳಿ, ಹತ್ತಿ, ಮೆಕ್ಕೆಜೋಳ ಮುಂತಾದವುಗಳನ್ನು ಮಳೆಯನ್ನವಲಂಬಿಸಿ ಬೆಳೆಯುತ್ತಾರೆ. ಆ ಮೂಲಕ ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲು ಪ್ರಯತ್ನಿಸಿದ್ದಾರೆ.

ಬ್ಯಾಂಕು ಅಸ್ತಿತ್ವಕ್ಕೆ ಬಂದನಂತರ ವರಮಾನ ಮತ್ತು ಉತ್ಪಾದನಾ ವೆಚ್ಚಗಳೆರಡೂ ಅಧಿಕವಾಗಿದೆ. ೪೦ ಕುಟುಂಬಗಳ ವರಮಾನವು ಇನ್ನಿತರ ಕುಟುಂಬಗಳ ವರಮಾನಕ್ಕಿಂತ ಅಧಿಕವಾಗಿದೆ. ಏಕೆಂದರೆ ಸಣ್ಣ/ಅತಿಸಣ್ಣ ರೈತರು ತಮ್ಮನ್ನು ಕೃಷಿಕಾಯಕದಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿಸಿಕೊಂಡಿದ್ದಾರೆ. ಆದರೆ ೧೫ ಗ್ರಾಮೀಣ ವ್ಯಾಪಾರಸ್ಥರಿಗೆ ವ್ಯಾಪಾರವು ಮುಖ್ಯವಾಗಿರುವುದರಿಂದ ಕೃಷಿ ಚಟುವಟಿಕೆಗಳಿಗೆ ಗಮನ ಕಡಿಮೆಯಾಗಿರುವುದರಿಂದ ಉತ್ಪಾದನೆ ಕಡಿಮೆಯಾಗಿದೆ. ಇವರು ಉತ್ಪಾದನೆ ಮಾಡಿದ ಬೆಳೆಗಳನ್ನು ವಿವಿಧ ಮಾರುಕಟ್ಟೆಗಳಲ್ಲಿ ಉತ್ತಮ ಬೆಲೆಗೆ ಮಾರಾಟ ಮಾಡಿರುತ್ತಾರೆ. ಆ ಮೂಲಕ ತಮ್ಮ ವರಮಾನ ಹೆಚ್ಚಿಸಿಕೊಳ್ಳುವಲ್ಲಿ ಸಫಲರಾಗಿದ್ದಾರೆ.

ಪಟ್ಟಿ ೫

ಉತ್ಪಾದನೆ

| ಕ್ರಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | ಪಿಜಿಬಿ ಸಾಲದ ನಂತರ | | ನಿವ್ವಳ ಹೆಚ್ಚಳವು | |
|---|---|---|---|---|---|---|---|---|
| | | | ಪ್ರಮಾಣ ಕ್ವಿ | ಮೌಲ್ಯ ರೂ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂ | ಪ್ರಮಾಣ ಕ್ವಿ | ಮೌಲ್ಯದಲ್ಲಿ ರೂ |
| ೧ | ಸಣ್ಣ/ಅತಿಸಣ್ಣ ರೈತರು | ೪೦ | ೨೮ | ೮೭೦ | ೪೮ | ೩೨೪೦೦ | ೨೦ (೭೧) | ೧೫೫೦೦ (೧೬೬) |
| ೨ | ಗ್ರಾಮೀಣ ವ್ಯಾಪಾರಸ್ಥರು | ೧೫ | ೧೭ | ೪೯೩೦ | ೩೯ | ೨೬೨೫ | ೨೨ (೧೨೯) | ೧೫೮೫೦ (೩೦೧) |
| | ಸರಾಸರಿ | ೫೫ | ೨೨.೫ | ೬೫೨೫ | ೪೩.೫ | ೨೯೩೬೨ | ೨೧ (೯೩) | ೧೪೧೭೫ (೨೧೭) |

ಬ್ರಾಕೆಟಿನಲ್ಲಿರುವುದು ಶೇಕಡಾವಾರನ್ನು ಪ್ರತಿನಿಧಿಸುತ್ತದೆ.

೫೫ ಕುಟುಂಬಗಳ ಉತ್ಪಾದನೆ ಬ್ಯಾಂಕು ಸಾಲದ ಪೂರ್ವದಲ್ಲಿ ಸರಾಸರಿ ೨೨.೫ ಕ್ವಿಂಟಾಲ್‌ನಷ್ಟು ಆದರೆ ಸಾಲದ ನಂತರದಲ್ಲಿ ೪೩.೫ ಕ್ವಿಂಟಾಲ್‌ನಷ್ಟು ಉತ್ಪಾದನೆ ಅಧಿಕವಾಗಿದೆ. ನಿವ್ವಳ ಉತ್ಪಾದನೆ ಸರಾಸರಿ ೨೧ ಕ್ವಿಂಟಾಲ್‌ನಷ್ಟು ಅಧಿಕವಾಗಿದೆ ಹಾಗೆಯೇ ೧೪೧೭೫ರೂಗಳಷ್ಟು ಮೌಲ್ಯ ಪ್ರತಿಶತ ೨೧೭ರಷ್ಟು ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದಾಗಿದೆ. ಸಣ್ಣ, ಅತಿಸಣ್ಣ ರೈತರ ಉತ್ಪಾದನೆಯು ೨೮ ಕ್ವಿಂಟಾಲ್ ನಿಂದ ೪೮ ಕ್ವಿಂಟಾಲ್ ಅಧಿಕವಾಗಿದ್ದು ಅದು ಪ್ರತಿಶತ ೭೧ಪಟ್ಟು

ಅಧಿಕವಾಗಿದೆ. ಗ್ರಾ.ವ್ಯಾ. ೧೭ ಕ್ವಿಂಟಾಲ್‌ನಿಂದ ೩೯ ಕ್ವಿಂಟಾಲ್‌ನಷ್ಟು ಅಧಿಕವಾಗಿದ್ದು ಅದರ ಪ್ರತಿಶತ ಮೌಲ್ಯವು ೩೦೧ರಷ್ಟು ಅಧಿಕವಾಗಿದೆ.

ಕೃಷಿ ವರಮಾನವು ಬ್ಯಾಂಕ ಸಾಲದ ನಂತರ ಅಧಿಕವಾಗಿದೆ. ಸಾಲದ ಪೂರ್ವದಲ್ಲಿ ೬೫೨೫ರೂಗಳಿಂದ ೨೯,೩೬೨ರೂಪಾಯಿಗಳಿಗೆ ಅಧಿಕವಾಗಿದೆ. ಹಾಗೆಯೇ ವೆಚ್ಚವು ಕೂಡ ೩೭೦೦ರೂಗಳಿಂದ ೧೫,೬೦೦ರೂಪಾಯಿಗಳಿಗೆ ಅಧಿಕವಾಗಿದೆ. ವರಮಾನ ಹೆಚ್ಚಾದ ಹಾಗೆಯೇ ವೆಚ್ಚವು ಕೂಡ ಅಧಿಕವಾಗಿದೆ. ವರಮಾನವು ಸರಾಸರಿ ಪ್ರತಿಶತ ೩೫೦ ಪಟ್ಟು ಅಧಿಕವಾದರೆ, ವೆಚ್ಚವು ಸರಾಸರಿ ಪ್ರತಿಶತ ೩೨೧ರಷ್ಟು ಅಧಿಕವಾಗಿದೆ. ೨೯ ರಷ್ಟು ಪ್ರತಿಶತ ಮೌಲ್ಯ ಅಧಿಕವಾಗಿರುವುದನ್ನು ಕಾಣಬಹುದು. ಕಳೆದ ೩೦ ವರ್ಷಗಳ ಅವಧಿಯಲ್ಲಿ ಉತ್ಪಾದನೆ ಅಧಿಕವಾಗಿದ್ದರೂ ನೀರಿಕ್ಷಿಸಿದಷ್ಟು ವರಮಾನ ಸುಧಾರಣೆಯಾಗಿಲ್ಲ. ಈ ಪ್ರದೇಶವು ಸಂಪೂರ್ಣ ಮಳೆಯಾಧಾರಿತವಾಗಿರುವುದರಿಂದ ಕೃಷಿ ವರಮಾನದಲ್ಲಿ ಪ್ರತಿವರ್ಷ ಏರಿಳಿತಗಳನ್ನು ಕಾಣಬಹುದು ಹಲವಾರು ವರ್ಷ ಬರಗಾಲವನ್ನು ಕೂಡ ಎದುರಿಸಿದ್ದಾರೆ. ಆದರೂ ಬ್ಯಾಂಕನಿಂದ ಸಾಲ ಪಡೆದು ವಾಣಿಜ್ಯ ಬೆಳೆಗಳಾದ ಸೂರ್ಯಕಾಂತಿ ಮತ್ತು ಸೆಂಗಾ ಬೆಳೆದು ವರಮಾನ ಸುಧಾರಿಸಿಕೊಳ್ಳಲು ಯತ್ನಿಸಿದ್ದೇವೆ ಎಂದು ಕೃಷಿಕರು ತಿಳಿಸಿದ್ದಾರೆ.

**೫. ವಿವಿಧ ವಲಯಗಳ ವರಮಾನ**

ಪಿಜಿಬಿ ಸಾಲವು ಸಮಾಜದಲ್ಲಿನ ದುರ್ಬಲ ವರ್ಗದವರ, ಪರಿಶಿಷ್ಟ ಜಾತಿ, ಪಂಗಡವರ ಆದ್ಯತಾ ವಲಯದವರ ಮೇಲೆ ಹೇಗೆ ಪ್ರಭಾವ ಬೀರಿದೆ ಹಾಗೂ ವರಮಾನ ಸುಧಾರಣೆ ಹೇಗೆ ಪ್ರಯತ್ನಿಸಿದೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

೧. ಕೃಷಿ: ಬ್ಯಾಂಕ ಸಾಲದ ಪೂರ್ವದಲ್ಲಿ ಕೃಷಿ ಚಟುವಟಿಕೆಗಳಿಂದ ಬಂದ ವರಮಾನವು ೬೫೨೫ ರೂಪಾಯಿಗಳಾಗಿದ್ದು ಸಾಲದ ನಂತರದಲ್ಲಿ ೨೦೦೮ನೇ ಇಸ್ವಿಯಲ್ಲಿ ೨೯,೩೬೨ ರೂಪಾಯಿಗಳಿಗೆ ಅಧಿಕವಾಗಿದೆ ಮತ್ತು ನಿವ್ವಳ ೨೨,೮೩೭ ರೂಗಳಿಗೆ ಹೆಚ್ಚಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದಾಗಿದೆ.

**೨. ಭೂರಹಿತ ಕಾರ್ಮಿಕರು/ಕೃಷಿ ಅವಲಂಬಿತ ಚಟುವಟಿಕೆಗಳು**

ಇವರು ಗ್ರಾಮೀಣ ಪ್ರದೇಶದಲ್ಲಿ ಕೃಷಿಕಾರ್ಮಿಕರಾಗಿ ಹಾಗೂ ತಮ್ಮ ಜೀವನನಿರ್ವಹಣೆಗೆ ಆಡು, ಕುರಿ, ಎಮ್ಮೆ, ಹಸುಗಳನ್ನು ಸಾಕಿ ಅವುಗಳ ಉತ್ಪನ್ನದಿಂದ ಬಂದಂತಹ ವರಮಾನದಲ್ಲಿ ಜೀವನ ನಿರ್ವಹಿಸುತ್ತಿದ್ದರು. ಸರಕಾರದ ಬಡತನ ನಿರ್ಮೂಲನ ಕಾರ್ಯಕ್ರಮಗಳನ್ನು ಗ್ರಾಮೀಣ ಬ್ಯಾಂಕುಗಳ ಮೂಲಕ ಜಾರಿಗೆ ತಂದಿದ್ದರಿಂದ ಬ್ಯಾಂಕುಗಳು ಭೂ ರಹಿತ ಕಾರ್ಮಿಕರಿಗೆ ಆ ಸೌಲಭ್ಯವನ್ನು ಒದಗಿಸುವುದರ ಮೂಲಕ ಅವರ ವರಮಾನವನ್ನು ಸುಧಾರಿಸಲು ಪ್ರಯತ್ನಿಸಿದವು ಎನ್ನಬಹುದು. ಶಾಖೆಯು ಹೊಸಹಳ್ಳಿ ಮತ್ತು ಆಲೂರು ಗ್ರಾಮಗಳಲ್ಲಿರುವ ಭೂರಹಿತ ಕಾರ್ಮಿಕರನ್ನು ಗುರುತಿಸಿ ಪ್ರತಿ ಫಲಾನುಭವಿಗಳಿಗೆ ೧೫ಸಾವಿರ ರೂಪಾಯಿವರೆಗಿನ ಸಾಲವನ್ನು ವಿತರಿಸಲಾಗಿದೆ. ಅಲ್ಲದೆ ಕರ್ನಾಟಕ ಹಾಲು ಒಕ್ಕೂಟದಿಂದ ಪ್ರತಿ ಹಸು, ಎಮ್ಮೆಗಳಿಗೆ ೩೦೦೦ರೂಪಾಯಿಗಳ ಸಹಾಯಧನ ನೆರವನ್ನು

ಫಲಾನುಭವಿಗಳು ಪಡೆದಿದ್ದಾರೆ. ನಾಟಿ ಹಸು ಮತ್ತು ಎಮ್ಮೆಗಳಿಗೆ ಬದಲಾಗಿ ವಿದೇಶಿ ತಳಿಗಳ ಹಸುಗಳು ಮತ್ತು ಎಮ್ಮೆಗಳನ್ನು ಬ್ಯಾಂಕ ಸಾಲದ ಮೂಲಕ ಪಡೆದಿದ್ದಾರೆ. ಹೊಸತಳಿಯ ಜಾನುವಾರುಗಳಿಗೆ ಅಧಿಕ ಪ್ರಮಾಣದಲ್ಲಿ ಹಾಲು ಕರೆಯುತ್ತವೆ. ಹೆಚ್ಚುವರಿಯಾದ ಹಾಲನ್ನು ಆಲೂರು ಮತ್ತು ಹೊಸಹಳ್ಳಿಯಲ್ಲಿರುವ ಡೈರಿಗೆ ಹಾಕುತ್ತಾರೆ. ಇವರು ಅಂತಹ ಹಸು, ಎಮ್ಮೆಗಳಿಗೆ ಬೇಕಾದ ಪಶು ಆಹಾರ ಮತ್ತು ಮೇವು ಮುಂತಾದ ಸೌಲಭ್ಯಗಳನ್ನು ಒದಗಿಸಿದ್ದಾರೆ. ಕೆಲವು ಫಲಾನುಭವಿಗಳು ಪ್ರತಿತಿಂಗಳು ಹಸು, ಎಮ್ಮೆಗಳನ್ನು ಸಾಕಲು, ಪಶು ವೈದ್ಯರ ಭೇಟಿ, ಮೇವು ಪಶು ಆಹಾರಕ್ಕೋಸ್ಕರವಾಗಿ ೧೦೦೦ ಹಣವನ್ನು ಖರ್ಚುಮಾಡುತ್ತೇವೆ ಎಂದಿದ್ದಾರೆ. ಇವರ ವರಮಾನವು ೯೦೦ರೂಪಾಯಿಗಳಿಂದ ೨೦,೦೦೦ಗಳಿಗೂ ಮೇಲ್ಪಟ್ಟ ವಾರ್ಷಿಕವಾಗಿ ಗಳಿಸುತ್ತಾರೆ. ಪ್ರತಿನಿತ್ಯ ೬೦ ರಿಂದ ೭೦ರೂಗಳವರೆಗೆ ಹಾಲನ್ನು ಮಾರಾಟ ಮಾಡುತ್ತಾರೆ. ಇದರಿಂದ ಬಂದಂತಹ ಹಣದಿಂದ ತಮ್ಮ ಜೀವನನಿರ್ವಹಣೆಗೆ ಸರಿಯಾಗಿ ನಡೆಯುತ್ತದೆ, ಮತ್ತು ಬಡತನ ರೇಖೆಯನ್ನು ದಾಟಲು ಮತ್ತು ನಿರುದ್ಯೋಗ ಕಡಿಮೆ ಮಾಡಲು ಅನುಕೂಲಕರವಾಗಿದೆ. ಬ್ಯಾಂಕು ನೀಡಿದ ಸಾಲವನ್ನು ಪ್ರತಿತಿಂಗಳು ಬಂದಂತಹ ವರಮಾನದಲ್ಲಿ ಸಾಲತೀರಿಸುತ್ತೇವೆ. ಇದರಿಂದಾಗಿ ಬ್ಯಾಂಕುಗಳು ನಮಗೆ ಉತ್ತೇಜನಕಾರಿಯಾಗಿವೆ ಎಂದಿದ್ದಾರೆ.

**ಪಟ್ಟಿ ೬**

**ಭೂರಹಿತ ಕಾರ್ಮಿಕರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಭೂರಹಿತ ಕಾರ್ಮಿಕರು | ೨೦ | ೯೦೦ | ೨೦೦೦೦ | ೧೯೧೦೦ | ೨೧೨೨ |

ಪಿಜಿಬಿ ಸಾಲದ ಪೂರ್ವದಲ್ಲಿ ಇವರ ವರಮಾನ ಕಡಿಮೆ ಇತ್ತು. ಆದರೆ ಸಾಲದ ನಂತರದಲ್ಲಿ ೨೦೦೬ರ ಹೊತ್ತಿಗೆ ಇವರ ವರಮಾನವು ೨೦,೦೦೦ರೂಪಾಯಿಗಳಿಗೆ ಅಧಿಕವಾಗಿದೆ. ನಿವ್ವಳ ಹೆಚ್ಚುವರಿ ವರಮಾನ ೧೯,೧೦೦ರೂಪಾಯಿಗಳಾಗಿದ್ದು ಅದರ ಪ್ರತಿಶತ ಪ್ರಮಾಣವು ೨೧೨೨ರಷ್ಟಾಗಿದೆ. ಪ್ರತಿತಿಂಗಳು ವಿದೇಶಿ ಹಸು, ಎಮ್ಮೆಗಳ ನಿರ್ವಹಣೆಗೆ ಹಣವನ್ನು ವೆಚ್ಚಮಾಡಬೇಕಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಗೋಮಾಳಗಳಲ್ಲಿಲ್ಲದ ಕಾರಣ ಅವುಗಳಿಗೆ ಬೇಕಾದ ಮೇವು, ನೀರು ನೆರಳುಗಳನ್ನು ಕಲ್ಪಿಸಿಕೊಂಡು ಜೀವನಿರ್ವಹಣೆಯ ಜೊತೆಗೆ ಬ್ಯಾಂಕು ಸಾಲವನ್ನು ತೀರಿಸಲು ಪ್ರಯತ್ನಿಸುತ್ತೇವೆ ಹಾಗೂ ಜೀವನಕ್ಕೆ ಯಾವುದೇ ತೊಂದರೆಗಳಿಲ್ಲ ಎಂದಿದ್ದಾರೆ.

**೩. ಉದ್ದಿಮೆದಾರರು/ಕರಕುಶಲಕರ್ಮಿಗಳು**

ಗ್ರಾಮೀಣ ಪ್ರದೇಶದಲ್ಲಿ ನೂಲುವುದು, ನೇಯುವುದು, ಬುಟ್ಟಿ ಎಣೆಯುವುದು, ಎಣ್ಣೆಗಾಣಗಳು, ಪುರಾತನ ಕಾಲದ ಕಸುಬುಗಳು ಇವುಗಳಲ್ಲಿ ಕೆಲವೊಂದು ಕಸುಬುಗಳು ಇಂದಿಗೂ ಉಳಿದಿವೆ. ಇವುಗಳಲ್ಲಿ

ಟೈಲರ್ಸ್, ಹೊಟೆಲ್ ಉದ್ಯಮದಾರರು, ಕಮ್ಮಾರರು, ಕುಂಬಾರರು, ಅಕ್ಕಸಾಲಿಗರು, ಹಿಟ್ಟಿನ ಗಿರಣಿ, ಸೈಕಲ್ ಷಾಪ್ ಇನ್ನು ಮುಂತಾದ ಕಸಬುಗಳಿಂದ ವರಮಾನ ಪಡೆಯುತ್ತಾ ಬಂದಿದ್ದಾರೆ. ಇವರ ವರಮಾನವು ಪ್ರಾ.ಗ್ರಾ.ಬ್ಯಾಂಕು ಸಾಲದ ಪೂರ್ವದಲ್ಲಿ ೧೦೦೦ರೂ ವರಮಾನ ಪಡೆಯುತ್ತಿದ್ದರು. ಆದರೆ ಬ್ಯಾಂಕು ಅಸ್ತಿತ್ವಕ್ಕೆ ಬಂದಂನಂತರದಲ್ಲಿ ಇವರ ಉತ್ಪನ್ನದ ಪ್ರಮಾಣವು ಅಧಿಕವಾಗಿ ವರಮಾನವು ಅಧಿಕವಾಗಿರುವುದನ್ನು ಕಾಣಬಹುದು. ಇವರ ಪಿಜಿಬಿ ಸಾಲದ ಪೂರ್ವದಲ್ಲಿ ವರಮಾನವು ಬಹಳಷ್ಟು ಕಡಿಮೆಯಿದ್ದು ಸಾಲದ ನಂತರದಲ್ಲಿ ಇವರ ವರಮಾನ ಅಧಿಕವಾಗಿದೆ. ಇವರುಗಳು ಬ್ಯಾಂಕನಿಂದ ೨೦,೦೦೦ರೂಗಳಿಂದ ೫೦,೦೦೦ರೂಪಾಯಿಗಳವರೆಗೆ ಸಾಲವನ್ನು ಪಡೆದಿದ್ದಾರೆ. ಅದರ ಉಪಯೋಗವನ್ನು ಟೈಲರಿಂಗ್, ಹೊಟೆಲ್, ವೆಲ್ಡಿಂಗ್ ಷಾಪ್, ಅಡಿಕೆತಟ್ಟೆ, ನರ್ಸರಿ ಪ್ಲಾಂಟ್, ಸೈಕಲ್‌ಷಾಪ್, ನೇವಾರಿಕೆ (ಹೊಸಹಳ್ಳಿಯಲ್ಲಿ ವಿಶೇಷವಾಗಿ ಕಂಬಳಿ ನೇಯುತ್ತಾರೆ) ಹಾರ್ವೆಸ್ಟರ್ ಇನ್ನು ಮಂತಾದ ಉದ್ಯಮಗಳನ್ನು ಹಾಕಿಕೊಂಡು ತಮ್ಮ ವರಮಾನ ಸುಧಾರಿಸಿಕೊಳ್ಳಲು ಯತ್ನಿಸಿದ್ದಾರೆ. ೨೫ ಫಲಾನುಭವಿಗಳನ್ನು ಭೇಟಿ ಮಾಡಿದಾಗ ತಮ್ಮ ಕಷ್ಟಗಳು ನಿವಾರಣೆಯಾಗಿವೆ. ಸಾಲ ಪಡೆಯಲು ಬಹಳಷ್ಟು ಕಷ್ಟಪಡಬೇಕಾಗಿಲ್ಲ. ಪಡೆದ ಸಾಲವನ್ನು ನಿರಂತರವಾಗಿ ಮರುಪಾವತಿಮಾಡಿ ಹೊಸಸಾಲ ಪಡೆಯಲು ಯತ್ನಿಸುತ್ತೇವೆ ಎಂದಿದ್ದಾರೆ.

ವಿವಿಧ ಉದ್ಯಮದವರು ವಿವಿಧ ವಸ್ತುಗಳನ್ನು ಉತ್ಪಾದಿಸುತ್ತಾರೆ ಮತ್ತು ಗ್ರಾಮೀಣ ಪ್ರದೇಶದಲ್ಲಿನ ನಿರುದ್ಯೋಗವನ್ನು ಕಡಿಮೆ ಮಾಡಲು ಪ್ರಯತ್ನಿಸಿದ್ದಾರೆ. ಆದರೆ ಇವರೆಲ್ಲರ ಸರಾಸರಿ ವರಮಾನವು ವಾರ್ಷಿಕ ೨೫,೦೦೦ರೂಪಾಯಿಗಳಿಗಿಂತಲೂ ಅಧಿಕವಾಗಿದೆ ಎಂಬುದನ್ನು ಸಮೀಕ್ಷೆಯಿಂದ ಕಂಡುಕೊಳ್ಳಲಾಯಿತು. ಇದನ್ನು ಪಟ್ಟಿ ೭ರಲ್ಲಿ ಕಾಣಬಹುದು.

### ಪಟ್ಟಿ ೭

### ಸಣ್ಣ ಉದ್ದಿಮೆದಾರರು

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೧. | ಸಣ್ಣಉದ್ದಿಮೆದಾರು /ಕರಕುಶಲ ಕರ್ಮಿಗಳು | ೨೫ | ೧೪೦೦ | ೨೫೦೦೦ | ೨೩.೬೦೦ | ೧೬೮೫ |

ಕರಕುಶಲ ಕರ್ಮಿಗಳು ಕಾಲಕ್ಕೆ ತಕ್ಕಂತೆ ಉದ್ಯಮಗಳನ್ನು ರೂಢಿಸಿಕೊಂಡು ತಮ್ಮ ವರಮಾನವನ್ನು ಬ್ಯಾಂಕ ಸಹಕಾರದೊಂದಿಗೆ ೨೫,೦೦ರೂಗಳಿಗೆ ಹೆಚ್ಚಿಸಿಕೊಂಡಿದ್ದಾರೆ. ನಿವ್ವಳ ಹೆಚ್ಚಳ ೨೩,೬೦೦ರೂಗಳಾದರೆ, ಅದರ ಪ್ರತಿಶತ ೧೬೮೫ರಷ್ಟು ಅಧಿಕವಾಗಿದೆ ಅದು ವಾರ್ಷಿಕವಾಗಿ ೬೪.೮ರಷ್ಟು ಬೆಳವಣಿಗೆಯನ್ನು (೧೯೮೦-೨೦೦೬)ರ ಕಾಲಾವಧಿಯಲ್ಲಿ ಕಾಣಬಹುದಾಗಿದೆ. ಈ ಊರು ಕಂಬಳಿ ಉತ್ಪಾದನೆಗೆ ಪ್ರಸಿದ್ಧಿಯಾಗಿದೆ. ನೇವಾರರಿಗೆ ಬ್ಯಾಂಕು ನೆರವನ್ನು ನೀಡಿ, ಆ ನೇಕಾರರ ಬೆಳವಣಿಗೆಗೆ ಪೂರಕವಾಗಿದೆ. ಹಾಗೆಯೇ ಅಡಿಕೆ ತಟ್ಟೆ ಉತ್ಪಾದನೆ ಪ್ರೋತ್ಸಾಹ ದೊರೆತು ಬರದ ನಾಡಿನಲ್ಲಿ

ಉದ್ಯೋಗವಕಾಶಗಳನ್ನು ಕಲ್ಪಿಸಿಕೊಡಲು ಸಹಾಯಕಾರಿಯಾಗಿದೆ. ಅಂದರೆ ವ್ಯರ್ಥವಾಗಿ ಬಿಸಾಕುವ ವಸ್ತುವನ್ನು ಬಳಸಿ ವರಮಾನ ಕಂಡುಕೊಂಡಿದ್ದಾರೆ.

### ೪. ಗ್ರಾಮೀಣ ವ್ಯಾಪಾರಿಗಳು

ಗ್ರಾಮೀಣ ಪ್ರದೇಶಗಳಲ್ಲಿನ ವ್ಯವಹಾರಗಳೆಂದರೆ ಕಿರಾಣಿ, ಅಂಗಡಿ, ಬಟ್ಟೆವ್ಯಾಪಾರ, ಹಾಲಿನ ವ್ಯಾಪಾರ, ತರಕಾರಿ ಮತ್ತು ಹೂವಿನ ವ್ಯಾಪಾರ ಚಪ್ಪಲಿ ಅಂಗಡಿ, ಬಟ್ಟೆ ವ್ಯಾಪಾರ, ಸ್ವೀಟ್‌ಸ್ಟಾಲ್, ಇಟ್ಟಿಗೆ ವ್ಯಾಪಾರ ಇನ್ನು ಮುಂತಾದವುಗಳಾಗಿರುತ್ತವೆ. ಇವರೆಲ್ಲರೂ ನಡೆಸುವ ವ್ಯವಹಾರವು ಸಂಪೂರ್ಣವಾಗಿ ಜನಪದರ ಜೀವನಾವಶ್ಯಕ ವಸ್ತುಗಳಿಗೆ ಸಂಬಂಧಿಸಿದೆ. ಇವರು ಬ್ಯಾಂಕ ಸಾಲದ ಪೂರ್ವದಲ್ಲಿ ಇತರೆಡೆಗಳಿಂದ ಸಾಲ ತಂದು ತಮ್ಮ ವ್ಯಾಪಾರವನ್ನು ನಡೆಸುತ್ತಿದ್ದರು. ಆದರೆ ಬ್ಯಾಂಕ ಸಾಲದ ನಂತರದಲ್ಲಿ ಇವರ ವ್ಯವಹಾರವು ಉತ್ತಮವಾಗಿದೆ. ಇವರು ತಮ್ಮ ವ್ಯವಹಾರಕ್ಕೆ ಬೇಕಾದ ಸರಕುಗಳನ್ನು ಹತ್ತಿರದ ಪಟ್ಟಣದಿಂದ ತಂದು ಮಾರಾಟಮಾಡುತ್ತಾರೆ. ತಾವು ಕೊಂಡ ವಸ್ತುಗಳ ಮೇಲೆ ಪ್ರತಿಶತ ೨೦ ರಿಂದ ೨೫ರಷ್ಟು ಬೆಲೆಯನ್ನು ಅಧಿಕಗೊಳಿಸಿಕೊಂಡು ಮಾರಾಟ ಮಾಡುತ್ತಾರೆ. ಬ್ಯಾಂಕನಲ್ಲಿ ಸಾಲ ಪಡೆದು ನಿರಂತರವಾಗಿ ಅದರ ಸಂಪರ್ಕದಲ್ಲಿರುವುದರಿಂದ ತಮ್ಮ ವರಮಾನ ಸುಧಾರಿಸಿದೆ ಎನ್ನುತ್ತಾರೆ. ವಿವಿಧ ವ್ಯಾಪಾರಿಗಳು ಬ್ಯಾಂಕನಲ್ಲಿ ೧೨,೦೦೦ರೂಗಳಿಂದ ೮೦,೦೦೦ರೂಗಳ ವರೆಗೆ ಸಾಲವನ್ನು ಪಡೆದಿದ್ದಾರೆಂದು ಬ್ಯಾಂಕಿನ ಲೆಕ್ಕಪತ್ರಗಳು ತಿಳಿಸುತ್ತವೆ. ಬ್ಯಾಂಕನ ಸಾಲದ ಪೂರ್ವದಲ್ಲಿ ಇವರ ವರಮಾನ ೩,೩೦೦ರಷ್ಟು ಇದ್ದುದು ಸಾಲದ ನಂತರ ವಾರ್ಷಿಕವಾಗಿ ೨೪,೦೦೦ರೂಗಳಿಗಿಂತಲೂ ಅಧಿಕವಾಗಿ ತಮ್ಮ ವರಮಾನವನ್ನು ವೃದ್ಧಿಸಿಕೊಂಡಿದ್ದಾರೆ ಎಂಬ ಅಂಶವನ್ನು ಸಮೀಕ್ಷೆಯ ಮೂಲಕ ಕಂಡುಕೊಳ್ಳಲಾಗಿದೆ.

ಪಟ್ಟಿ ೮

ಗ್ರಾಮೀಣ ವ್ಯಾಪಾರಿಗಳು

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ವ್ಯಾಪಾರಿಗಳು | ೧೫ | ೩೩೦೦ | ೨೪೦೦೦ | ೨೦೭೦೦ | ೬೨೭ |

ಪಟ್ಟಿ ೮ನ್ನು ಗಮನಿಸಿದಾಗ ಪಿಜಿಬಿ ಸಾಲದ ಪೂರ್ವದಲ್ಲಿ ವರಮಾನ ೩,೩೦೦ರೂಗಳಿದ್ದು ಸಾಲದ ನಂತರದಲ್ಲಿ ೨೪,೦೦೦ರೂಗಳಿಗೆ ಅಧಿಕವಾಗಿದೆ. ನಿವ್ವಳ ೨೦,೭೦೦ರೂಗಳಾಗಿದ್ದು, ಅದನ್ನು ಶೇಕಡಾವಾರಿಗೆ ಪರಿವರ್ತಿಸಿದಾಗ ೬೨೭ಪಟ್ಟು ಹೆಚ್ಚಳವಾಗಿರುವುದು ಕಂಡುಬರುತ್ತದೆ. ಒಟ್ಟು ೪ ವರ್ಗಗಳಲ್ಲಿ ಗ್ರಾಮೀಣ ಬ್ಯಾಂಕ ಸಾಲದ ನಂತರದಲ್ಲಿ ತಮ್ಮ ವರಮಾನವನ್ನು ಅಧಿಕಗೊಳಿಸುವಲ್ಲಿ ಯಶಸ್ವಿಯಾಗಿದೆ ಎನ್ನಬಹುದು.

### ೬. ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲ

ಈ ಸಂಸ್ಥೆಗಳು ಗ್ರಾಮೀಣ ಪ್ರದೇಶದಲ್ಲಿ ದೀರ್ಘಾಕಾಲಾವಧಿಯಿಂದ ತಮ್ಮ ಕಾರ್ಯವನ್ನು ನಿರ್ವಹಿಸುತ್ತಾ ಬಂದಿವೆ. ಸಾಹುಕಾರರು, ಸ್ನೇಹಿತರು, ಜಮೀನ್ದಾರರು, ಮಧ್ಯವರ್ತಿಗಳು, ದಲ್ಲಾಳಿಗಳು, ಬಂಧುಗಳು ಇನ್ನು ಮುಂತಾದವರಿಂದ ಜನಪದರು ತಮಗೆ ಬೇಕಾದ ಹಣಕಾಸಿನ ನೆರವನ್ನು ಪಡೆದಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ೧೯೭೬ರಲ್ಲಿ ಗ್ರಾಮೀಣ ಬ್ಯಾಂಕ ಸ್ಥಾಪನೆಯಾದ ನಂತರ ಇವರ ಪ್ರಭಾವವು ಕಡಿಮೆಯಾಗಿದೆ. ಇಂದಿಗೂ ಕೂಡ ಕೆಲವು ಕುಟುಂಬಗಳು ತಮಗೆ ಅನಿವಾರ್ಯವಾದ ಸಂದರ್ಭಗಳಲ್ಲಿ ಇವರಿಂದ ಸಾಲ ಪಡೆಯುವುದುಂಟು. ಇನ್ನು ಕೆಲವು ರೈತ ಕುಟುಂಬಗಳು ತಮ್ಮ ಕೃಷಿ ಚಟುವಟಿಕೆಗಳಿಗೆ ಬೇಕಾದ ಹಣಕಾಸಿನ ನೆರವನ್ನು ದಲ್ಲಾಳರಿಂದ ಪಡೆಯುತ್ತಿರುವುದನ್ನು ಇಂದಿಗೂ ಕಾಣಬಹುದು. ಆದರೆ ಈ ಮೊದಲಿದ್ದ ಅವರ ಪ್ರಭಾವವು ಗ್ರಾಮೀಣ ಪ್ರದೇಶದಲ್ಲಿಲ್ಲ.

ಪಟ್ಟಿ ೯

ಸಾಂಸ್ಥಿಕೇತರ ಹಣಕಾಸಿನ ಸಂಸ್ಥೆಗಳಿಂದ ಸಾಲ ಪಡೆದಿರುವುದು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | A | B | C | D | A | B | C | D | A | B | C | D |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೨೫ | ೫ | .. | .. | ೫ | ೨ | .. | .. | ೫ | ೨ | .. | .. |
| ೦೨. | ಗ್ರಾ.ಕರಕುಶಲ ಉದ್ದಿಮೆದಾರರು | ೨೫ | ೧೧ | ೩ | .. | .. | ೩ | ೧ | .. | .. | ೩ | ೧ | .. | .. |
| ೦೩. | ಗ್ರಾ.ವ್ಯಾಪಾರಸ್ಥರು | ೨೦ | ೬ | ೮ | .. | ೨ | ೨ | ೨ | .. | .. | ೨ | ೨ | .. | .. |
| ೦೪. | ಭೂ.ರಹಿತ ಕಾರ್ಮಿಕರು | ೧೫ | .. | .. | .. | .. | .. | .. | .. | .. | .. | .. | .. | .. |

A ಲೇವಾದೇವಿಗಾರರು **B** ವ್ಯಾಪಾರಸ್ಥರು **C** ಸ್ನೇಹಿತರು/ಬಂಧುಗಳು **D** ಇತರೆ

### ೭. ಹಣಕಾಸಿನ ಸಂಸ್ಥೆಗಳ ಸಾಲ

ಗ್ರಾಮೀಣ ಪ್ರದೇಶಗಳಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳಾದ ಪ್ರಾಥಮಿಕ ಸಹಕಾರಿ ಸಂಘಗಳು, ವಾಣಿಜ್ಯ ಬ್ಯಾಂಕುಗಳು, ಧೀರ್ಘಾಕಾಲಾವದ ಸಾಲಕ್ಕೆ ಭೂ ಅಭಿವೃದ್ಧಿ ಬ್ಯಾಂಕುಗಳಿಂದ ಜನಪದರು ಸಾಲ ಪಡೆಯಲು ಯತ್ನಿಸುತ್ತಿದ್ದರು. ಸಹಕಾರ ಸಂಘಗಳು, ವಾಣಿಜ್ಯ ಬ್ಯಾಂಕುಗಳು ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳು ಗ್ರಾಮೀಣ ಸಮುದಾಯದಲ್ಲಿ ಉಳ್ಳವರಿಗೆ ಮಾತ್ರ ಸಾಲನೀಡುತ್ತಿದ್ದರು.

ಸಮಾಜದಲ್ಲಿನ ದುರ್ಬಲ ವರ್ಗದವರನ್ನು ಅಲಕ್ಷಿಸುತ್ತಿದ್ದರು. ಆದರೆ ಪ್ರಾ.ಗ್ರಾಮೀಣಬ್ಯಾಂಕು ಅಸ್ತಿತ್ವಕ್ಕೆ ಬಂದನಂತರದಲ್ಲಿ ಸಮಾಜದಲ್ಲಿನ ಎಲ್ಲಾ ವರ್ಗಗಳಲ್ಲಿ ಅದರಲ್ಲೂ ಮುಖ್ಯವಾಗಿ ಸಣ್ಣ/ಅತಿಸಣ್ಣ ರೈತರು, ಪರಿಶಿಷ್ಟ ಜಾತಿ ಮತ್ತು ಪಂಗಡ ಮತ್ತು ಆದ್ಯತಾವಲಯಗಳಿಗೆ ಹೆಚ್ಚಿನ ಆದ್ಯತೆ ನೀಡಿದ್ದರಿಂದ ಜನಪದರು ಈ ಬ್ಯಾಂಕಿನಿಂದ ಹಣಕಾಸಿನ ನೆರವನ್ನು ಪಡೆದುಕೊಳ್ಳಲಾರಂಭಿಸಿದರು. ಇದರಿಂದಾಗಿ ದುರ್ಬಲ ವರ್ಗದ ಜನರು ದಲ್ಲಾಳಿಗಳಿಂದ ಮಧ್ಯವರ್ತಿಗಳಿಂದ ಮುಕ್ತವಾಗಿ ಜೀವನ ನಿರ್ವಹಣೆ ಮಾಡಲು ಸಾಧ್ಯವಾಯಿತು. ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳು ವಿಧಿಸುತ್ತದ್ದ ಬಡ್ಡಿಯ ಧರಗಳಿಗಿಂತ ಕಡಿಮೆ ಬಡ್ಡಿಯ ಧರದಲ್ಲಿ ಸಾಲವು ಗ್ರಾ.ಬ್ಯಾಂಕುಗಳಲ್ಲಿ ದೊರೆಯುತ್ತಿದ್ದರಿಂದ ಗ್ರಾಮೀಣ ಬ್ಯಾಂಕುಗಳ ಪ್ರಭಾವ ಗ್ರಾಮೀಣ ಪ್ರದೇಶದಲ್ಲಿ ಅಧಿಕವಾಯಿತು ಎನ್ನಬಹುದು. ಹಾಗಾಗಿ ಗ್ರಾಮೀಣ ಪ್ರದೇಶದ ಅಭಿವೃದ್ಧಿಯಲ್ಲಿ ಈ ಬ್ಯಾಂಕುಗಳು ಮಹತ್ತರವಾದ ಪಾತ್ರವಹಿಸಿವೆ ಎನ್ನಬಹುದು. ಇತರೆ ಬ್ಯಾಂಕುಗಳಿಗಿಂತಲೂ ಗ್ರಾಮೀಣ ಬ್ಯಾಂಕು ಉತ್ತಮ ಕಾರ್ಯನಿರ್ವಹಿಸುತ್ತಾ ಜನಸಾಮಾನ್ಯರ ಬ್ಯಾಂಕಾಗಿ ಹೊರಹೊಮ್ಮಿದೆ.

**ಪಟ್ಟಿ ೧೦**

**ಸಾಂಸ್ಥಿಕ ಹಣಕಾಸಿನ ಮೂಲಗಳಿಂದ ಸಾಲ**

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಟಿಜಿಬಿ ಸಾಲದ ಪೂರ್ವ | | | | ಟಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | E | F | G | H | E | F | G | H | E | F | G | H |
| ೦೧ | ಸ್ಣ/ಅತಿಸ್ಣ ರೈತರು | ೪೦ | ೬ | ೧ | .. | .. | .. | .. | .. | ೪೦ | .. | .. | .. | ೪೦ |
| ೦೨. | ಗ್ರಾ.ಕರಕುಶಲ ಉದ್ದಿಮೆದಾರರು | ೨೫ | .. | .. | ೨ | .. | .. | .. | .. | ೨೫ | .. | .. | .. | ೨೫ |
| ೦೩. | ಗ್ರಾ. ವ್ಯಾಪಾರಸ್ಥರು | ೧೫ | .. | .. | ೨ | .. | .. | .. | .. | ೧೫ | .. | .. | .. | ೧೫ |
| ೦೪. | ಭೂ.ರಹಿತ ಕಾರ್ಮಿಕರು | ೨೦ | .. | .. | .. | .. | .. | .. | .. | ೨೦ | .. | .. | .. | ೨೦ |

**E** ಪ್ರಾ.ಸ.ಸಂಘ **F** ವಾಣಿಜ್ಯ ಬ್ಯಾಂಕುಗಳು **G** ಭೂರಹಿತ ಕಾರ್ಮಿಕರು **H** ಪ್ರಾ.ಗ್ರಾ.ಬ್ಯಾಂಕುಗಳು

## ಗ್ರಾಮೀಣ ಬ್ಯಾಂಕ ಬಗ್ಗೆ ತಿಳುವಳಿಕೆ

ಗ್ರಾಮೀಣ ಬ್ಯಾಂಕುಗಳ ಬಗ್ಗೆ ಸಮೀಕ್ಷೆ ನಡೆಸಿದ ೧೦೦ ಕುಟುಂಬಗಳಲ್ಲಿ ೫೫ ಕುಟುಂಬಗಳು ಬ್ಯಾಂಕ ಸಿಬ್ಬಂದಿಯಿಂದ ತಿಳಿದುಕೊಂಡಿದ್ದಾರೆ. ೧೫ ಕುಟುಂಬಗಳು ಗ್ರಾಮಸಭೆಯ ಮೂಲಕ ೧೦ ಕುಟುಂಬಗಳು ಗ್ರಾಮದ ಮುಕಂಡರುಗಳ ಮೂಲಕ ೧೦ ಕುಟುಂಬಗಳು ಸ್ವಂತ ತಿಳುವಳಿಕೆಯಿಂದ ೧೦

ಕುಟುಂಬಗಳು ಸ್ನೇಹಿತರುಗಳ ಮೂಲಕ ಬ್ಯಾಂಕನ ಬಗ್ಗೆ ಮಾಹಿತಿ ಪಡೆದಿದ್ದಾರೆ. ಇದು ಪ್ರತಿಶತ ೫೫, ೧೫, ೧೦, ೧೦ ಮತ್ತು ೧೦ರಷ್ಟು ಅನುಕ್ರಮವಾಗಿವೆ. ಗ್ರಾಮೀಣ ಬ್ಯಾಂಕ ಸಿಬ್ಬಂದಿಯು ಗರಿಷ್ಠ ಪ್ರಮಾಣದಲ್ಲಿ ಜನಪದರಿಗೆ ಬ್ಯಾಂಕ ಉಪಯೋಗದ ಬಗ್ಗೆ ಮಾಹಿತಿಯನ್ನು ಒದಗಿಸಿಕೊಡಲು ಯಶಸ್ವಿಯಾಗಿದ್ದಾರೆ. ಇದನ್ನು ಪಟ್ಟಿ ೧೧ರ ಮೂಲಕ ಕಾಣಬಹುದು.

## ಗ್ರಾಮೀಣ ಬ್ಯಾಂಕುಗಳ ಬಗ್ಗೆ ಜನಪದರ ಅಭಿಪ್ರಾಯಗಳು

ಸಮೀಕ್ಷಿಸಿದ ೧೦೦ ಕುಟುಂಬಗಳು ಬ್ಯಾಂಕ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಇದರಲ್ಲಿ ೮೫ ಕುಟುಂಬಗಳು ಪೂರ್ಣ ಪ್ರಮಾಣದ ತೃಪ್ತಿ ವ್ಯಕ್ತಪಡಿಸಿದ್ದಾರೆ. ಅದು ಪ್ರತಿಶತ ೮೫ರಷ್ಟಾಗುತ್ತದೆ. ಇನ್ನುಳಿದ ೧೫ ಕುಟುಂಬಗಳು ಅನೇಕ ಕಾರಣಗಳನ್ನು ನೀಡಿದ್ದಾರೆ. ಏಕೆಂದರೆ ಕೆಲವು ಕುಟುಂಬಗಳು ಸರಿಯಾದ ದಾಖಲೆಗಳನ್ನು ಒದಗಿಸಿದ ಪ್ರಯುಕ್ತ ಸಾಲವನ್ನು ನಿಧಾನವಾಗಿ ಮಂಜೂರು ಮಾಡಲಾಗಿದೆ. ಬ್ಯಾಂಕಗೆ ತನ್ನ ಮುಖ್ಯ ಕಛೇರಿಯಿಂದ ಸಾಲ ವಿತರಿಸಲು ಮಾಹಿತಿ ಬರಲು ತಡವಾದಾಗ ಸಾಲ ವಿತರಿಸಲು ವಿಳಂಬವಾದಾಗ ಸಂದರ್ಭಗಳಲ್ಲಿ ಈ ಕುಟುಂಬಗಳು ಅತೃಪ್ತಿ ವ್ಯಕ್ತಪಡಿಸಿವೆ. ಅದು ಪ್ರತಿಶತ ೧೫ರಷ್ಟಾಗುತ್ತದೆ. ಎಲ್ಲಾ ಕುಟುಂಬಗಳು ಬ್ಯಾಂಕು ಮುಂದುವರೆಸುವ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ. ಆದರೆ ೨೦೦೧ರ ನಂತರದಲ್ಲಿ ಗ್ರಾಮೀಣ ರೈತರು ತೊಂದರೆಗೆ ಒಟಗಾಗುವುದನ್ನು ತಪ್ಪಿಸಲು ಕಿಸಾನ್ ಕ್ರೆಡಿಟ್ ಕಾರ್ಡುಗಳನ್ನು ಜಾರಿಗೆ ತಂದಿರುವುದರಿಂದ ರೈತರಿಗೆ ಅನುಕೂಲವಾಗಿದೆ ಎನ್ನಬಹುದು. ಬ್ಯಾಂಕ್ ಸತತವಾಗಿ ಜನಸಾಮಾನ್ಯರ ಸಂಪರ್ಕದಲ್ಲಿದ್ದು ಸತತವಾಗಿ ಲಾಭಗಳಿಸಿ ಉತ್ತಮಶಾಖೆ ಎಂಬ ಪ್ರಶಸ್ತಿಯನ್ನು ಪಡೆದದೆ ಎನ್ನಬಹುದು.

ಟಿಜಿಬಿ ಸಾಲದಪೂರ್ವ ಈ ಸಾಂಸ್ಥಿಕೇತರ ಹಣಕಾಸಿನ ಸಂಸ್ಥೆಗಲಿಂದ ಸಾಲ ಪಡೆಯುತ್ತಿದ್ದರು. ಆದರೆ ಬ್ಯಾಂಕ ಸಾಲದ ನಂತರ ಇವರ ಪ್ರಭಾವ ಗಣನೀಯ ಪ್ರಮಾಣದಲ್ಲಿ ಇಳಿಮುಖವಾಗಿರುವುದನ್ನು ಕಾಣಬಹುದು.

## ಪಟ್ಟಿ ೧೧

### ಟಿಜಿಬಿ ಬ್ಯಾಂಕ್ ಬಗ್ಗೆ ಜ್ಞಾನ ಪಡೆದವರು ಮತ್ತು ಅದರ ಬಗೆಗಿನ ಅಭಿಪ್ರಾಯ

| ಕ್ರ. ಸಂಖ್ಯೆ | ವರ್ಗಗಳು | ಕು ಸಂಖ್ಯೆ | ಗ್ರಾಮದ ಮುಖಂಡರಿಂದ | ಸ್ವಂತ | ಸ್ನೇಹಿತರು | ಬ್ಯಾಂಕ್ ಸಿಬ್ಬಂಧಿ | ಗ್ರಾಮ ಸಭಾ | ಬಂಧು ಗಳಿಂದ | ಬ್ಯಾ.ತೃಪ್ತಿ | | ಸಾ.ಪ. ತೊಂದರೆಗಳು | | ಅಧಿಕಾರಿಗಳ ಬಗ್ಗೆ ತೃಪ್ತಿ | | ಬ್ಯಾಂಕ್ ಮುಂದುವ ಸುವ ಬಗ್ಗೆ | |
|---|---|---|---|---|---|---|---|---|---|---|---|---|---|---|---|---|
| | | | | | | | | | ಹೌದು | ಇಲ್ಲ | ಹೌದು | ಇಲ್ಲ | ಹೌದು | ಇಲ್ಲ | ಬೇಕು | ಬೇಡ |
| ೦೧. | ಸಣ್ಣ/ಅತಿಸಣ್ಣ ರೈತರು | ೪೦ | ೪ | ೧ | ೨ | ೩೦ | ೩ | .. | ೩೫ | ೫ | ೫ | ೩೫ | ೩೫ | ೫ | ೪೦ | .. |
| ೦೨. | ಕರಕುಶಲ/ಸಣ್ಣ ಉದ್ಯಮಿಗಳು | ೨೫ | ೩ | ೨ | ೩ | ೧೦ | ೭ | .. | ೨೨ | ೩ | ೩ | ೨೨ | ೨೨ | ೩ | ೨೫ | .. |
| ೦೩. | ಸಣ್ಣ ವ್ಯಾಪಾರಸ್ಥರು | ೧೫ | ೧ | ೫ | ೨ | ೩ | ೨ | .. | ೧೩ | ೨ | ೨ | ೧೩ | ೧೩ | ೨ | ೧೫ | .. |
| ೦೪. | ಭೂರಹಿತ ಕಾರ್ಮಿಕರು | ೨೦ | ೨ | ೨ | ೩ | ೧೦ | ೩ | .. | ೧೫ | ೫ | ೫ | ೧೫ | ೧೫ | ೫ | ೨೦ | .. |

**ಖಾನಹೊಸಹಳ್ಳಿ ಟಿಜಿಬಿ ಶಾಖೆಯ ಸ್ಥಿತಿ**

ಈ ಬ್ಯಾಂಕು ಆರಂಭದಿಂದಲೂ ಗ್ರಾಮೀಣ ಜನಪದರಿಗೆ ಬೇಕಾದ ಹಣಕಾಸಿನ ನೆರವನ್ನು ನೀಡುತ್ತಾ ಬಂದಿದೆ. ಇಲ್ಲಿನ ಜನಪದರು ಬ್ಯಾಂಕು ತಮ್ಮ ಕಷ್ಟ ನೀಗಿಸಲು ಬಂದಿದೆ ಎಂದು ತಿಳಿದುಕೊಂಡು ಸಾಲ ಪಡೆಯುವುದು ಅಷ್ಟೆ ಅಲ್ಲ. ಸಾಲ ಮರುಪಾವತಿಯು ಅಷ್ಟೇ ಮುಖ್ಯ ಎಂದು ಪರಿಗಣಿಸಿದ್ದಾರೆ. ಹಾಗಾಗಿ ಇಲ್ಲಿನ ಎಲ್ಲಾ ವರ್ಗದ ಜನಪದರು ಸಾಲಪಡೆಯುವಾಗ ಎಷ್ಟು ಮಾನ್ಯತೆ ನೀಡುತ್ತಾರೋ, ಹಾಗೆ ಸಾಲ ಮರುಪಾವತಿಯ ಸಮಯದಲ್ಲಿ ಕೂಡ ಹಾಗೆ ನಡೆದುಕೊಳ್ಳುತ್ತಾರೆ. ನಿಜವಾಗಿಯು ಬ್ಯಾಂಕಿನ ಅರ್ಥವನ್ನು ಬ್ಯಾಂಕ ಬೇಟಿಯ ಸಂದರ್ಭದಲ್ಲಿ ಕಂಡುಕೊಳ್ಳಲಾಯಿತು. ಇಲ್ಲಿನ ಜನಪದರು ತಮ್ಮ ಉಳಿತಾಯದ ಹಣವನ್ನು ಈ ಬ್ಯಾಂಕಿನಲ್ಲಿಡುತ್ತಾರೆ. ಆದ್ದರಿಂದ ಬ್ಯಾಂಕು ಅಧಿಕಾರಿಗಳು ತಮ್ಮಲ್ಲಿರುವ ಲೆಕ್ಕ ಪತ್ರಗಳು ಪ್ರತಿಶತ ೯೦ರಷ್ಟು ಸಾಲ ಮರುಪಾವತಿಯಾಗಿರುವುದನ್ನು ತೋರಿಸುತ್ತದೆ.

ಈ ಬ್ಯಾಂಕು ೧೧,೦೦೦ ಠೇವಣಿ ಖಾತೆಗಳನ್ನು ಹೊಂದಿದ್ದು, ೮ ಕೋಟಿ ರೂಪಾಯಿಗಳ ಠೇವಣಿಯನ್ನು ಹಾಗೂ ಸಾಲದ ಹಣ ೭.೨೦ಕೋಟಿ ರೂಪಾಯಿಗಳಾಗಿದೆ. ಅದರಲ್ಲಿ ಕೃಷಿಗೆ ೬.೨೦ ಕೋಟಿ ರೂಪಾಯಿಗಳ ಸಾಲ ಮತ್ತು ಮುಂಗಡಗಳನ್ನು ನೀಡಿದೆ. ಸಿಡಿಯ ಅನುಪಾತವು ಪ್ರತಿಶತ ೯೮ರಷ್ಟು ಇದೆ. ಈ ಶಾಖೆಯು ನಿರಂತರವಾಗಿ ೭ ವರ್ಷಗಳ ಕಾಲ ಪ್ರಶಸ್ತಿ ಪಡೆದುಕೊಂಡಂತಹ ಕೀರ್ತಿ ಬ್ಯಾಂಕಿಗೆ ಸಲ್ಲುತ್ತದೆ. ೨೦೦೬ರ ಸೆಪ್ಟೆಂಬರ ಹೊತ್ತಿಗೆ ೫೦೦ ಕೆಸಿಸಿ, ೧೫೦ ಸಣ್ಣ ಕೈಗಾರಿಕೆ, ೨೫೦ ಸಣ್ಣ ವ್ಯಾಪಾರದ ೪೦೦ ಹೈನುಗಾರಿಕೆ ಖಾತೆಗಳನ್ನು ಹೊಂದಿತ್ತೆಂದು ಬ್ಯಾಂಕಿನ ಲೆಕ್ಕಪತ್ರಗಳು ತಿಳಿಸುತ್ತವೆ. ಬ್ಯಾಂಕಿನಲ್ಲಿ ಖಾತೆ ತೆರೆಯಲು ಯಾವುದೇ ಹಣವನ್ನು ನೀಡುವಂತಿಲ್ಲ. ಗ್ರಾಹಕರು ನೇರವಾಗಿ ಬ್ಯಾಂಕಿಗೆ ಬಂದು ತಮ್ಮ ಖಾತೆಯನ್ನು ತೆರೆಯಲು ಅವಕಾಶಕಲ್ಪಿಸಿದೆ.

ಗ್ರಾಮೀಣ ಜನಪದರು ತಮ್ಮ ಉಳಿತಾಯದ ಹಣವನ್ನು ಎಲ್ಲಿಬೇಕಾದರೂ ಸಂಗ್ರಹ ಮಾಡುತ್ತಿದ್ದರು. ಉದಾ. ಮಡಕೆ, ಕುಡಿಕೆ, ಟ್ರಂಕು, ನೆಲುವು, ಗಳ, ಹೆಂಚು ಇತ್ಯಾದಿಗಳಲ್ಲಿ ಸಂಗ್ರಹಿಸುತ್ತಿದ್ದರು. ಈ ಬ್ಯಾಂಕು ಸ್ವ ಸಹಾಯ ಗುಂಪುಗಳಿಗೆ ಸಹಾಯ ಮಾಡಿ ಅವರನ್ನು ತನ್ನತ್ತ ಸೆಳೆದು ಮನೆಯಲ್ಲಿ ಉಳಿತಾಯ ಮಾಡಿದ ಹಣವನ್ನು ಬ್ಯಾಂಕಿನಲ್ಲಿ ಠೇವಣಿ ರೂಪದಲ್ಲಿಟ್ಟು ಬಡ್ಡಿ ಪಡೆಯಲು ಸಾಧ್ಯವೆಂದು ತಿಳಿಸಿ ಆ ಹಣವನ್ನು ಬ್ಯಾಂಕಿನತ್ತ ಸೆಳೆಯುವಲ್ಲಿ ಯಶಸ್ವಿಯಾದ ಬ್ಯಾಂಕಾಗಿದೆ ಎನ್ನಬಹುದು. ಹೀಗೆ ಕಳೆದ ೨೫ ವರ್ಷಗಳ ಅವಧಿಯಲ್ಲಿ ಬ್ಯಾಂಕ ಕಾರ್ಯನಿರ್ವಹಿಸಿ ಜನಸಾಮಾನ್ಯರ ಬ್ಯಾಕಾಂಗಿ ಕಾರ್ಯನಿರ್ವಹಿಸುತ್ತಿರುವ ಶಾಖೆಯೆಂದರೆ ಎಂದರೆ ತಪ್ಪಾಗಲಾರದು.

ತುಂಗಭದ್ರಾ ಗ್ರಾಮೀಣ ಬ್ಯಾಂಕುಗಳು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ಸಮಾಜದಲ್ಲಿನ ದುರ್ಬಲ ವರ್ಗದವರಿಗೆ, ಸಣ್ಣ/ಅತಿಸಣ್ಣ ರೈತರು, ವ್ಯಾಪಾರಿಗಳಿಗೆ ಶಿಕ್ಷಣ, ಗೃಹನಿರ್ಮಾಣ ಇನ್ನು ಮುಂತಾದ ಗ್ರಾಮೀಣ ಅಭಿವೃದ್ಧಿ ಕಾರ್ಯಗಳಿಗೆ ಬೇಕಾದ ಹಣಕಾಸಿನ ನೆರವನ್ನು ಒದಗಿಸಿವೆ. ಈ ಶಾಖೆಯು

೨೦೦೭ರ ಸೆಪ್ಟೆಂಬರ್ ಹೊತ್ತಿಗೆ ೩೯೮.೨೯ ಲಕ್ಷ ರೂಪಾಯಿಗಳನ್ನು ಅಲ್ಪಾವಧಿ ಮತ್ತು ಮಧ್ಯಮಾವಧಿ ಕೃಷಿಸಾಲವನ್ನು ಸಣ್ಣ ಕೈಗಾರಿಕೆಗಳಿಗೆ ೩.೬೭ ಲಕ್ಷ ಇನ್ನಿತರ ಚಟುವಟಿಕೆಗಳಿಗೆ ೪೬.೮೩ಲಕ್ಷ ಒಟ್ಟು ೪೬೬.೭೫ಲಕ್ಷ ರೂಪಾಯಿಗಳನ್ನು ತನ್ನ ವ್ಯಾಪ್ತಿಯಲ್ಲಿ ವಿತರಿಸಿದೆ. ಆರಂಭದಲ್ಲಿ ಇದರ ವಹಿವಾಟು ಕಡಿಮೆ ಇದ್ದು, ಜನರ ಅವಶ್ಯಕತೆಗೆ ತಕ್ಕಂತೆ ಸಾಲವಿತರಣೆಯು ಅಧಿಕವಾಗಿರುವುದನ್ನು ಅಂಕಿ ಅಂಶಗಳ ಮೂಲಕ ಕಾಣಬಹುದು. ಸಿ.ಡಿ. ಅನುಪಾತವು ೧೫೯ರಷ್ಟಿದೆ.

**೭. ಹೂವಿನ ಹಡಗಲಿ ಕ್ಷೇತ್ರ, ಸೋಗಿ ಪ್ರಗತಿ ಗ್ರಾಮೀಣ ಬ್ಯಾಂಕ ಶಾಖೆ**

ಈ ಶಾಖೆಯು ಸೋಗಿ ಮತ್ತು ಅಡವಿಮಲ್ಲನಕೇರಿ ಗ್ರಾಮಗಳಲ್ಲಿ ಅತ್ಯಧಿಕ ಪತ್ತಿನ ಕಾರ್ಯನಿರ್ವಹಿಸುತ್ತಿದೆ. ಎರಡು ಗ್ರಾಮಗಳಿಂದ ೧೨೦ ಫಲಾನುಭವಿಗಳನ್ನು ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಳ್ಳಲಾಗಿದೆ. ಫಲಾನುಭವಿಗಳಲ್ಲಿ ೭೦ ಸಣ್ಣ, ಅತಿಸಣ್ಣ ರೈತರು, ೨೫ ಗ್ರಾಮೀಣ ಸಣ್ಣ ವ್ಯಾಪಾರಸ್ಥರು, ೧೦ ಸಣ್ಣ ಉದ್ದಿಮೆದಾರರು, ಮತ್ತು ೧೫ ಭೂರಹಿತ ಕಾರ್ಮಿಕರನ್ನು ಸಮೀಕ್ಷೆಗೆ ಒಳಪಡಿಸಲಾಯಿತು. ಅದರಲ್ಲಿ ಸಾಕ್ಷರಸ್ಥರ ಪ್ರಮಾಣ, ಉದ್ಯೋಗ ಮನೆಗಳ ವಿಧಗಳು ಅವಲಂಬಿಸಿರುವವರ ಸಂಖ್ಯೆ ಇನ್ನು ಮುಂತಾದ ಅಂಶಗಳ ಬಗ್ಗೆ ಅವರಿಂದಲೇ ಪಡೆದ ಮಾಹಿತಿಯನ್ನು ಪಟ್ಟಿ ೧ರಲ್ಲಿ ನೋಡಬಹುದಾಗಿದೆ.

**ಪಟ್ಟಿ ೧**

**ಸಾಮಾನ್ಯ ಮಾಹಿತಿ**

| ಕ್ರಸಂ | ವರ್ಗಗಳು | ಕುಟುಂಬಗಳ ಸಂಖ್ಯೆ | ಸರಾಸರಿ ಸದಸ್ಯರು | ಸಾಕ್ಷರಸ್ಥ ಸಂಖ್ಯೆ | ದುಡಿಯುವ ವರಸಂಖ್ಯೆ | ಗುಡಿಸಲು ಗಳು | ಮನೆಗಳ ವಿಧ: ಮಾಳಿಗೆ ಮನೆ | ಹೆಂಚಿನ ಮನೆ | ತಗಡಿನ ಮನೆ | ಜನತಾ ಮನೆ | ಆರ್.ಸಿ.ಸಿ ಮನೆ |
|---|---|---|---|---|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೭೦ | ೫ | ೩ | ೩ | ೫ | ೪೬ | ೫ | ... | ೧೦ | ೪ |
| ೦೨ | ಸಣ್ಣ ವ್ಯಾಪಾರಸ್ಥರು | ೨೫ | ೬ | ೩ | ೩ | ೩ | ೧೨ | ೨ | ... | ೮ | - |
| ೦೩. | ಗ್ರಾಮೀಣ ಕರಕುಶಲ/ ಉದ್ಯಮದಾರು | ೧೦ | ೪ | ೪ | ೨ | - | ೮ | - | ... | ೨ | - |
| ೦೪. | ಭೂ ರಹಿತ ಕಾರ್ಮಿಕರು | ೧೫ | ೫ | ೨ | ೨ | ೨ | ೧ | .. | .. | ೧೨ | .. |
| | ಒಟ್ಟು | ೧೨೦ | | | | ೧೦ | ೬೭ | ೭ | | ೩೨ | ೪ |

ಪಟ್ಟಿ ೧ರಲ್ಲಿ ಅವಲೋಕಿಸಿದಾಗ ಭೂರಹಿತ ಕಾರ್ಮಿಕರಲ್ಲಿ ಸಾಕ್ಷರತೆಯ ಪ್ರಮಾಣ ಕಡಿಮೆ ಇದ್ದು, ಇತರ ವರ್ಗಗಳಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಾಗಿದೆ. ೧೨೦ ಕುಟುಂಬಗಳಲ್ಲಿ ೧೦ ಕುಟುಂಬಗಳು ಗುಡಿಸಲುಗಳಲ್ಲಿ ೬೭ ಕುಟುಂಬಗಳು ಮಾಳಿಗೆ ಮನೆಗಳಲ್ಲಿ ೭ ಕುಟುಂಬಗಳು ಹೆಂಚಿನ ಮನೆಗಳಲ್ಲಿ

೩೨ ಕುಟುಂಬಗಳು ಜನತಾ ಮನೆಗಳಲ್ಲಿ ೪ ಕುಟುಂಬಗಳು ಆರ್.ಸಿ.ಸಿ. ಮನೆಗಳಲ್ಲಿ ವಾಸವಾಗಿದ್ದಾರೆ. ದುಡಿಯುವವರ ಸಂಖ್ಯೆ ನಾಲ್ಕು ವರ್ಗಗಳಲ್ಲಿ, ಮೊದಲೆರಡು ವರ್ಗಗಳಲ್ಲಿ ತಲಾ ೩ ಜನರಿದ್ದು, ನಂತರದ ವರ್ಗಗಳಲ್ಲಿ ಎರಡು ಜನರು ಮಾತ್ರ ದುಡಿಯುತ್ತಾರೆ. ಇವರು ವಾಸಿಸುವ ಮನೆಗಳನ್ನಾಧರಿಸಿ ಅವರ ಆರ್ಥಿಕ, ಸಾಮಾಜಿಕ ಸ್ಥಿತಿಯನ್ನು ಪರಿಗಣಿಸಬಹುದಾಗಿದೆ.

### ೧. ಆಸ್ತಿಗಳು

ಗ್ರಾಮೀಣ ನಿವಾಸಿಗಳು ತಮ್ಮದೇ ಆದ ಆಸ್ತಿಯನ್ನು ಹೊಂದಿರುತ್ತಾರೆ. ಕೃಷಿ ಚಟುವಟಿಕೆಗಳ ಉಪಕರಣಗಳು, ಹಸು, ಎಮ್ಮೆ ಮುಂತಾದವುಗಳಾದರೆ ಮನೆಯಲ್ಲಿ ಟಿ.ವಿ. ಸೈಕಲ್‌ಮೋಟಾರ್, ಸೈಕಲ್, ಕುರಿ, ಕೋಳಿ ಇನ್ನು ಮುಂತಾದವುಗಳನ್ನು ಹೊಂದಿರುತ್ತಾರೆ.

**ಪಟ್ಟಿ ೨**

**ವಿವಿಧ ವರ್ಗಗಳ ಸರಾಸರಿ ಆಸ್ತಿಯ ಮೌಲ್ಯ**

ರೂಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೭೦ | ೬೨೬೦ | ೩೫೦೦೦ | ೨೮೭೪೦ | ೪೫೯ |
| ೦೨. | ಕರಕುಶಲ/ಸಣ್ಣ ವ್ಯಾಪಾರಿಗಳು | ೨೫ | ೧೫೦೦ | ೨೫೦೦೦ | ೨೩೫೦೦ | ೧೫೬೬ |
| ೦೩. | ಚಿಲ್ಲರೆ ವ್ಯಾಪಾರಿ | ೧೦ | ೨೨೬೦ | ೧೭೫೭೫ | ೪೫೩೦೯ | ೬೭೭ |
| ೦೪. | ಭೂ ರಹಿತ ಕಾರ್ಮಿಕರು | ೧೫ | ೬೭೦. | ೧೩೦೦೦ | ೧೨೩೩೦ | ೧೮೪೦ |
| | ಸರಾಸರಿ | ೧೨೦ | ೨೬೭೨ | ೨೨೬೪೩ | ೧೯೯೬೯ | ೭೪೭ |

ಮೇಲಿನ ಪಟ್ಟಿಯಲ್ಲಿ ೧೨೦ ಕುಟುಂಬಗಳ ಸರಾಸರಿ ಆಸ್ತಿಯ ಮೌಲ್ಯವನ್ನು ನೋಡಬಹುದಾಗಿದೆ. ನಾಲ್ಕು ವರ್ಗಗಳಲ್ಲಿ ಭೂರಹಿತ ಕಾರ್ಮಿಕರು ಕಡಿಮೆ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಇನ್ನುಳಿದ ಮೂರು ವರ್ಗಗಳು ಅಧಿಕ ಪ್ರಮಾಣದ ಆಸ್ತಿಯನ್ನು ಹೊಂದಿದ್ದಾರೆ. ಬ್ಯಾಂಕನ ಸಾಲದ ನಂತರ ನಾಲ್ಕು ವರ್ಗಗಳಲ್ಲಿ ಆಸ್ತಿಯ ಪ್ರಮಾಣವು ಹೆಚ್ಚಾಗಿದೆ ಎಂಬುದನ್ನು ನಾಲ್ಕು ವರ್ಗಗಳಲ್ಲಿ ಸರಾಸರಿ ನಿವ್ವಳ ಹೆಚ್ಚಳ ೧೯,೯೬೯ ರೂಪಾಯಿಗಳಾಗಿದ್ದು ಅದು ಪ್ರತಿಶತ ೭೪೭ರಷ್ಟು ಅಧಿಕವಾಗಿದೆ ಎನ್ನಬಹುದು.

### ೨. ಭೂ ಹಿಡುವಳಿ

ಗ್ರಾಮೀಣ ನಿವಾಸಿಗಳ ಜೀವನಾಧಾರಿತ ವೃತ್ತಿ ಕೃಷಿಯಾಗಿದ್ದು, ಅದು ಸಂಪೂರ್ಣವಾಗಿ

ಮಳೆಯಾಧಾರಿತವಾಗಿದೆ. ಭೂ ಹಿಡುವಳಿಯನ್ನು ಸಾಮಾನ್ಯವಾಗಿ ಎರಡು ವರ್ಗಗಳಲ್ಲಿ ಕಾಣಬಹುದು. ಸಣ್ಣ ಮತ್ತು ಅತಿಸಣ್ಣ ರೈತರು ಹಾಗೂ ಗ್ರಾಮೀಣ ವ್ಯಾಪಾರಿಗಳು ಭೂ ಸಾಗುವಳಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಂದ ಪತ್ತು ಪಡೆದ ನಂತರದಲ್ಲಿ ತಮ್ಮ ಜಮೀನಿನ ವಿಸ್ತಾರವನ್ನು ಒಂದು ಎಕರೆಯಷ್ಟು ಹೆಚ್ಚಿಸಿಕೊಂಡಿದ್ದಾರೆ. ಎರಡು ವರ್ಗಗಳಲ್ಲೂ ಪ್ರತಿಶತ ೧.೪ ಎಕರೆಯಷ್ಟು ಭೂಮಿ ವಿಸ್ತರಣೆಯು ಅಧಿಕವಾಗಿರುವುದನ್ನು ಕಾಣಬಹುದು. ಅಂದರೆ ಪ್ರಾದೇಶಿಕ ಗ್ರಾಮೀಣ ಪತ್ತಿನಿಂದ ಇವರ ಭೂಹಿಡುವಳಿಯಗಾತ್ರ ಅಧಿಕವಾಗಿರುವುದನ್ನು ಪಟ್ಟಿ ೩ರಲ್ಲಿ ಕಾಣಬಹುದು.

**ಪಟ್ಟಿ ೩**

**ಸರಾಸರಿ ಭೂ ಹಿಡುವಳಿ ಗಾತ್ರ**

ಎಕರೆಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೭೦ | ೪ | ೫ | ೧.೦ | ೧.೨೫ |
| ೦೨. | ಗ್ರಾಮೀಣ ವ್ಯಾಪಾರಿಗಳು | ೨೫ | ೩ | ೪ | ೧.೦ | ೧.೩ |
| | | ೯೫ | ೩.೫ | ೪.೫ | ೧.೦ | ೧.೪ |

**೩. ಹೂಡುವಳಿ ವೆಚ್ಚ**

ಗ್ರಾಮೀಣ ಜನಪದರ ಮುಖ್ಯ ವೃತ್ತಿಯೆಂದರೆ ಕೃಷಿ. ಇವರ ಹೂಡುವಳಿ ವೆಚ್ಚವು ಭೂಮಿಯನ್ನು ಹದ ಮಾಡುವುದರಿಂದ, ಸುಗ್ಗಿಯ ಕಾಲದವರೆಗೆ ವಿವಿಧ ಹಂತಗಳ ವೆಚ್ಚಗಳನ್ನು ಒಳಗೊಂಡಿರುತ್ತಾರೆ. ಅವುಗಳನ್ನು ಮೂರು ಹಂತಗಳಲ್ಲಿ ಕಾಣಬಹುದು.

೧. ಭೂಮಿ ಹದಮಾಡುವುದರ ಜೊತೆಗೆ ಬೀಜ, ಗೊಬ್ಬರ, ಕ್ರಿಮಿನಾಶಕಗಳ ವೆಚ್ಚ.

೨. ಕೃಷಿ ಕಾರ್ಮಿಕರ ಕೂಲಿ ಮತ್ತು ಎತ್ತುಗಳ ನಿರ್ವಹಣಾ ವೆಚ್ಚ

೩. ಧಾನ್ಯಗಳನ್ನು ಕೊಯ್ದು, ಸಾಗಾಣೆ ಮತ್ತು ಅವನ್ನು ಬೇರ್ಪಡಿಸುವ ಹಾಗೂ ಮಾರುಕಟ್ಟೆಗೆ ಸಾಗಿಸುವ ವೆಚ್ಚಗಳು.

೯೫ಕೃಷಿ ಕುಟುಂಬಗಳನ್ನು ಸಮೀಕ್ಷೆಗೆ ಒಳಪಡಿಸಿದಾಗ ಕೃಷಿ ಚಟುವಟಿಕೆಗಳಿಗೆ ಬೇಕಾದ ಬೀಜ, ಗೊಬ್ಬರ, ಕ್ರಿಮಿನಾಶಕಗಳನ್ನು ಟಿಜಿಬಿ ಸಾಲದ ನಂತರದಲ್ಲಿ ಅಧಿಕಗೊಳಿಸಿಕೊಂಡಿದ್ದಾರೆ. ಸಂಪ್ರದಾಯ ಬೇಸಾಯ ಪದ್ಧತಿಗೆ ಬದಲಾಗಿ ಸ್ವಲ್ಪ ಸುಧಾರಿಸಿದ ಬೇಸಾಯ ಪದ್ಧತಿಯ ಜೊತೆಗೆ ಅಧಿಕ ಇಳುವರಿ

ಕೊಡುವ ಬೀಜ ಆಧುನಿಕ ರಾಸಾಯನಿಕ ಗೊಬ್ಬರಗಳಾದ ಡಿ.ಎ.ಪಿ., ಯೂರಿಯಾ, ಪೊಟ್ಯಾಷ್, ರೋಗಗಳಿಂದ ಬೆಳೆಗಳನ್ನು ರಕ್ಷಿಸಲು ಕ್ರಿಮಿನಾಶಕಗಳನ್ನು ಬಳಸಲಾರಂಬಿಸಿದರು. ಕೃಷಿಯಲ್ಲಿ ಬಿತ್ತನೆಯಾದ ೨೫ ರಿಂದ ೪೦ ದಿನದೊಳಗಾಗಿ ಅದರಲ್ಲಿನ ಕಳೆಯನ್ನು ನಾಶಪಡಿಸಲು ಕೃಷಿ ಕಾರ್ಮಿಕರನ್ನು ನೇಮಿಸಿಕೊಳ್ಳುತ್ತಾರೆ. ಇವರ ಕೂಲಿಯ ಪ್ರಮಾಣವು ಪ್ರಸಕ್ತ ದಿನಗಳಲ್ಲಿ ೫೦ರೂ ನಿಂದ ೮೫ರೂಪಾಯಿಗಳವರೆಗೆ ಅಧಿಕವಾಗಿದೆ ಎನ್ನಬಹುದು. ಗ್ರಾಮೀಣ ಪ್ರದೇಶದಲ್ಲಿ ಸಣ್ಣ/ಅತಿಸಣ್ಣ ರೈತರು ಕೂಡ ಕೆಲವೊಂದು ಸಂದರ್ಭಗಳಲ್ಲಿ ಕೂಲಿ ಕಾರ್ಮಿಕರಾಗಿ ಕಾರ್ಯನಿರ್ವಹಿಸುತ್ತಿರುವವರ ಸಂಖ್ಯೆಯು ಈ ಪ್ರದೇಶದಲ್ಲಿ ಸ್ವಲ್ಪ ಅಧಿಕವಾಗಿದೆ ಎನ್ನಬಹುದು.

೯೫ ಕೃಷಿ ಕುಟುಂಬದಲ್ಲಿ ೬೦ ಕುಟುಂಬಗಳು ಒಂದು ಜೊತೆ ಎತ್ತುಗಳನ್ನು ಹೊಂದಿದ್ದಾರೆ. ೩೫ ಕುಟುಂಬಗಳು ಬಾಡಿಗೆ ಎತ್ತುಗಳ ಅಥವಾ ಟ್ರಾಕ್ಟರ್ ಮೂಲಕ ಕೃಷಿ ಚಟುವಟಿಕೆಗಳ ನಿರ್ವಹಣೆ ಮಾಡುತ್ತಾರೆ. ೬೦ ಕುಟುಂಬಗಳಲ್ಲಿ ಎತ್ತುಗಳ ನಿರ್ವಹಣೆ ಮಾಡಲು ಹಣವನ್ನು ವೆಚ್ಚ ಮಾಡುತ್ತಾರೆ. ಕೆಲವು ಕುಟುಂಬಗಳು ಗ್ರಾಮೀಣ ಬ್ಯಾಂಕಿನಿಂದ ಸಾಲ ಪಡೆದು ಎತ್ತುಗಳನ್ನು ಖರೀದಿಸಿದ್ದಾರೆ ಮತ್ತು ಅವುಗಳ ನಿರ್ವಹಣೆಯನ್ನು ಚೆನ್ನಾಗಿ ನೋಡಿಕೊಂಡಿರುವುದನ್ನು ಕಾಣಬಹುದು.

ಮೂರನೆ ಹಂತದಲ್ಲಿ ಕೃಷಿಕರು ಬೆಳೆಯನ್ನು ಕೊಯಿಲು ಮಾಡುವ ಹಂತಕ್ಕೆ ಬಂದಾಗ ಅದನ್ನು ಕೊಯಿಲು ಮಾಡಬೇಕಾಗುತ್ತದೆ. ಹತ್ತಿಯನ್ನು ಬಿಡಿಸುವುದು, ಸೇಂಗಾ ಕೀಳುವುದು, ಸೂರ್ಯಕಾಂತಿ, ಜೋಳ, ನವಣೆ, ಈರುಳ್ಳಿ, ಮೆಣಸಿನಕಾಯಿ ಮುಂತಾದವುಗಳನ್ನು ಕುಯಿಲು ಮಾಡುವುದು, ಅವುಗಳನ್ನು ಒಕ್ಕುವುದು ರಾಶಿಹಾಕುವುದು, ರಾಶಿ ಕಾಳುಗಳನ್ನು ಗ್ರಾಮದಲ್ಲಿರುವ ವಿವಿಧ ಆಯಾಗಾರರಿಗೆ ಹಂಚುವುದು, ಧಾನ್ಯಗಳನ್ನು ಮನೆಗೆ ಸಾಗಿಸುವುದು, ಆನಂತರದಲ್ಲಿ ಧಾನ್ಯಗಳನ್ನು ಮಾರುಕಟ್ಟೆಗೆ ಸಾಗಿಸುವ ವೆಚ್ಚವನ್ನು ಕೃಷಿಕರು ಭರಿಸಬೇಕಾಗುತ್ತದೆ. ಮಾರುಕಟ್ಟೆಯಲ್ಲಿ ತಮ್ಮ ಧಾನ್ಯಗಳನ್ನು ಮಾರಾಟ ಮಾಡಿದ ನಂತರದಲ್ಲಿ ಕಮಿಷನ್ ಹಣವನ್ನು ದಲ್ಲಾಲರು ಪಡೆಯುತ್ತಾರೆ. ಹೀಗೆ ಎಲ್ಲಾ ವೆಚ್ಚಗಳನ್ನು ಕೃಷಿಕರು ಭರಿಸಬೇಕಾಗುತ್ತದೆ. ಈ ವೆಚ್ಚವು ಅವರು ಹೊಂದಿರುವ ಭೂಮಿಯ ಗಾತ್ರಕ್ಕೆ ಅನುಗುಣವಾಗಿರುತ್ತದೆ.

ಕೃಷಿಯು ಗ್ರಾಮೀಣ ಪ್ರದೇಶದಲ್ಲಿ ಜೀವನಾಧಾರವಾಗಿದೆ. ಕಳೆದ ೫ ವರ್ಷಗಳಿಂದ ಕೃಷಿ ಚಟುವಟಿಕೆಗಳಿಗೆ ಬೇಕಾದ ಬೀಜ, ಗೊಬ್ಬರ, ಕ್ರಿಮಿನಾಶಕಗಳು, ಬೆಲೆಯು ಹೆಚ್ಚಾಗಿದೆ, ಜೊತೆಗೆ ಕೃಷಿಕಾರ್ಮಿಕರ ಕೂಲಿಯ ಪ್ರಮಾಣವೂ ಹೆಚ್ಚಾಗಿದೆ. ಧಾನ್ಯಗಳನ್ನು ಬೇರ್ಪಡಿಸುವ, ಸಾಗಾಣೆ, ಮಾರಾಟವೆಚ್ಚಗಳು ಅಧಿಕವಾಗಿವೆ. ಹೀಗೆ ಭೂಮಿಯನ್ನು ಹದಗೊಳಿಸುವುದರಿಂದ ಸುಗ್ಗಿಯ ಕಾಲದವರೆಗಿನ ವಿವಿಧ ಹಂತಗಳ ವೆಚ್ಚವನ್ನು ಕೃಷಿಕರು ಹೊಂದಿದ್ದಾರೆ. ೯೫ ಕುಟುಂಬಗಳಲ್ಲಿ ಪೂರ್ಣ ಪ್ರಮಾಣದ ಕೃಷಿಯನ್ನವಲಂಬಿಸಿದರೆ ೨೫ ಕುಟುಂಬಗಳು ಭಾಗಶಃ ಕೃಷಿಕರಾಗಿದ್ದಾರೆ. ಏಕೆಂದರೆ ಅವರು ಚಿಲ್ಲರೆ ವ್ಯಾಪಾರಸ್ಥರಾಗಿರುತ್ತಾರೆ. ಇವರು ತಮ್ಮ ವ್ಯಾಪಾರ ವ್ಯವಹಾರದ ಜೊತೆಗೆ ಕೃಷಿಯನ್ನವಲಂಬಿಸಿರುತ್ತಾರೆ.

೯೫ ಕುಟುಂಬಗಳು ಮೂರು ಹಂತದ ಎಲ್ಲಾ ರೀತಿಯ ವೆಚ್ಚಗಳನ್ನು ಒಳಗೊಂಡಿವೆ. ಪ್ರಗತಿ ಗ್ರಾಮೀಣ ಬ್ಯಾಂಕಿನ ಸಾಲದ ಪೂರ್ವದಲ್ಲಿ ಸರಾಸರಿ ೩೦೦೪ ರೂಪಾಯಿಗಳ ವೆಚ್ಚವನ್ನು ಒಳಗೊಂಡಿರುತ್ತಾರೆ. ಪಿಜಿಬಿ ಸಾಲಪಡೆದ ನಂತರದಲ್ಲಿ ಸರಾಸರಿ ವೆಚ್ಚವು ೨೨,೦೦೦ರೂಪಾಯಿಗಳಿಗೆ ಅಧಿಕವಾಗಿರುತ್ತದೆ. ನಿವ್ವಳ ವೆಚ್ಚವು ೧೮೯೯೬ ರೂಪಾಯಿಗಳಷ್ಟಾಗಿದ್ದು, ಅದು ಪ್ರತಿಶತ ೬೩೨ರಷ್ಟು ಅಧಿಕವಾಗಿದೆ ಎಂಬುದನ್ನು ಪಟ್ಟಿ ೪ರಲ್ಲಿ ಕಾಣಬಹುದಾಗಿದೆ.

**ಪಟ್ಟಿ ಸಂಖ್ಯೆ ೪**

**ಉತ್ಪಾದನಾ ವೆಚ್ಚ**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಸಣ್ಣ/ಅತಿಸಣ್ಣ ರೈತರು | ೭೫ | ೪೧೮೪ | ೨೪೦೦೦ | ೧೯೮೧೬ | ೪೭೩.೬ |
| ೦೨. | ಗ್ರಾಮೀಣ ವ್ಯಾಪಾರಿಗಳು | ೨೫ | ೧೮೨೪ | ೨೦೦೦೦ | ೧೮೧೭೬ | ೯೯೬ |
| | ಒಟ್ಟು | ೯೫ | ೩೦೦೪ | ೨೨೦೦೦ | ೧೮೯೯೬ | ೬೩೨ |

ಪಿಜಿಬಿ ಬೆಳೆಸಾಲದ ಮೇಲಿನ ಬಡ್ಡಿ ದರಗಳು ಆರಂಭದಲ್ಲಿ ಪ್ರತಿಶತ ೧೧.೫೦ ರಿಂದ ೧೩ವರೆಗೆ ಇತ್ತು. ಆದರೆ ಆರ್‌ಬಿಐನ ಇತ್ತೀಚಿನ ನೀತಿಯಿಂದಾಗಿ ಬೆಳೆ ಸಾಲದ ಬಡ್ಡಿಯ ಧರಗಳು ಪ್ರತಿಶತ ೭ರಷ್ಟಕ್ಕೆ ಇಳಿದಿರುವುದರಿಂದ ರೈತರು ಅಧಿಕ ಪ್ರಮಾಣದಲ್ಲಿ ಸಾಲವನ್ನು ಪಡೆದಿರುತ್ತಾರೆ. ಆದರೆ ಇವರ ೩ ಹಂತಗಳ ವೆಚ್ಚದ ಪ್ರಮಾಣವು ಅಧಿಕವಾಗಿರುವುದರಿಂದ ಕೃಷಿಯ ಹೂಡುವಳಿವೆಚ್ಚವು ಅಧಿಕವಾಗಿರುವುದನ್ನು ಕಾಣಬಹುದಾಗಿದೆ.

**೪. ಉತ್ಪಾದನೆಯಿಂದ ವರಮಾನ**

ಮುಂಗಾರು ಮತ್ತು ಹಿಂಗಾರು ಬೆಳೆಗಳ ಉತ್ಪಾದನೆಯು ವರ್ಷದ ಸಮಗ್ರ ಉತ್ಪಾದನೆಯಾಗಿರುತ್ತದೆ. (ಪ್ರಾ.ಗ್ರಾ.ಬ್ಯಾ.ಸಾಲದ ಪೂರ್ವ ಮತ್ತು ನಂತರ) ಈ ಕುಟುಂಬಗಳು ತಮ್ಮ ಜಮೀನಿನಲ್ಲಿ ಆಹಾರದ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ. ವಾಣಿಜ್ಯ ಬೆಳೆಗಳನ್ನು ತಮ್ಮ ವರಮಾನವನ್ನು ಸುಧಾರಿಸಲು ಬೆಳೆಯುತ್ತಾರೆ. ಆಹಾರದ ಬೆಳೆಗಳನ್ನು ತಮ್ಮ ಜೀವನೋಪಾಯಕ್ಕಾಗಿ ಬೆಳೆಯುತ್ತಾರೆ. ಅಧಿಕವಾದ ಆಹಾರ ಪದಾರ್ಥಗಳನ್ನು ಮಾರಾಟ ಮಾಡುತ್ತಾರೆ.

ಕೃಷಿಕರು ಪ್ರಾ.ಗ್ರಾ.ಬ್ಯಾ. ಸಾಲದ ಪೂರ್ವದಲ್ಲಿ ಅನಕ್ಷರಸ್ಥರು, ಸಂಪ್ರದಾಯಬದ್ದರು, ಮೂಢನಂಬಿಕೆಗಳನ್ನು ನಂಬುತ್ತಿದ್ದರು. ಇವರು ಕೃಷಿಯಲ್ಲಿ ಸಂಪ್ರದಾಯಮಾರ್ಗವನ್ನು ಅನುಸರಿಸುತ್ತಿದ್ದರು.

ಆದರೆ ಪ್ರಾ.ಗ್ರಾ.ಬ್ಯಾ.ಸಾಲದ ನಂತರ ಕೃಷಿಯಲ್ಲಿ ಅಧಿಕ ಇಳುವರಿ ಕೊಡುವ ಬೀಜ, ಗೊಬ್ಬರ ಕ್ರಿಮಿನಾಶಕಗಳ ಬಳಕೆಯನ್ನು ಕಂಡುಕೊಂಡಿದ್ದಾರೆ. ಇತ್ತೀಚಿನ ದಿನಗಳಲ್ಲಿ ಕೃಷಿಯಲ್ಲಿ ಡಿ,ಸಿ,ಎಚ್. ಮತ್ತು ಬಿ.ಟಿ., ಸಣ್ಣ ಹತ್ತಿಯನ್ನು, ಮೆಕ್ಕೆಜೋಳ, ಸೂರ್ಯಕಾಂತಿ, ಬಿಳಿಜೋಳ, ಮೆಣಸಿನಕಾಯಿ, ಶೇಂಗಾ, ನವಣೆ, ಈರುಳ್ಳಿ ಮುಂತಾದವುಗಳನ್ನು ಮುಂಗಾರು ಮತ್ತು ಹಿಂಗಾರಿನ ಅವಧಿಯಲ್ಲಿ ಬೆಳೆಯುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಹಾರ ಪದಾರ್ಥಗಳ ಬೆಳೆಯನ್ನು ಕಡಿಮೆ ಪ್ರಮಾಣದಲ್ಲಿ ಬೆಳೆಯಲಾರಂಬಿಸಿ ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳಲು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾರೆ.

ಕೃಷಿಯು ಬಹಳ ಸಂದಿಗ್ಧವಲಯವಾಗಿದ್ದು ಸಂಪೂರ್ಣವಾಗಿ ನಿಸರ್ಗವನ್ನವಲಂಬಿಸಿದೆ, ಕೃಷಿಯು ಜೀವನಾಧಾರವಾಗಿ. ಪ್ರಾ.ಗ್ರಾ.ಬ್ಯಾಂಕಿನಿಂದ ಸಾಲ ಪಡೆದನಂತರದಲ್ಲಿ ಉತ್ಪಾದನಾ ವೆಚ್ಚ ಮತ್ತು ವರಮಾನಗಳೆರಡೂ ಅಧಿಕವಾಗಿರುವುದನ್ನು ಕಾಣಬಹುದು. ೭೦ ಕುಟುಂಬಗಳ ವರಮಾನವು ೨೫ ಕುಟುಂಬಗಳ ವರಮಾನಕ್ಕಿಂತ ಅಧಿಕವಾಗಿದೆ. ಇವರು ಮುಂಗಾರು ಮತ್ತು ಹಿಂಗಾರು ಬೆಳೆಗಳನ್ನು ಬೆಳೆದು ವಿವಿಧ ಮಾರುಕಟ್ಟೆಯಲ್ಲಿ ವಿವಿಧ ಬೆಲೆಗಳಿಗೆ ಮಾರಾಟ ಮಾಡಿರುತ್ತಾರೆ. ವಾಣಿಜ್ಯ ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಉತ್ತಮ ಬೆಲೆ ಇದ್ದು, ಆಹಾರದ ಬೆಳೆಗಳಿಗೆ ಬೆಲೆಯು ಸ್ವಲ್ಪ ಕಡಿಮೆ ಇದೆ. ಆದರೆ ೯೫ಕುಟುಂಬಗಳು ವರಮಾನವನ್ನು ಹೆಚ್ಚಿಸಿಕೊಳ್ಳುವಲ್ಲಿ ಯಶಸ್ವಿಯಾಗಿವೆ.

ಈ ಕುಟುಂಬಗಳು ಬ್ಯಾಂಕಿನಿಂದ ಸಾಲ ಪಡೆದನಂತರ ವರಮಾನವು ಸರಾಸರಿಯಾಗಿ ೭,೪೯೩ರೂಗಳಿಂದ ೪೯,೦೦೦ರೂಪಾಯಿಗಳಿಗೆ ಅಧಿಕವಾಗಿದ್ದು, ನಿವ್ವಳ ಮೌಲ್ಯದ ಹೆಚ್ಚಳವು ರೂ ೨೮,೦೦೦ರೂಪಾಯಿಗಳಿಗೆ ಅಧಿಕವಾಗಿದೆ. ಅದು ಪ್ರತಿಶತ ೨೮೧ರೂ ಅಧಿಕವಾಗಿರುವುದನ್ನು ಪಟ್ಟಿ ೫ರ ಮೂಲಕ ಕಾಣಬಹುದಾಗಿದೆ. ೯೫ ಕುಟುಂಬಗಳು ಸಾಲದ ನಂತರದಲ್ಲಿ ಆಹಾರದ ಬೆಳೆಗಳಿಗಿಂತ ವಾಣಿಜ್ಯ ಬೆಳೆಗಳಿಗೆ ಹೆಚ್ಚಿನ ಆದ್ಯತೆ ನೀಡಿ, ತಮಗೆ ಬೇಕಾದ ಆಹಾರ ಪದಾರ್ಥಗಳನ್ನು ಇತರೆಡೆಯಿಂದ ಪೂರೈಸಿಕೊಳ್ಳುತ್ತಾರೆ. ಇದರಿಂದಾಗಿ ತಮ್ಮ ವರಮಾನವನ್ನು ವೃದ್ಧಿಸಿಕೊಂಡು ಜೀವನ ಮಟ್ಟಸುಧಾರಿಸಲು ಸಾಧ್ಯವಾಗಿದೆ ಎಂದಿದ್ದಾರೆ.

೧೯೭೭ ರಿಂದ ೨೦೦೭ರ ವರೆಗಿನ ಕಾಲಾವಧಿಯಲ್ಲಿ ಅಂದಾಜು ಕೃಷಿ ಉತ್ಪನ್ನವು ಪ್ರತಿಶತ ಮೌಲ್ಯ ೨೮೧.೩ ಅಧಿಕವಾಗಿದೆ. ಅದೇ ಕಾಲಾವಧಿಯಲ್ಲಿ ವಾರ್ಷಿಕ ಉತ್ಪನ್ನದ ಪ್ರತಿಶತ ೧೧೨ರಷ್ಟು ಅಧಿಕವಾಗಿದೆ. ಹಾಗೆಯೇ ವೆಚ್ಚದ ಪ್ರಮಾಣವು ಪ್ರತಿಶತ ೬೨೩ರಷ್ಟು ಹೆಚ್ಚಳವಾಗಿದೆ. ಉತ್ಪನ್ನ ಮತ್ತು ವೆಚ್ಚಗಳನ್ನು ಹೋಲಿಸಿದಾಗ ಉತ್ಪನ್ನಕ್ಕಿಂತ ವೆಚ್ಚ ಅಧಿಕವಾಗಿರುವುದನ್ನು ಕಾಣಬಹುದು. ವಾರ್ಷಿಕ ವೆಚ್ಚದ ಮೌಲ್ಯ ೨೦.೭ರಷ್ಟು ಹೆಚ್ಚಾಗಿರುವುದನ್ನು ಕಾಣಬಹುದು. ಇವೆರಡರ ಅನುಪಾತವು ಪ್ರತಿಶತ ೨೨೧ರಷ್ಟು ವೆಚ್ಚವು ಅಧಿಕವಾಗಿರುವುದನ್ನು ಕಾಣಬಹುದು.

ಪಟ್ಟಿ ೫

ಉತ್ಪಾದನೆಯಿಂದ ವರಮಾನ

| ಕ್ರಸಂ | ವರ್ಗಗಳು | ಕುಟುಂಬಗಳ ಸಂಖ್ಯೆ | ಟಿಜಿಬಿ ಸಾಲದ ಪೂರ್ವ | | ಟಿಜಿಬಿ ಸಾಲದ ನಂತರ | | ನಿವ್ವಳ ಹೆಚ್ಚಳ ಪ್ರತಿಶತ | |
|---|---|---|---|---|---|---|---|---|
| | | | ಪ್ರಮಾಣ ಕ್ವಿಂ | ಮೌಲ್ಯ ರೂ | ಪ್ರಮಾಣ ಕ್ವಿಂ | ಮೌಲ್ಯದಲ್ಲಿ ರೂ | ಪ್ರಮಾಣ ಕ್ವಿಂ | ಮೌಲ್ಯದಲ್ಲಿ ರೂ |
| ೧ | ಸಣ್ಣ/ಅತಿಸಣ್ಣ ರೈತರು | ೭೫ | ೩೨ | ೧೯೫೦ | ೭೦ | ೪೫೫೦೦ | ೩೮ (೧೧೮) | ೨೫೭೦೦ (೩೦೧) |
| ೨ | ಗ್ರಾಮೀಣ ವ್ಯಾಪಾರಿಗಳು | ೨೫ | ೨೦ | ೫೭೮೦ | ೪೦ | ೨೦೦೦೦ | ೨೦ (೧೦೦) | ೧೩೦೦೦ (೨೨೪.೯) |
| | ಒಟ್ಟು | ೧೦೦ | ೨೮ | ೭೩೯೦ | ೬೦ | ೩೯೦೦೦ | ೩೨ (೧೧೨) | ೨೦೮೦೦ (೨೮೧.೩) |

ಬ್ರಾಕೆಟಿನಲ್ಲಿರುವುದು ಶೇಕಡಾವಾರನ್ನು ಪ್ರತಿನಿಧಿಸುತ್ತದೆ.

೫. ವಿವಿಧ ವಲಯಗಳ ವರಮಾನ

ತುಂಗಭದ್ರಾ ಗ್ರಾಮೀಣ ಬ್ಯಾಂಕು ಸಾಲವು ಸಮಾಜದಲ್ಲಿ ದುರ್ಬಲ ವರ್ಗದವರೆಂದರೆ ಸಣ್ಣ/ಅತಿಸಣ್ಣ ರೈತರು, ಭೂರಹಿತ ಕಾರ್ಮಿಕರು, ಗ್ರಾ.ವ್ಯಾ.ಕರಕುಶಲಕರ್ಮಿಗಳು, ಆದ್ಯತಾ ವಲಯದವರ ವರಮಾನದ ಮೇಲೆ ಹೇಗೆ ಪ್ರಭಾವಬೀರಿದೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

೧. ಕೃಷಿ

ಈ ವಲಯವು ಸಾಲದ ಪೂರ್ವದಲ್ಲಿ ೭೯೩ರೂಗಳ ಆದಾಯವನ್ನು ಹೊಂದಿದ್ದು, ಸಾಲದನಂತರ ೩೯,೦೦ರೂಪಾಯಿಗಳಿಗೆ ಹೆಚ್ಚಾಗಿದೆ. ನಿವ್ವಳ ೨೦,೮೦೦ರೂಪಾಯಿಗಳ ಅಧಿಕವಾಗಿರುವುದನ್ನು ಪಟ್ಟಿ ೫ರಲ್ಲಿ ಕಾಣಬಹುದಾಗಿದೆ. ಬ್ಯಾಂಕು ಸಣ್ಣ, ಅತಿಸಣ್ಣ ರೈತರ ವರಮಾನದ ಮೇಲೆ ಪ್ರಭಾವ ಬೀರಿ ಅದರ ಜೀವನಮಟ್ಟ ಸುಧಾರಣೆಗೆ ಕಾರಣವಾಗಿದೆ ಎನ್ನಬಹುದು.

೨. ಕೃಷಿ ಅವಲಂಬಿತ ಭೂರಹಿತ ಕಾರ್ಮಿಕರು

ಈ ಚಟುವಟಿಕೆಗಳಲ್ಲಿ ತೊಡಗಿರುವವರ ಕುಟುಂಬಗಳು ಬಡತನದಿಂದ ಕೂಡಿದ ಕುಟುಂಬಗಳಾಗಿವೆ. ಆಡು, ಕುರಿ, ಮೇಕೆ, ಜವಾರಿ ಆಕಳನ್ನು ಹೊಂದಿರುತ್ತಾರೆ. ಇವುಗಳ ನಿರ್ವಹಣೆಯು ಕೂಡ ಇವರಿಗೆ ಕಠಿಣವಾಗಿರುತ್ತದೆ. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಪಶುಚಿಕಿತ್ಸಾಲಯದ ಕೊರತೆಯಿರುವುದನ್ನು ಕಾಣಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮೀಣ ಬ್ಯಾಂಕು ಅಸ್ತಿತ್ವಕ್ಕೆ ಬಂದನಂತರದಲ್ಲಿ ಭೂರಹಿತ ಕಾರ್ಮಿಕರ ಮನವೊಲಿಸಿ ಸಿಬ್ಬಂದಿಯು ಅವರಿಗೆ ಬೇಕಾದ ಸಾಲಸೌಲಭ್ಯವನ್ನು ಸರ್ಕಾರದ ಕಾರ್ಯಕ್ರಮಗಳ ಮೂಲಕ ಒದಗಿಸಿತು. ಇವರನ್ನು ವರ್ಷಪೂರ್ತಿ ಉದ್ಯೋಗದಲ್ಲಿ ತೊಡಗಿಸಿಕೊಳ್ಳಲು ಹೈನುಗಾರಿಕೆಗೆ ಪ್ರೋತ್ಸಾಹ ನೀಡಿತು. ಇವರಿಗೆ ವಿದೇಶಿ ತಳಿಗಳ ಹಸು, ಎಮ್ಮೆಗಳನ್ನು ಸಾಲದ ಮೂಲಕ ಒದಗಿಸಿಕೊಟ್ಟಿದೆ.

ಬ್ಯಾಂಕು ಇಂತಹ ಫಲಾನುಭವಿಗಳಿಗೆ ೧೫,೦೦೦ರೂಗಳ ಹಸು, ಎಮ್ಮೆ ಸಾಲವನ್ನು ಒದಗಿಸಿದೆ. ಇದಲ್ಲದೆ ರಾಜ್ಯಸರ್ಕಾರ ೭೫೦೦ರೂಗಳ ಸಹಾಯಧನ ನೀಡಿರುವುದರಿಂದ ಫಲಾನುಭವಿಗಳು ಕೇವಲ ೭೫೦೦ರೂಗಳ ಸಾಲಮರುಪಾವತಿ ಮಾಡಿದರೆ ಸಾಲ ತೀರುತ್ತದೆ. ಈ ಪ್ರದೇಶದಲ್ಲಿನ ೨೦ ಫಲಾನುಭವಿಗಳನ್ನು ಸಮೀಕ್ಷಿಸಿದಾಗ ಬ್ಯಾಂಕು ಹೈನುಗಾರಿಕೆಗೆ ಪ್ರೋತ್ಸಾಹ ನೀಡಿದ್ದರಿಂದ ತಮ್ಮ ಬದುಕು ಉತ್ತಮವಾಗಿದೆ. ವಿದೇಶಿ ತಳಿಗಳ ಹಸು, ಎಮ್ಮೆಗಳು ಪ್ರತಿದಿನ ೮ ರಿಂದ ೧೫ ಲೀಟರ್ ಹಾಲನ್ನು ನೀಡುತ್ತವೆ. ನಾವು ೧೦ ರಿಂದ ೧೨ ಲೀಟರ್ ಹಾಲನ್ನು ಡೈರಿಗೆ ಹಾಕುತ್ತೇವೆ. ಪ್ರತಿತಿಂಗಳು ೩೦೦೦ರೂಗಳಿಗಿಂತಲೂ ಅಧಿಕವಾದ ವರಮಾನವನ್ನು ಪಡೆಯುತ್ತೇವೆ. ಜಾನುವಾರುಗಳ ಮೇವು ನಿರ್ವಹಣಾವೆಚ್ಚ, ಪಶುಚಿಕಿತ್ಸೆ ಇನ್ನು ಮುಂತಾದವುಗಳಿಗೆ ಕನಿಷ್ಠವೆಂದರೆ ೯೦೦ರೂಗಳನ್ನು ಖರ್ಚುಮಾಡುತ್ತೇವೆ. ಇನ್ನುಳಿದ ಹಣದಿಂದ ಸುಲಭವಾಗಿ ಜೀವನ ನಿರ್ವಹಣೆ ಸಾಧ್ಯವಾಗಿದೆ ಎಂದಿದ್ದಾರೆ. ಬ್ಯಾಂಕು ನಮಗೆ ಸಾಲ ನೀಡಿಲ್ಲದೆ ಉತ್ತಮ ಮಾರ್ಗದರ್ಶನದ ಮೂಲಕ ಜೀವನ ಸುಗಮವಾಗಿ ನಡೆಯುವುದಲ್ಲದೆ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸಿದೆ ಎಂದು ಮನ ಪೂರ್ವಕವಾಗಿ ಹೇಳುತ್ತಾರೆ. ಈ ಬ್ಯಾಂಕ ಅಸ್ತಿತ್ವದ ಪೂರ್ವದಲ್ಲಿ ಸಾಲವನ್ನು ಲೇವಾದೇವಿಗಾರರು, ಸಾಹುಕಾರರಿಂದ ಅಧಿಕ ಬಡ್ಡಿಧರದಲ್ಲಿ ಪಡೆದು ಅವರಿಂದ ಶೋಷಣೆಗೆ ಒಳಗಾಗುತ್ತಿದ್ದವು. ಇಂದು ಆ ಶೋಷಣೆಯಿಂದ ತಪ್ಪಿಸಿಕೊಂಡಿದ್ದೇವೆ ಎನ್ನುತ್ತಾರೆ. ಇವರ ವರಮಾನ ಸಾಲದ ಪೂರ್ವದಲ್ಲಿ ೫೦೦ರೂಗಳ ವರಮಾನವಿದ್ದು ಸಾಲದ ನಂತರದಲ್ಲಿ ೨೪,೦೦೦ರೂಗಳಿಗೆ ಹೆಚ್ಚಳವಾಗಿರುವುದನ್ನು ಪಟ್ಟಿ ೭ರಲ್ಲಿ ಕಾಣಬಹುದು.

**ಪಟ್ಟಿ ೭**

**ಭೂರಹಿತ ಕಾರ್ಮಿಕರು**

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ |
|---|---|---|---|---|---|
| ೦೧. | ಭೂರಹಿತ ಕಾರ್ಮಿಕರು | ೨೦ | ೫೦೦ | ೨೪೦೦೦ | ೨೩೫೦೦ |

**ಕರಕುಶಲ ಕರ್ಮಿಗಳು/ಸಣ್ಣ ಉದ್ದಿಮೆದಾರರು**

ಗ್ರಾಮೀಣ ಪ್ರದೇಶದಲ್ಲಿ ಸಂಪ್ರದಾಯ ಬದ್ಧವಾಗಿ ಬಂದಂತಹ ಉದ್ದಿಮೆಗಳಾದ ನೂಲುವುದು, ನೇಯುವುದು, ಬುಟ್ಟಿ ಎಣೆಯುವುದು, ಬಡಗಿತನ, ಕಮ್ಮಾರಿಕೆ, ಎಣ್ಣೆಯ ಗಾಣಗಳಿದ್ದವು. ಆದರೆ ಇಂದು ಕೂಡ ಕೆಲವು ಕಸುಬುಗಳು ತಮ್ಮ ಅಸ್ತಿತ್ವ ಉಳಿಸಿಕೊಂಡಿದ್ದು, ಹೊಸದಾಗಿ ಹಿಟ್ಟಿನಗಿರಣಿ, ಹೋಟಲ್, ಬೇಕರಿ, ಶಾಮಿಯಾನ, ವೆಲ್ಡಿಂಗ್‌ಷಾಪು ಇನ್ನು ಮುಂತಾದವುಗಳು ಅಸ್ತಿತ್ವದಲ್ಲಿದೆ. ಇವರುಗಳು ತಮ್ಮ ಉತ್ಪನ್ನಗಳ ಮಾರಾಟದಿಂದ ವರಮಾನಪಡೆಯುತ್ತಾರೆ. ಇವರ ವರಮಾನವು ಗ್ರಾಮೀಣ ಬ್ಯಾಂಕುಗಳ ಸಾಲದ ಪೂರ್ವದಲ್ಲಿ ೪೦೦೦ರೂಗಳಿದ್ದು ಸಾಲದ ನಂತರದಲ್ಲಿ ವರಮಾನವನ್ನು ೩೦,೦೦೦ರೂಗಳಿಗೆ ಹೆಚ್ಚಿಸಿಕೊಂಡಿದ್ದಾರೆ. ಇವರು ಬ್ಯಾಂಕುಗಳಿಂದ ೧೦,೦೦೦ರೂಗಳಿಂದ ೩೫,೦೦೦ರೂಗಳವರೆಗೆ ಸಾಲವನ್ನು ಬ್ಯಾಂಕನಿಂದ ಪಡೆದಿದ್ದಾರೆ. ಈ ಮೊದಲು ಹಣಕಾಸಿನ ನೆರವನ್ನು ಸಾಹುಕಾರರು, ದಲ್ಲಾಳಿಗಳಿಂದ

ಅತ್ಯಧಿಕ ಬಡ್ಡಿಯಧರಕ್ಕೆ ಪಡೆದು ಸಾಲಮರುಪಾವತಿ ಸಾಧ್ಯವಾಗದೇ ತಮ್ಮ ಕೈಗಾರಿಕೆಗಳನ್ನೇ ಮಾರಾಟ ಮಾಡಿಕೊಂಡಿರುವ ಉದಾಹರಣೆಗಳಿವೆ. ಆದರೆ ಬ್ಯಾಂಕ ಸಾಲದ ನಂತರ ನಮ್ಮ ಜೀವನ ಸುಧಾರಿಸಿದೆ ಎಂದಿದ್ದಾರೆ. ಹಳೆ ಸಾಲವನ್ನು ಮರುಪಾವತಿ ಮಾಡಿದರೆ ಹೆಚ್ಚು ಸಾಲ ಸಿಕ್ಕುತ್ತದೆ ಮತ್ತು ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳಿಂದ ಮುಕ್ತವಾಗಿದ್ದೇವೆ ಎಂಬ ಅಭಿಪ್ರಾಯ ಅವರ ಮನದಾಳದಿಂದ ವ್ಯಕ್ತಪಡಿಸುತ್ತಾರೆ.

ಪಟ್ಟಿ ೭

ಸಣ್ಣ ಉದ್ದಿಮೆದಾರರು

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಕರಕುಶಲ ಕರ್ಮಿಗಳು/ಸಣ್ಣ ಉದ್ದಿಮೆದಾರು | ೧೦ | ೪೦೦೦ | ೩೦೦೦೦ | ೨೬೦೦೦ | ೬೫೦ |

ಪಟ್ಟಿ ೭ನ್ನು ಗಮನಿಸಿದಾಗ ಕಾಲಕ್ಕೆ ತಕ್ಕಂತೆ ಹೊಸ ಉದ್ದಿಮೆಗಳನ್ನು ಬ್ಯಾಂಕ ಸಹಕಾರದಿಂದ ೩೦,೦೦೦ರೂಗಳವರೆಗೆ ಹೆಚ್ಚಿಸಿಕೊಂಡಿದ್ದಾರೆಂಬುದು ತಿಳಿದು ಬರುತ್ತದೆ. ನಿವ್ವಳ ೨೬೦೦೦ರೂ ಹೆಚ್ಚಳವಾದರೆ ಪ್ರತಿಶತ ಮೌಲ್ಯ ೬೫೦ಅಧಿಕವಾಗಿರುವುದನ್ನು ಕಾಣಬಹುದು.

### ೪. ಗ್ರಾಮೀಣ ವ್ಯಾಪಾರಿಗಳು

ಗ್ರಾಮೀಣ ಪ್ರದೇಶದಲ್ಲಿನ ವ್ಯವಹಾರಗಳೆಂದರೆ ಕಿರಾಣಿ ವ್ಯಾಪಾರಿ, ಬಾಳೇಹಣ್ಣು ವ್ಯಾಪಾರ, ತೆಂಗಿನಕಾಯಿ, ಹಾಲು, ಹೂವಿನ ವ್ಯಾಪಾರ, ಹೋಟೆಲ್ ವ್ಯಾಪಾರ, ಪ್ರಾಣಿಗಳ ವ್ಯಾಪಾರದ ದಲ್ಲಾಳಿಗಳು ಕಟ್ಟಿಗೆ ವ್ಯಾಪಾರ ಇನ್ನು ಮುಂತಾದ ವ್ಯಾಪಾರಗಳನ್ನು ನಿರ್ವಹಿಸುತ್ತಾರೆ. ಬ್ಯಾಂಕ ಹಣಕಾಸಿನ ಪೂರ್ವದಲ್ಲಿ . ಇವರು ಹಣಕಾಸೇತರ ಸಂಸ್ಥೆಗಳಿಂದ ಸಾಲವನ್ನು ಪಡೆದು ವ್ಯವಹಾರ ನಡೆಸುತ್ತಿದ್ದರು. ಇವರು ಪಡೆದ ಹಣಕ್ಕೆ ಅಧಿಕ ಪ್ರಮಾಣದ ಬಡ್ಡಿಯನ್ನು ಕೊಡುತ್ತಿದ್ದರು. ಆದರೆ ಬ್ಯಾಂಕ ಸ್ಥಾಪನೆಯ ನಂತರದಲ್ಲಿ ಇವರು ತಮ್ಮ ವ್ಯಾಪಾರವನ್ನು ಉತ್ತಮಪಡಿಸಿಕೊಂಡಿದ್ದಾರೆ. ತಮ್ಮ ವ್ಯವಹಾರಕ್ಕೆ ಬೇಕಾದ ಸರಕುಗಳನ್ನು ತಮ್ಮ ಹತ್ತಿರದ ಪಟ್ಟಣದಿಂದ ತಂದು ಅದರ ಮೇಲೆ ಪ್ರತಿಶತ ೨೦ ರಿಂದ ೩೦ರ ವರೆಗೆ ಬೆಲೆಯನ್ನು ಅಧಿಕಗೊಳಿಸಿಕೊಂಡು ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಇದರಿಂದ ತಮ್ಮ ಖರ್ಚುಗಳನ್ನೆಲ್ಲಾ ತೆಗೆದು ಲಾಭವನ್ನು ಮಾಡಿಕೊಳ್ಳುತ್ತಾರೆ. ವಿವಿಧ ರೀತಿಯ ವ್ಯಾಪಾರಸ್ಥರು ೨೦೦೬ ಮತ್ತು ೦೭ರಲ್ಲಿ ೧೫,೦೦೦ರೂಪಾಯಿಗಳಿಂದ ೫೦,೦೦೦ರೂಪಾಯಿಗಳವರೆಗೆ ಸಾಲವನ್ನು ಪಡೆದಿದ್ದಾರೆ ಎಂದು ಬ್ಯಾಂಕಿನ ಲೆಕ್ಕಪತ್ರಗಳು ತಿಳಿಸುತ್ತವೆ. ಬ್ಯಾಂಕಸಾಲದ ಪೂರ್ವದಲ್ಲಿ ಇವರ ವರಮಾನವು ೩೦೦೦ರೂಪಾಯಿಗಳಾಗಿದ್ದು ನಂತರದಲ್ಲಿ ಇವರ ವರಮಾನವು ೨೭,೦೦೦ರೂಪಾಯಿಗಳವರೆಗೆ ಅಧಿಕವಾಗಿದೆ. ಈ ಅಂಶವನ್ನು ಸಮೀಕ್ಷೆ ಸಮಯದಲ್ಲಿ ಕಂಡುಕೊಳ್ಳಲಾಯಿತು. ಇದನ್ನು ಪಟ್ಟಿ ಸಂಖ್ಯೆ ೮ರಲ್ಲಿ ಕಾಣಬಹುದು.

ಪಟ್ಟಿ ೮

ಗ್ರಾಮೀಣ ವ್ಯಾಪಾರಿಗಳು

ರೂಪಾಯಿಗಳಲ್ಲಿ

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | ಪಿಜಿಬಿ ಸಾಲದ ನಂತರ | ನಿವ್ವಳ ಹೆಚ್ಚಳ | ಪ್ರತಿಶತ ಹೆಚ್ಚಳ |
|---|---|---|---|---|---|---|
| ೦೧. | ಗ್ರಾಮೀಣ ವ್ಯಾಪಾರಿಗಳು | ೨೫ | ೩೦೦೦ | ೨೭೦೦೦ | ೨೪೦೦೦ | ೭೦೦ |

ಟಿಜಿಬಿ ಸಾಲದ ಪೂರ್ವದಲ್ಲಿ ಇವರ ವರಮಾನ ಕಡಿಮೆ ಇದ್ದು ಸಾಲದನಂತರದಲ್ಲಿ ೨೭,೦೦೦ರೂ ಅಧಿಕವಾಗಿದೆ. ನಿವ್ವಳ ೨೪,೦೦೦ರೂಗಳಾಗಿದ್ದು ಅದನ್ನು ಶೇಕಡವಾರಿಗೆ ಪರಿವರ್ತಿಸಿದರೆ ೭೦೦ಪಟ್ಟು ಅಧಿಕವಾಗಿರುವುದು ಕಂಡುಬರುತ್ತದೆ. ಇದರಿಂದಾಗಿ ಇವರ ಜೀವನಮಟ್ಟವು ಸುಧಾರಿಸುವುದನ್ನು ಕಾಣಬಹುದು.

ಒಟ್ಟಿನಲ್ಲಿ ನಾಲ್ಕು ವರ್ಗಗಳು ಬ್ಯಾಂಕನ ಸಾಲದ ನಂತರದಲ್ಲಿ ತಮ್ಮ ವರಮಾನ ವೃದ್ಧಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ ಎನ್ನಬಹುದು. ಬ್ಯಾಂಕುಗಳು ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗಾವಕಾಶಗಳ ಸೃಷ್ಟಿ ಮತ್ತು ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಮಹತ್ವ ನೀಡಿ ಆ ಪ್ರದೇಶಗಳ ಬೆಳವಣಿಗೆಗೆ ಸಕಾರಾತ್ಮಕವಾಗಿ ಸ್ಪಂದಿಸಿವೆ ಎಂಬುದನ್ನು ಕಾಣಬಹುದು.

**೬. ಸಾಂಸ್ಥಿಕೇತರ ಹಣಕಾಸಿನ ಮೂಲಗಳು**

ಇದರ ಮೂಲಗಳಾದ ಹಳ್ಳಿಯಸಾಹುಕಾರರು, ಲೇವಾದೇವಿಗಾರರು, ವ್ಯಾಪಾರಸ್ಥರು, ಕಮಿಷನ್ ಏಜೆಂಟರು, ಸ್ನೇಹಿತರು, ಬಂಧುಗಳು ಮತ್ತಿತರು ಆಗಿದ್ದಾರೆ. ಇವರು ಗ್ರಾಮೀಣ ಪ್ರದೇಶದಲ್ಲಿ ಸಾಲವನ್ನು ನೀಡುವ ವಿಷಯದಲ್ಲಿ ಮಹತ್ತರವಾದ ಪಾತ್ರವನ್ನು ಬಹುದೀರ್ಘಾಕಾಲಾವಧಿಯಿಂದ ವಹಿಸಿಕೊಂಡಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನಪದರು ಒಂದಕ್ಕಿಂತ ಹೆಚ್ಚಿನ ಸಾಂಸ್ಥಿಕೇತರ ಹಣಕಾಸಿನ ಸಂಸ್ಥೆಯಿಂದ ಸಾಲ ಪಡೆದಿದ್ದಾರೆ. ಪ್ರಾ.ಗ್ರಾ.ಬ್ಯಾಂಕಿನ ಸ್ಥಾಪನೆಯ ಪೂರ್ವದಲ್ಲಿ ಇವರ ಪ್ರಭಾವವು ಅಧಿಕವಾಗಿದ್ದು, ಇಂದು ಈ ಸಂಸ್ಥೆಗಳಿಂದ ಪಡೆಯುವ ಸಾಲವು ಗಣನೀಯ ಪ್ರಮಾಣದಲ್ಲಿ ಕಡಿಮೆಯಾಗಿದೆ ಎಂಬುದನ್ನು ಪಟ್ಟಿ ಸಂಖ್ಯೆ ೯ರಲ್ಲಿ ಕಾಣಬಹುದು.

ಪಟ್ಟಿ ೯

ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲದ ಮೂಲಗಳು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | A | B | C | D | A | B | C | D | A | B | C | D |
| ೦೧. | ಸಣ್ಣ/ಅತಿಸಣ್ಣ ರೈತರು | ೭೦ | ೬೦ | ೬ | .. | .. | ೬ | ೨ | .. | .. | ೬ | ೨ | .. | .. |
| ೦೨. | ಗ್ರಾ.ಕರಕುಶಲ ಉದ್ದಿಮೆದಾರರು | ೨೫ | ೧೫ | ೬ | ೨ | .. | ೨ | ೧ | .. | .. | ೨ | ೧ | .. | .. |
| ೦೩. | ಗ್ರಾ.ವ್ಯಾಪಾರಸ್ಥರು | ೧೦ | .. | ೬ | ೨ | .. | .. | ೨ | .. | .. | .. | ೨ | .. | .. |
| ೦೪. | ಭೂ.ರಹಿತ ಕಾರ್ಮಿಕರು | ೧೫. | ೩ | .. | ೪ | .. | ೨ | .. | ೨ | .. | ೨ | .. | ೨ | |
| | | ೧೨೦ | | | | | | | | | | | | |

**A** ಲೇವಾದೇವಿಗಾರರು **B** ವ್ಯಾಪಾರಸ್ಥರು **C** ಸ್ನೇಹಿತರು/ಬಂಧುಗಳು **D** ಇತರೆ

**೭. ಹಣಕಾಸಿನ ಸಂಸ್ಥೆಗಳ ಮೂಲಕ ಸಾಲವನ್ನು ಪಡೆದಿರುವುದು**

ಹಣಕಾಸಿನ ಸಂಸ್ಥೆಗಳಾದ ಪ್ರಾಥಮಿಕ ಸಹಕಾರಿ ಸಂಘಗಳಿಂದ, ವಾಣಿಜ್ಯ ಬ್ಯಾಂಕುಗಳಿಂದ ಭೂ ಅಭಿವೃದ್ಧಿ ಬ್ಯಾಂಕು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಂದ ಪತ್ತನ್ನು ಪಡೆದಿರುತ್ತಾರೆ. ಯಾವ ಫಲಾನುಭವಿಗಳು ಸಹಕಾರ ಸಂಘಗಳಿಂದ ಮತ್ತು ವಾಣಿಜ್ಯ ಬ್ಯಾಂಕಿನಿಂದ ಸಾಲ ಪಡೆಯುತ್ತಿದ್ದರೋ ಅವರು ಪ್ರಾಗ್ರಾ ಬ್ಯಾಂಕುಗಳು ಸ್ಥಾಪನೆಯಾದ ನಂತರ ಈ ಮೇಲಿನ ಹಣಕಾಸು ಸಂಸ್ಥೆಯಿಂದ ಸಾಲ ಪಡೆಯುವುದನ್ನು ನಿಲ್ಲಿಸಲಿಲ್ಲ. ಆದರೆ ಸಂಸ್ಥೆಗಳಿಂದ ಪಡೆಯುವ ಸಾಲದ ಪ್ರಮಾಣ ಮಾತ್ರ ಕಡಿಮೆಯಾಗಿದೆ. ಆದರೆ ಪ್ರಾ.ಗ್ರಾ.ಬ್ಯಾಂಕುಗಳಿಂದ ಪಡೆಯುವ ಸಾಲದ ಪ್ರಮಾಣ ಅಧಿಕವಾಗಿದೆ. ಈ ಕ್ಷೇತ್ರದಲ್ಲಿನ ಸಮೀಕ್ಷೆಗೆ ಒಳಗಾದ ೧೨೦ ಫಲಾನುಭವಿಗಳು ಗರಿಷ್ಠ ಪ್ರಮಾಣದ ಸಾಲವನ್ನು ಪಡೆದುಕೊಂಡು ತಮ್ಮ ಕೆಲಸಕಾರ್ಯಗಳಿಗೆ ಬಳಸಿಕೊಂಡಿದ್ದಾರೆ. ಇದನ್ನು ಪಟ್ಟಿ ೧೦ರಲ್ಲಿ ಕಾಣಬಹುದು.

## ಪಟ್ಟಿ ೧೦

## ಸಾಂಸ್ಥಿಕ ಹಣಕಾಸಿನ ಮೂಲಗಳು

| ಕ್ರ.ಸಂ. | ವರ್ಗಗಳು | ಕುಟುಂಬಗಳ ಸಂಖ್ಯೆ | ಪಿಜಿಬಿ ಸಾಲದ ಪೂರ್ವ | | | | ಪಿಜಿಬಿ ಸಾಲದ ನಂತರ | | | | ಬದಲಾವಣೆ | | | |
|---|---|---|---|---|---|---|---|---|---|---|---|---|---|---|
| | | | E | F | G | H | E | F | G | H | E | F | G | H |
| ೦೧ | ಸ್ಣ/ಅತಿಸ್ಣ ರೈತರು | ೨೦ | ೫ | ೨ | .. | .. | .. | .. | .. | ೨೦ | .. | .. | .. | ೨೦ |
| ೦೨. | ಗ್ರಾ.ಕರಕುಶಲ ಉದ್ದಿಮೆದಾರರು | ೨೫ | ೧ | .. | .. | .. | .. | .. | .. | ೨೫ | .. | .. | .. | ೨೫ |
| ೦೩. | ಗ್ರಾ.ವ್ಯಾಪಾರಸ್ಥರು | ೧೦ | .. | ೨ | .. | .. | .. | .. | .. | ೧೦ | .. | .. | .. | ೧೦ |
| ೦೪. | ಭೂ.ರಹಿತ ಕಾರ್ಮಿಕರು | ೧೫ | .. | .. | .. | .. | .. | .. | .. | ೧೫ | .. | .. | .. | ೧೫ |

E ಪ್ರಾ.ಸ.ಸಂಘ F ವಾಣಿಜ್ಯ ಬ್ಯಾಂಕುಗಳು G ಭೂರಹಿತ ಕಾರ್ಮಿಕರು H ಪ್ರಾ.ಗ್ರಾ.ಬ್ಯಾಂಕುಗಳು

ಕಳೆದ ೩೦ ವರ್ಷಗಳ ಅವಧಿಯಲ್ಲಿ ಈ ಬ್ಯಾಂಕುಗಳು ಸಮಾಜದಲ್ಲಿನ ದುರ್ಬಲ ವರ್ಗದವರ ಮತ್ತು ಆದ್ಯತಾ ವಲಯಕ್ಕೆ ಸಾಕಷ್ಟು ಪ್ರಮಾಣದ ಪತ್ತನ್ನು ಒದಗಿಸಿ ಅವರ ಅಭಿವೃದ್ಧಿಗೆ ಪ್ರಯತ್ನಿಸಿವೆ. ಭಾರತ ಸರ್ಕಾರ ಭಂಡಾರಿ ಸಮಿತಿ ವರದಿಯಂತೆ, ಈ ಬ್ಯಾಂಕುಗಳು ತಮ್ಮ ಉದ್ದೇಶಗಳನ್ನು ವಾಣಿಜ್ಯೀಕರಿಸಿ ವಾಣಿಜ್ಯ ಬ್ಯಾಂಕುಗಳ ರೀತಿಯಲ್ಲಿ ಕಾರ್ಯಗಳನ್ನು ಬ್ಯಾಂಕಿನಲ್ಲಿ ನಿರ್ವಹಿಸಿ ಎಲ್ಲ ರೀತಿಯ ಸಾಲ ಸೌಲಭ್ಯಗಳನ್ನು ಈ ಪ್ರದೇಶದಲ್ಲಿ ಒದಗಿಸಿಕೊಡಲು ಪ್ರಯತ್ನಿಸುತ್ತಾ ಇವೆ.

ಇದರಿಂದಾಗಿ ಈ ಪ್ರದೇಶದಲ್ಲಿ ಉದ್ಯೋಗಾವಕಾಶಗಳು ಸೃಷ್ಟಿಯಾಗಿ ಬಡತನ ಮತ್ತು ನಿರುದ್ಯೋಗ ಪ್ರಮಾಣವನ್ನು ಕಡಿಮೆಮಾಡಲು ಯತ್ನಿಸಿದೆ ಎನ್ನಬಹುದು. ಅಧ್ಯಯನ ಕೈಗೊಂಡಂತಹ ಪಿಜಿಬಿ ಬ್ಯಾಂಕ ಸೋಗಿ ಶಾಖೆಯು ಎಲ್ಲಾ ಕಾರ್ಯಕ್ರಮಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಸಮಗ್ರ ಗ್ರಾಮೀಣಾಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿದೆ.

### ಬ್ಯಾಂಕಿನ ಬಗ್ಗೆ ಜ್ಞಾನ ಪಡೆದವರು

ಈ ಬ್ಯಾಂಕ ಶಾಖೆಯ ವ್ಯಾಪ್ತಿಯಲ್ಲಿ ೧೨೦ ಕುಟುಂಬಗಳನ್ನು ಸಮೀಕ್ಷಿಸಿದಾಗ ಅವರು ಬ್ಯಾಂಕ ಬಗ್ಗೆ ತಮ್ಮ ಅಭಿಪ್ರಾಯ ತಿಳಿಸಿದ್ದಾರೆ. ೭೦ ಕುಟುಂಬಗಳು ಬ್ಯಾಂಕ ಸಿಬ್ಬಂದಿಯಿಂದ ೧೫ ಕುಟುಂಬಗಳು ಗ್ರಾಮಸಭೆಯಿಂದ ೧೬ ಕುಟುಂಬಗಳು ಗ್ರಾಮದ ಮುಖಂಡರಿಂದ ಇನ್ನು ೧೯ ಕುಟುಂಬಗಳು ಸ್ವಂತ ತಿಳುವಳಿಕೆಯಿಂದ ಬ್ಯಾಂಕ ಬಗ್ಗೆ ಮಾಹಿತಿಯನ್ನು ಪಡೆದಿದ್ದಾರೆ. ಅದು ಅನುಕ್ರಮವಾಗಿ ೫೮.೩%

೧೨.೫೦% ೧೩% ೧೪.೧೬% ಶೇಕಡವಾರಾಗಿದೆ. ಗ್ರಾಮೀಣ ಬ್ಯಾಂಕು ಸಿಬ್ಬಂದಿಯು ಗರಿಷ್ಠ ಪ್ರಮಾಣದಲ್ಲಿ ಗ್ರಾಮೀಣ ಜನಪದರಿಗೆ ಬ್ಯಾಂಕ ಬಗ್ಗೆ ಮಾಹಿತಿ ಒದಗಿಸಿ ಅವರಲ್ಲಿ ಬ್ಯಾಂಕ ಬಗ್ಗೆ ತಿಳುವಳಿಕೆ ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ ಎಂಬುದನ್ನು ಪಟ್ಟಿ ೧೧ರಲ್ಲಿ ಕಾಣಬಹುದು.

**ಗ್ರಾಮೀಣ ಬ್ಯಾಂಕ ಬಗ್ಗೆ ಜನಪದರ ಅಭಿಪ್ರಾಯಗಳು**

ಸೋಗಿ ಬ್ಯಾಂಕ ವ್ಯಾಪ್ತಿಯಲ್ಲಿ ಪ್ರಾತಿನಿಧಿಕವಾಗಿ ಆಯ್ಕೆಮಾಡಿಕೊಂಡ ೧೨೦ ಕುಟುಂಬಗಳಲ್ಲಿ ೧೧೮ ಕುಟುಂಬಗಳು ಬ್ಯಾಂಕಿನ ಬಗ್ಗೆ ತೃಪ್ತಿ ವ್ಯಕ್ತಪಡಿಸಿದ್ದಾರೆ. ಅದು ಪ್ರತಿಶತ ೯೮.೩೩ರಷ್ಟು ಆಗುತ್ತದೆ. ಇನ್ನೆರಡು ಕುಟುಂಬಗಳು ಪ್ರಾದೇಶಿಕ ಗ್ರಾಮೀಣ ಬ್ಯಾಂಕನವರು ಎಲ್ಲಾ ರೀತಿಯ ದಾಖಲೆಗಳನ್ನು ಕೇಳುತ್ತಾರೆ. ತಾವು ದಾಖಲೆಗಳಿಗಾಗಿ ಕಂದಾಯ ಅಧಿಕಾರಿಗಳ ಮತ್ತು ಇತರೆ ಬ್ಯಾಂಕುಗಳ ನಿರಪೇಕ್ಷಣ ಪತ್ರ ಪಡೆಯಬೇಕಾಗುತ್ತದೆ. ಹಾಗಾಗಿ ಸ್ವಲ್ಪ ಅತೃಪ್ತಿ ವ್ಯಕ್ತಪಡಿಸಿದ್ದಾರೆ. ಕಿಸಾನ್ ಕ್ರೆಡಿಟ್ ಕಾರ್ಡುಗಳು ಅಸ್ತಿತ್ವಕ್ಕೆ ಬಂದ ನಂತರದಲ್ಲಿ ದಾಖಲೆಗಳನ್ನು ಪ್ರತಿ ಐದುವರ್ಷಕ್ಕೆ ಒಂದು ಸಾರಿಯಂತೆ ಬೇಕಾಗಿರುವುದರಿಂದ ಈಗ ಆ ಕಷ್ಟವಿಲ್ಲವೆನ್ನುತ್ತಾರೆ.

## ಪಟ್ಟಿ ೧೧

### ಈ ಬ್ಯಾಂಕ ಬಗ್ಗೆ ಜ್ಞಾನ ಪಡೆದವರು/ಅವರ ಅಭಿಪ್ರಾಯ

| ಕ್ರ. ಸಂಖ್ಯೆ | ವರ್ಗಗಳು | ಕು ಸಂಖ್ಯೆ | ಗ್ರಾಮದ ಮುಖಂಡರಿಂದ | ಸ್ವಂತ | ಸ್ನೇಹಿತು | ಬ್ಯಾಂಕ್ ಸಿಬ್ಬಂದಿ | ಗ್ರಾಮ ಸಭಾ | ಬಂಧು ಗಳಿಂದ | ಬ್ಯಾ.ತೃಪ್ತಿ | | ಸಾ.ಪ. ತೊಂದರೆಗಳು | | ಅಧಿಕಾರಿಗಳ ಬಗ್ಗೆ ತೃಪ್ತಿ | | ಬಳ್ಳಿ ಮುಂದುವರಿಸ ಬೇಕೆ | |
|---|---|---|---|---|---|---|---|---|---|---|---|---|---|---|---|---|
| | | | | | | | | | ಹೌದು | ಇಲ್ಲ | ಹೌದು | ಇಲ್ಲ | ಹೌದು | ಇಲ್ಲ | ಬೇಕು | ಬೇಡ |
| ೦೧. | ಸಣ್ಣ/ಅತಿಸಣ್ಣ ರೈತರು | ೭೦ | ೧೦ | ೫ | .. | ೫೦ | ೫ | .. | ೬೯ | ೧ | ೬೯ | ೧ | ೭೦ | ೦೦ | ೭೦ | .. |
| ೦೨. | ಕುಶಲ/ಗ್ರಾಮೀಣ ಉದ್ದಿಮೆದಾರರು | ೨೫ | ೩ | ೭ | .. | ೧೦ | ೩ | .. | ೨೫ | .. | ೨೫ | .. | ೨೫ | .. | ೨೫ | .. |
| ೦೩. | ಗ್ರಾಮೀಣ ವ್ಯಾಪಾರಸ್ಥರು | ೧೦ | ೨ | ೧ | .. | ೫ | ೨ | .. | ೧೦ | .. | ೧೦ | .. | ೧೦ | .. | ೧೦ | .. |
| ೦೪. | ಭೂರ.ಕಾರ್ಮಿಕರು | ೧೫ | ೧ | ೪ | .. | ೫೫ | ೫ | .. | ೧೪ | ೧ | ೧೪ | ೧ | ೧೫ | .. | ೧೫ | .. |
| | ಒಟ್ಟು | ೧೨೦ | ೧೬ | ೧೭ | .. | ೭೦ | ೧೫ | .. | ೧೧೮ | ೦೨ | ೧೧೮ | ೦೨ | ೧೨೦ | .. | ೧೨೦ | .. |

**ಪಿಜಿಬಿ ಬ್ಯಾಂಕನ ಸ್ಥಿತಿ**

ಬ್ಯಾಂಕುಗಳ ಪರಿಸ್ಥಿತಿ ಸುಧಾರಿಸಬೇಕಿದೆ ಸಾಲಪಡೆದವರು ನಿಗದಿತ ವೇಳೆಗೆ ಸಾಲ ಮರುಪಾವತಿ ಮಾಡಿದರೆ ಬ್ಯಾಂಕಿನ ಹಣಕಾಸಿನ ಪರಿಸ್ಥಿತಿ ಸುಧಾರಿಸುತ್ತದೆ. ಸಾಲ ಪಡೆದವರು ತಮ್ಮ ವರಮಾನ ಅಧಿಕವಾದಾಗ ಸಾಲಮರುಪವಾತಿಮಾಡದೇ ಇದ್ದರೆ ಅವಧಿಮೀರಿದ ಸಾಲದ ಪ್ರಮಾಣವು ಅಧಿಕವಾಗುತ್ತದೆ.

ಸಮೀಕ್ಷೆಗೊಳಪಡಿಸಿದ ನಾಲ್ಕು ವರ್ಗಗಳಲ್ಲಿ ಅವಧಿಮೀರಿದ ಸಾಲದ ಬಾಕಿಯನ್ನು ಹೊಂದಿದ್ದಾರೆ. ಈ ಪ್ರದೇಶವು ಮೊದಲಿನಿಂದಲೂ ಖುಷ್ಕಿ ಪ್ರದೇಶವಾಗಿದ್ದು ಮಳೆಯನ್ನು ಅವಲಂಬಿಸಿದೆ. ಕೆಲವು ಕುಟುಂಬಗಳಿಗೆ ಕೃಷಿ ಮತ್ತು ಕೃಷಿ ಅವಲಂಬಿತ ಚಟುವಟಿಕೆಗಳಿಂದ ಬರುವ ವರಮಾನವು ತಮ್ಮ ದಿನನಿತ್ಯದ ಜೀವನ ನಿರ್ವಹಣೆಯನ್ನು ಪೂರೈಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಇವರ ಸಾಲದ ಬಾಕಿಯ ಪ್ರಮಾಣವು ಅಧಿಕವಾಗಿದೆ. ಕೆಲವು ಕುಟುಂಬಗಳು ತಾವು ಸಾಲದ ಮೂಲಕ ಪಡೆದ ಎತ್ತು, ಎಮ್ಮೆ, ಹಸುಗಳ ನಿರ್ವಹಣೆ ಸಾಧ್ಯವಾಗದೇ ಮಾರಾಟ ಮಾಡಿರುತ್ತಾರೆ. ಇಲ್ಲವೆ ಮರಣ ಹೊಂದಿರುತ್ತವೆ. ಏಕೆಂದರೆ ಅವುಗಳ ನಿರ್ವಹಣೆಗೆ ಬೇಕಾದ ಸೌಲಭ್ಯಗಳು ದೊರೆಯದ ಕಾರಣವಾಗಿದೆ. ಈ ಪ್ರದೇಶವು ನಿರಂತರವಾಗಿ ಬರಗಾಲದಿಂದ ತತ್ತರಿಸಿದ್ದರಿಂದ ಎಲ್ಲಾ ಚಟುವಟಿಕೆಗಳನ್ನು ಪೂರ್ಣ ಪ್ರಮಾಣದಲ್ಲಿ ಕೈಗೊಳ್ಳಲು ಸಾಧ್ಯವಾಗದೇ ಇರುವುದು ವರಮಾನದ ಪ್ರಮಾಣದ ಇಳಿಕೆಗೆ ಕಾರಣವಾಗಿರಬಹುದು. ಈ ಬ್ಯಾಂಕಿನ ಅಧಿಕಾರಿಗಳು ತಮ್ಮ ಶಾಖೆಯಲ್ಲಿ ಒಟ್ಟಾರೆಯಾಗಿ ಸಾಲಮರುಪಾವತಿಯ ಪ್ರಮಾಣ ಪ್ರತಿಶತ ೮೦ರಷ್ಟಿದೆ ಬಾಕಿಯ ಪ್ರಮಾಣ ಪ್ರತಿಶತ ೨೦ ರಷ್ಟು ಇದೆ ಎಂಬುದನ್ನು ಅಂಕಿಅಂಶಗಳ ಮೂಲಕ ತಿಳಿಸಿದ್ದಾರೆ.

ಸೋಗಿ ಶಾಖೆಯಲ್ಲಿ ಪತ್ತನ್ನು ಪಡೆದಂತಹ ಕೆಲವು ಕುಟುಂಬಗಳು ಪತ್ತನ್ನು ತೀರಿಸಲಾಗಿದೆ ಆತ್ಮಹತ್ಯೆಮಾಡಿಕೊಂಡ ಉದಾಹರಣೆಗಳಿವೆ, ಕೆಲವರು ಉದ್ದೇಶಪೂರ್ವಕವಾಗಿ ಸಾಲ ತೀರಿಸುವುದಿಲ್ಲ. ಅಂತಹ ಸಂದರ್ಭದಲ್ಲಿ ಬ್ಯಾಂಕಿನ ಅಧಿಕಾರಿಗಳು ತಮ್ಮ ಸಿಬ್ಬಂದಿಯೊಂದಿಗೆ ಆ ಮನೆ ಮುಂದೆ ಧರಣೆ ನಡೆಸಿದ ಉದಾಹರಣೆಗಳಿವೆ. ಗ್ರಾಮೀಣ ಜನಪದರಿಗೆ ಸಾಲ ಮರುಪಾವತಿಯ ಅರಿವಿದೆ. ಅವರು ನಿಗದಿತ ಅವದಿಯೊಳಗಡೆ ಸಾಲ ಮರುಪಾವತಿಮಾಡಿದರೆ ಪುನಃ ಹೊಸ ಸಾಲ ತೆಗೆದುಕೊಳ್ಳುವ ಪರಿಸ್ಥಿತಿಯನ್ನು ಸೃಷ್ಟಿಸಿಕೊಂಡಿದ್ದಾರೆ. ಬ್ಯಾಂಕು ಇತರೆ ಎಲ್ಲಾ ಬ್ಯಾಂಕುಗಳಿಗಿಂತಲೂ, ಖಾಸಗಿ ಹಣಕಾಸಿನ ಸಂಸ್ಥೆಗಳಿಗಿಂತಲೂ ಕಡಿಮೆ ಬಡ್ಡಿಯಧರದಲ್ಲಿ ಸಾಲವನ್ನು ಒದಗಿಸಿಕೊಟ್ಟಿದ್ದಾರೆ. ಇತರ ಹಣಕಾಸು ಸಂಸ್ಥೆಗಳಿಂದ ನಮ್ಮನ್ನು ಮುಕ್ತಿಗೊಳಿಸಿದ್ದಾರೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಶಾಖೆಯು ೨೦೦೬ ಸೆಪ್ಟೆಂಬರ್ ಹೊತ್ತಿಗೆ ೩೯೮.೨೯ಲಕ್ಷ ರೂಪಾಯಿಗಳ ಅಲ್ಪಾವಧಿ, ಮಧ್ಯಮಾವಧಿ, ಕೃಷಿಸಾಲವನ್ನು, ೩.೬೭ಲಕ್ಷರೂಗಳ ಕರಕುಶಲ ಕರ್ಮಿಗಳ ಸಾಲ ಇನ್ನಿತರ ಚಟುವಟಿಕೆಗಳಲ್ಲಿ ೪೬.೮೩ಲಕ,ರೂ ಒಟ್ಟು ೪೬೬.೭೫ಲಕ್ಷ ರೂಪಾಯಿಗಳ ಸಾಲವನ್ನು ತನ್ನ ವ್ಯಾಪ್ತಿಯಲ್ಲಿ ವಿತರಿಸಿದೆ. ಬ್ಯಾಂಕಿನ ಸಿ.ಡಿ. ಅನುಪಾತವು ೧೫೫ರಷ್ಟಿದೆ.

ಈ ಶಾಖೆಯು ಕೂಡ ರಾಜ್ಯ/ಕೇಂದ್ರ ಸರ್ಕಾರದಿಂದ ಸಾಲಮನ್ನಾ ಕಾರ್ಯ ಕ್ರಮದಲ್ಲಿ ಸಣ್ಣ/ಅತಿಸಣ್ಣ ರೈತರು, ಭೂರಹಿತ ಕಾರ್ಮಿಕರು ಹಾಗು ಇನೀತರ ವರ್ಗಗಳವರು ಸಾಲಮನ್ನಾ ಪಡೆದಿದ್ದಾರೆ. ಬ್ಯಾಂಕನ್ನು ಮುಂದುವರೆಸುವ ಬಗ್ಗೆ ೧೦೦ಕ್ಕೆ ನೂರರಷ್ಟು ಸಮ್ಮತಿ ವ್ಯಕ್ತಪಡಿಸಿದ್ದಾರೆ. ಈ ಬ್ಯಾಂಕ್ ನಮ್ಮ ಪಾಲಿನ ದೇವರು ಎಂದು ಮನಪೂರ್ವಕವಾಗಿ ಸಮೀಕ್ಷಾ ಸಮಯದಲ್ಲಿ ತಿಳಿಸಿದ್ದಾರೆ.

ಜಿಲ್ಲೆಯು ೭ ತಾಲ್ಲೂಕುಗಳಲ್ಲಿ ೨ ತಾಲ್ಲೂಕುಗಳು ನಿರಾವರಿ ಪ್ರದೇಶಗಳಾಗಿವೆ. ೨ ತಾಲ್ಲೂಕು ಅರೆ ನೀರಾವರಿ, ಇನ್ನುಳಿದ ಮೂರು ತಾಲ್ಲೂಕುಗಳು ಸಂಪೂರ್ಣವಾಗಿ ಮಳೆಯಾಧಾರಿತ ಪ್ರದೇಶಗಳಾಗಿವೆ. ನೀರಾವರಿ ಮತ್ತು ಅರೆ ನೀರಾವರಿ ವ್ಯಾಪ್ತಿಯಲ್ಲಿ ರೈತರು ವಾರ್ಷಿಕವಾಗಿ ಎರಡು ಬೆಳೆಯನ್ನು ಬೆಳೆಯುತ್ತಾರೆ. ಹಾಗಾಗಿ ಗ್ರಾಮೀಣ ಬ್ಯಾಂಕುಗಳ ಮೂಲಕ ವಾರ್ಷಿಕವಾಗಿ ಎರಡು ಬೆಳೆಸಾಲವನ್ನು ಪಡೆದಿದ್ದಾರೆ ಎಂಬುದನ್ನು ಸಮೀಕ್ಷಾ ಸಮಯದಲ್ಲಿ ಹಾಗೂ ಬ್ಯಾಂಕು ದಾಖಲೆಗಳಿಂದ ಕಂಡುಕೊಳ್ಳಬಹುದಾಗಿದೆ.

ಬಳ್ಳಾರಿ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಬಾಣಾಪುರ ಶಾಖೆಯು ೨೦೦೭ ಮಾರ್ಚ್ ೨೬ ಕೋಟಿ ರೂ ಹೆಚ್ಚು ಹಣಕಾಸಿನ ವಹಿವಾಟನ್ನು ನಿರ್ವಹಿಸಿದೆ. ಇದರಲ್ಲಿ ಸಣ್ಣ/ಅತಿಸಣ್ಣ ರೈತರ ಜೊತೆಗೆ ಮಧ್ಯಮ ಪ್ರಮಾಣದ ಹಾಗು ದೊಡ್ಡ ರೈತರಿಗೆ ೧೮.೬೦ ಕೋಟಿ ರೂಪಾಯಿಗಳ ಸಾಲ ಮತ್ತು ಮುಂಗಡಗಳನ್ನು ನೀಡಿದ್ದಾರೆ. ಬೆಳೆ ಒತ್ತೆಸಾಲವನ್ನು ೬ ಕೋಟಿಗೂ ಅಧಿಕವಾಗಿ ನೀಡಿದ್ದಾರೆ. ಗ್ರಾಮೀಣ ಗೋದಾಮಗಳ ಬೇಡಿಕೆಯನ್ನನುಸರಿಸಿ ೩೨ ಗೋದಾಮು ಸಾಲ ನೀಡಿದ ಹೆಗ್ಗಳಿಕೆಗೆ ಬ್ಯಾಂಕಿನದ್ದಾಗಿದೆ. ನಂತರದ ಸ್ಥಾನದಲ್ಲಿ ಇನ್ನಿತರ ಚಟುವಟಿಕೆಗಳಿಗೆ ಆದ್ಯತೆ ನೀಡಿದ್ದಾರೆ.

ಸಂಡೂರು ತಾಲೂಕಿನ ದರೋಜಿ ಗ್ರಾಮೀಣ ಬ್ಯಾಂಕು ಶಾಖೆಯು ೨೦೦೭ರ ಮಾರ್ಚ್ ೮.೩೩ ಕೋಟಿ ವ್ಯವಹಾರವನ್ನು ಕಳೆದ ಸಾಲಿನಲ್ಲಿ ನೀಡಿದೆ. ಇನ್ನುಳಿದ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುತ್ತಾ ಜನಸಾಮಾನ್ಯರ ಬ್ಯಾಂಕಾಗಿ ಕಾರ್ಯನಿರ್ವಹಿಸುತ್ತದೆ.

ಶಿರುಗಪ್ಪಾ ತಾಲ್ಲೂಕಿನ ರಾರಾವಿ ಶಾಖೆಯು ೪.೧೫ ಕೋಟಿ ರೂಪಾಯಿಗಳ ವ್ಯವಹಾರ ನಿರ್ವಹಿಸಿದ್ದು ಕೃಷಿಗೆ ಹೆಚ್ಚಿನ ಆದ್ಯತೆ ನೀಡಿದೆ. ಇಲ್ಲಿಯು ಕೂಡ ರೈತರ ಬೆಳೆಯನ್ನು ಒತ್ತೆ ಇಟ್ಟುಕೊಂಡು ಸಾಲವನ್ನು ನೀಡಿ ರೈತರಹಿತ ಕಾಪಾಡುತ್ತಾರೆ. ಇನ್ನುಳಿದ ಚಟುವಟಿಕೆಗಳಿಗೂ ಪ್ರೋತ್ಸಾಹನೀಡುತ್ತಾ ಬಂದಿದೆ.

ಹಗರಿಬೊಮ್ಮನಹಳ್ಳಿ ತಾಲ್ಲೂಕು ಹಂಪಾಸಾಗರ ಶಾಖೆಯು ೬.೮೦ ಕೋಟಿ ವಹಿವಾಟನ್ನು ನಿರ್ವಹಿಸಿದೆ. ಕೃಷಿಗೆ ೧.೫. ಕೋಟಿ ರೂಗಳನ್ನು ಸಾಲ ನೀಡಿದ್ದು ನಂತರ ಹೈನುಗಾರಿಕೆಯಲ್ಲಿ ತೊಡಗಿಕೊಂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಹೆಚ್ಚಿನ ಹಣಕಾಸು ಸೌಲಭ್ಯವನ್ನು ಕಲ್ಪಿಸಿದೆ. ಎಲ್ಲಾ ವರ್ಗದವರಿಗೂ ಬೇಕಾದ ಎಲ್ಲಾ ರೀತಿಯ ಕಾರ್ಯಗಳನ್ನು ನಿರ್ವಹಿಸಿದೆ.

ಕೂಡ್ಲಿಗಿ ತಾಲ್ಲೂಕು ೧೫ ಕೋಟಿ ರೂಪಾಯಿಗಳ ವ್ಯವಹಾರ ನಿಶ್ಚಯಿಸುತ್ತಾ ಬಂದಿದೆ. ಕೃಷಿಗೆ ೬.೨೦ ಕೋಟಿ ರೂಪಾಯಿಗಳನ್ನು ಹೈನುಗಾರಿಕೆ ಮತ್ತು ಸ್ವ ಸಹಾಯ ಗುಂಪುಗಳಿಗೆ ಹೆಚ್ಚಿನ ಆದ್ಯತೆ ನೀಡಿದ್ದಾರೆ. ಇನ್ನುಳಿದ ಚಟುವಟಿಕೆಗಳಿಗೆ ಕೃಷಿಯಷ್ಟು ಹಣಕಾಸನ್ನು ಒದಗಿಸಿಲ್ಲ.

ಹೊಸಪೇಟೆ ತಾಲೂಕು ಮರಿಯಮ್ಮನಹಳ್ಳಿ ಶಾಖೆಯು ೪.೯೪ ಕೋಟಿ ವ್ಯವಹಾರವನ್ನು ನಿರ್ವಹಿಸಿದ್ದು ಕೃಷಿಗೆ ೩.೧೧ ಕೋಟಿ ರೂಪಾಯಿಗಳ ಸಾಲವನ್ನು ನೀಡಿದೆ. ನಂತರ ಹೈನುಗಾರಿಕೆ ಇನ್ನಿತರ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಅತಿಹೆಚ್ಚು ಹಣಕಾಸಿನ ನೆರವನ್ನು ಪಡೆದಿದ್ದಾರೆ.

೭. ಹಗಡಲಿ ತಾಲ್ಲೂಕಿನ ಸೋಗಿ ಶಾಖೆಯು ೮.೪೮ಕೋಟಿ ವ್ಯವಹಾರ ನಿರ್ವಹಿಸಿದ್ದು ಕೃಷಿಗೆ ಹೆಚ್ಚಿನ ಆದ್ಯತೆ ನೀಡಿದ್ದಾರೆ. ಇಲ್ಲಿನ ಅನೇಕ ತಾಂಡಗಳು ಹೆಚ್ಚಿನ ಪ್ರಯೋಜನವನ್ನು ಬ್ಯಾಂಕಿನಿಂದ ಪಡೆದಿದ್ದಾರೆ. ಜಿಲ್ಲೆಯಲ್ಲಿ ಒಟ್ಟು ೬೫ ಪ್ರಗತಿ ಗ್ರಾಮೀಣ ಬ್ಯಾಂಕುಗಳಿದ್ದು, ೪೮ ಶಾಖೆಗಳು ಗ್ರಾಮೀಣ ಪ್ರದೇಶಗಳಲ್ಲಿ ೮ಶಾಖೆಗಳು ನಗರ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುತ್ತವೆ. ೨೦೦೯ ಮಾರ್ಚ್ ವೇಳೆಗೆ ಜಿಲ್ಲೆಯಲ್ಲಿ ೯೧,೯೦೫ ಲಕ್ಷ ರೂಗಳ ಠೇವಣಿಯನ್ನು ೬೧,೨೪೩ಲಕ್ಷ ರೂಪಾಯಿಗಳ ಸಾಲ ಮತ್ತು ಮುಂಗಡಗಳನ್ನು ಒದಗಿಸಿದೆ, ಸಿ.ಡಿ. ಅನುಪಾತವು ೬೬.೪೪ರಷ್ಟಿದೆ. ಈ ಎಲ್ಲಾ ಶಾಖೆಗಳಲ್ಲಿ ೨೦೦೮-೦೯ರಲ್ಲಿ ೧೪,೩೬೭ ಕೆ.ಸಿ.ಸಿ. ಖಾತೆಗಳಿದ್ದು, ೯,೯೩೨ಲಕ್ಷ ರೂಪಾಯಿಗಳ ಸಾಲವನ್ನು ಒದಗಿಸಿದೆ. ಹಾಗೆಯೇ ಸ್ವಸಹಾಯ ಗುಂಪುಗಳು ೨೯೦೫ ಖಾತೆಗಳಿಗೆ ೧೫೨೦ಲಕ್ಷ ರೂಗಳ ಸಾಲ ಒದಗಿಸಿದೆ. ಜಿಲ್ಲೆಯಲ್ಲಿರುವ ಎಲ್ಲಾ ಶಾಖೆಗಳಲ್ಲಿ ರೈತ ಕುಟುಂಬಗಳನ್ನು ಸ್ಥಾಪಿಸಿ ರೈತರಿಗೆ ಬೇಕಾದ ಕೃಷಿ ಮಾಹಿತಿಯನ್ನು ಒದಗಿಸುತ್ತಾ ಬಂದಿದೆ. ಒಟ್ಟಾರೆ ೭ ಜಿಲ್ಲೆಗಳ ವ್ಯಾಪ್ತಿಯಲ್ಲಿ ಅತಿ ಹೆಚ್ಚು ಹಣಕಾಸಿನ ನಿರ್ವಹಣೆಯನ್ನು ಮಾಡಿದಂತಹ ಕೀರ್ತಿ ಜಿಲ್ಲೆಗೆ ಸಲ್ಲುತ್ತದೆ.

ಜಿಲ್ಲೆಯಲ್ಲಿ ಒಟ್ಟು ೬೫ ಪ್ರಗತಿ ಗ್ರಾಮೀಣ ಬ್ಯಾಂಕುಗಳಿದ್ದು ೪೮ ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿ ೮ ಶಾಖೆಗಳು, ನಗರ ಪ್ರದೇಶಗಳಲ್ಲಿ ೯ಶಾಖೆಗಲು, ಪಟ್ಟಣಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಪ್ರತಿಶತ ೭೫ರಷ್ಟು ಶಾಖೆಗಳು ಗ್ರಾಮೀಣ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿವೆ. ೨೦೦೯ಮಾರ್ಚ್ ವೇಳೆಗೆ ಜಿಲ್ಲೆಯಲ್ಲಿ ೯೧,೯೦೫ಲಕ್ಷ ರೂಗಳ ಠೇವಣಿಯನ್ನು ೬೧,೨೪೩ಲಕ್ಷ ರೂಗಳ ಸಾಲ ಮತ್ತು ಮುಂಗಡಗಳನ್ನು ಒದಗಿಸಿದೆ. ಸಿಡಿ ಅನುಪಾತವು ೬೬.೪೪ರಷ್ಟಿದೆ. ಎಲ್ಲಾ ಶಾಖೆಗಳಲ್ಲಿ ೨೦೦೮-೦೯ರಲ್ಲಿ ೧೪,೩೬೭ ಕಿಸಾನ್ ಕ್ರೆಡಿಟ್ ಕಾರ್ಡುಗಳಿದ್ದು ೯,೯೩೨ ಲಕ್ಷ ರೂಗಳ ಸಾಲ ಒದಗಿಸಿದೆ. ಸ್ವಸಹಾಯ ಗುಂಪುಗಳ ೨೯೦೫ ಖಾತೆಗಳಿಗೆ ೧,೫೨೦ಲಕ್ಷ ರೂಗಳ ಸಾಲ ಒದಗಿಸಿದೆ. ಜಿಲ್ಲೆಯಲ್ಲಿರುವ ಎಲ್ಲಾ ಶಾಖೆಗಳಲ್ಲಿ ರೈತ ಕೂಟಗಳನ್ನು ಸ್ಥಾಪಿಸಿ ಅವರಿಗೆ ಬೇಕಾದ ಮಾಹಿತಿಯನ್ನು ಒದಗಿಸಿದೆ. ಜಿಲ್ಲೆಯ ಎಲ್ಲಾ ಶಾಖೆಗಳು ಸಂಪೂರ್ಣ ಗಣಕೀಕೃತವಾಗಿವೆ. ಒಟ್ಟಾರೆ ೭ ಜಿಲ್ಲೆಗಳ ವ್ಯಾಪ್ತಿಯಲ್ಲಿ ಅತಿ ಹೆಚ್ಚು ಹಣಕಾಸಿನ ನಿರ್ವಹಣೆ ಮಾಡಿದ ಕೀರ್ತಿ ಜಿಲ್ಲೆಗೆ ಸಲ್ಲುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ ಜಿಲ್ಲೆಯಲ್ಲಿರುವ ಎಲ್ಲಾ ಶಾಖೆಗಳು ಕೃಷಿ, ಸಣ್ಣ ಕೈಗಾರಿಕೆ, ಸಣ್ಣ ವ್ಯಾಪಾರ, ಹೈನುಗಾರಿಕೆ, ಶಿಕ್ಷಣ, ಗೃಹನಿರ್ಮಾಣ, ಗೋದಾಮುಗಳ ನಿರ್ಮಾಣ, ಆದ್ಯತೇತರ ವಲಯಗಳಾದ ವಾಹನಗಳ ಸಾಲ ಇನ್ನು ಮುಂತಾದ ಚಟುವಟಿಕೆಗಳಿಗೆ ಬೇಕಾದ ಅಭಿವೃದ್ಧಿ ಮತ್ತು

ಅನುಭೋಗಿಗಳ ಸಾಲವನ್ನು ವಿತರಿಸುತ್ತಾ ಗ್ರಾಮೀಣ ಪ್ರದೇಶದ ಏಳಿಗೆಗೆ ಪ್ರಯತ್ನಿಸುತ್ತಾ ಬಂದಿದೆ. ಬ್ಯಾಂಕುಗಳಲ್ಲಿನ ವ್ಯವಸ್ಥಾಪಕ ಸಿಬ್ಬಂದಿಯು ಜನಸಾಮಾನ್ಯರೊಂದಿಗೆ ಬೆರೆತು ಅವರಿಗೆ ಬೇಕಾದ ಮಾರ್ಗದರ್ಶನ, ಮಾಹಿತಿ ಇನ್ನುಳಿದ ಅಂಶಗಳಿಂದ ಜನಪದರ ಮನಸ್ಸನ್ನು ಸೂರೆಗೊಂಡಿದೆ ಎನ್ನಬಹುದು. ಜಿಲ್ಲೆಯಲ್ಲಿನ ನೀರಾವರಿ/ಅರೆನೀರಾವರಿ/ಮಳೆಆಧಾರಿತ ಕೃಷಿಯ ಜನಪದರಿಗೆ ಅವಶ್ಯಕವಾದ ಸಾಲವನ್ನು ವಿತರಿಸಿ, ಗ್ರಾಮೀಣ ಪ್ರದೇಶದಲ್ಲಿ ಹಣಕಾಸು ಕೊರತೆ ಮತ್ತು ನಿರುದ್ಯೋಗದ ಪ್ರಮಾಣವನ್ನು ಕಡಿಮೆಮಾಡುತ್ತಾ ಸಾಗಿದೆ. ಹಾಗಾಗಿ ಜಿಲ್ಲೆಯಲ್ಲಿ ಈ ಬ್ಯಾಂಕು ಶಾಖೆಗಳು ಜನಸಾಮಾನ್ಯರ ಮನಸ್ಸನ್ನು ಗೆದ್ದು, ಆಪತ್ಕಾಲದ ದೇವರು ಎಂಬ ಬಿರುದನ್ನು ಪಡೆದಿದೆ ಎನ್ನಬಹುದು.

# ಅಧ್ಯಾಯ ೫

## ಪ್ರಗತಿ ಗ್ರಾಮೀಣ ಬ್ಯಾಂಕುಗಳು, ಇತರೆ ಬ್ಯಾಂಕುಗಳು ಮತ್ತು ಆಧುನಿಕತೆ

**ಪಿ.ಜಿ.ಬಿ. ಮತ್ತು ಇತರೆ ಬ್ಯಾಂಕುಗಳು**

ಈ ಜಿಲ್ಲೆಯಲ್ಲಿ ಸಾಂಸ್ಥಿಕ ಮತ್ತು ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳು ಜನರ ಹಣಕಾಸಿನ ಅವಶ್ಯಕತೆಗಳನ್ನು ಪೂರೈಸುತ್ತಿದ್ದವು. ಆದರೆ ಹಣಕಾಸು ಸಂಸ್ಥೆಗಳು ಅಸ್ತಿತ್ವಕ್ಕೆ ಬಂದನಂತರದಲ್ಲಿ ಸಾಂಸ್ಥಿಕೇತರ ಹಣಕಾಸಿನ ಸಂಸ್ಥೆಗಳ ಪ್ರಭಾವವು ಕಡಿಮೆಯಾಗಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳ ಪ್ರಭಾವ ಹೆಚ್ಚಾಯಿತು. ಸಾಂಸ್ಥಿಕ ಹಣಕಾಸು ಸಂಸ್ಥೆಗಳಾದ ಸಹಕಾರ ಸಂಘಗಳು ರಾಷ್ಟ್ರದಲ್ಲಿ ೧೯೦೪ರಲ್ಲಿ ಅಸ್ತಿತ್ವಕ್ಕೆ ಬಂದು ರೈತರ ಪ್ರಗತಿಗೆ ಪ್ರಯತ್ನಿಸಿತು. ಅದರಂತೆ ಖಾಸಗಿ ವಾಣಿಜ್ಯ ಬ್ಯಾಂಕುಗಳು ಕೂಡ ರಾಷ್ಟ್ರದಲ್ಲಿ ಅಸ್ತಿತ್ವಕ್ಕೆ ಬಂದವು. ಈ ಬ್ಯಾಂಕುಗಳು ರಾಷ್ಟ್ರೀಕರಣವಾಗುವವರೆಗೂ ವಾಣಿಜ್ಯ ಚಟುವಟಿಕೆಗಳಿಗೆ ಹೆಚ್ಚು ಆದ್ಯತೆ ನೀಡಿದ್ದವು. ೧೯೬೯ರಲ್ಲಿ ರಾಷ್ಟ್ರದಲ್ಲಿ ೧೪ ವಾಣಿಜ್ಯ ಬ್ಯಾಂಕುಗಳು ಹಾಗೂ ೧೯೮೦ರಲ್ಲಿ ಪುನಃ ೬ ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕರಣಗೊಂಡವು. ರಾಷ್ಟ್ರೀಕರಣಗೊಂಡನಂತರ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳಿಗೆ ಮಾನ್ಯತೆ ಕೊಡಲು ಆರಂಭಿಸಿದವು. ಆದರೆ ವಾಣಿಜ್ಯ ಬ್ಯಾಂಕುಗಳು ಪಟ್ಟಣ ಆಧಾರಿತ ಮನೋಭಾವದಿಂದಾಗಿ ಬಹುದೂರದ ಹಳ್ಳಿಗಳಿಗೆ ಹಣಕಾಸಿನ ನೆರವಿನಿಂದ ವಂಚಿತವಾದವು. ಹಾಗೆಯೇ ಸಹಕಾರ ಸಂಘಗಳು ಅಸ್ತಿತ್ವದಲ್ಲಿದ್ದರೂ ಕೂಡ ಹಣಕಾಸಿನ ನೆರವು ನೀಡುವಲ್ಲಿ ವಿಫಲವಾದವು.

ರಾಷ್ಟ್ರದಲ್ಲಿ ಜನಸಂಖ್ಯೆ ಹೆಚ್ಚಿದ ಹಾಗೆ, ಜನಸಾಮಾನ್ಯರ ಅವಶ್ಯಕತೆಗಳು ಹೆಚ್ಚಾದವು. ಆ ಅವಶ್ಯಕತೆಗಳನ್ನು ಪೂರೈಸಲು ಹಣಕಾಸಿನ ನೆರವು ಅಗತ್ಯವಾಯಿತು. ಈ ಎರಡು ಹಣಕಾಸಿನ ಸಂಸ್ಥೆಗಳು ಸಮಾಜದಲ್ಲಿನ ಎಲ್ಲಾ ವರ್ಗಗಳ ಹಣಕಾಸಿನ ನೆರವನ್ನು ಪೂರ್ಣಗೊಳಿಸಲು ಸಾಧ್ಯವಾಗಲಿಲ್ಲ. ಈ ಅಂಶವನ್ನು ಮನಗಂಡ ಕೇಂದ್ರಸರ್ಕಾರ ಜನಸಾಮಾನ್ಯರ ಅವಶ್ಯಕತೆಯನ್ನು ಪೂರೈಸಲು ಒಂದು ಹೊಸ ರೀತಿಯ ಹಣಕಾಸಿನ ಸಂಸ್ಥೆಯನ್ನು ಆರಂಭಿಸಲು ಒಂದು ಸಮಿತಿಯನ್ನು ನೇಮಿಸಿತು. ಆ ಸಮಿತಿಯು ತನ್ನ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರದಲ್ಲಿ ಭಾರತ ಸರ್ಕಾರ ಅಂಗೀಕರಿಸಿ, ೧೯೭೫ರಲ್ಲಿ ಗ್ರಾಮೀಣ ಜನರ ಹಣಕಾಸಿನ ನೆರವನ್ನು ನೀಡಬಲ್ಲಂತಹ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಿತು. ಈ ಸಂಸ್ಥೆಯು ಸಮಾಜದಲ್ಲಿನ ದುರ್ಬಲ ವರ್ಗದವರ ಆದ್ಯತೆ/ಆದ್ಯತೇತರ ವಲಯಗಳಿಗೂ ಹಣಕಾಸಿನ ನೆರವನ್ನು ನೀಡುವಂತಹ ಸಂಸ್ಥೆಯಾಗಿ ಅಸ್ತಿತ್ವಕ್ಕೆ ಬಂದಿತು.

ಪ್ರಸ್ತುತ ಸನ್ನಿವೇಶದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಸಾಂಸ್ಥಿಕ/ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳು ಕಾರ್ಯನಿರ್ವಹಿಸುತ್ತಿವೆ. ಸಾಂಸ್ಥಿಕೇತರ ಹಣಕಾಸಿನ ಪ್ರಮಾಣವು ಇಂದು ಬಹಳಷ್ಟು ಕಡಿಮೆಯಾಗಿದೆ. ಆದರೆ ಸಹಕಾರ ಸಂಘಗಳು, ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಗ್ರಾಮೀಣ ಜನರ ಹಣಕಾಸಿನ ಅವಶ್ಯಕತೆಯನ್ನು ಪೂರೈಸಲು ಪ್ರಯತ್ನಿಸುತ್ತಿವೆ.

ಬಳ್ಳಾರಿ ಜಿಲ್ಲೆಯಲ್ಲಿ ೩೧.೦೩.೨೦೦೬ರಲ್ಲಿ ೧೨೯ವಾಣಿಜ್ಯ ಬ್ಯಾಂಕುಗಳು, ೬೫ ಗ್ರಾಮೀಣ ಬ್ಯಾಂಕುಗಳು, ೧೪೭ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಹಣಕಾಸಿನ ವಹಿವಾಟನ್ನು ನಿರ್ವಹಿಸುತ್ತಿವೆ. ಆದರೆ ಗ್ರಾಮೀಣ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು ಅಸ್ತಿತ್ವದಲ್ಲಿರುವ ಪ್ರದೇಶದಲ್ಲಿಯು ಕಾರ್ಯನಿರ್ವಹಿಸುತ್ತಿವೆ. ಸಹಕಾರ ಸಂಘಗಳು ಗ್ರಾಮೀಣ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿವೆ.

ಜಿಲ್ಲೆಯಲ್ಲಿ ಸಹಕಾರ ಸಂಘಗಳು ೨೦೦೫-೦೬ರಲ್ಲಿ ೩೯,೪೯೨ ಕಿಸಾನ್ ಕ್ರೆಡಿಟ್ ಕಾರ್ಡುಗಳನ್ನು ವಿತರಿಸಿದೆ. ಆ ಮೂಲಕ ೬,೧೪೮.೮೬ಲಕ್ಷ ರೂಪಾಯಿಗಳ ಸಾಲವನ್ನು ಜಿಲ್ಲೆಯಾದ್ಯಂತ ರೈತರಿಗೆ ಒದಗಿಸಿದೆ. ಇದೇ ಕಾಲಾವಧಿಯಲ್ಲಿ ಗ್ರಾಮೀಣ ಬ್ಯಾಂಕುಗಳು ೧೦,೨೦೮ಲಕ್ಷ ರೂಪಾಯಿಗಳ ಸಾಲವನ್ನು ಕಿಸಾನ್ ಕ್ರೆಡಿಟ್ ಕಾರ್ಡುಗಳ ಮೂಲಕ ವಿತರಿಸಿದೆ. ಈ ಎರಡು ಹಣಕಾಸಿನ ಸಂಸ್ಥೆಗಳನ್ನು ತುಲನೆಮಾಡಿದಾಗ ಸಹಕಾರ ಸಂಘಗಳಿಂದಲೂ ಗ್ರಾಮೀಣ ಬ್ಯಾಂಕುಗಳು ಪ್ರತಿಶತ ೧೬೬ರಷ್ಟು ಅಧಿಕ ಸಾಲ ವಿತರಿಸಿರುವುದನ್ನು ಕಾಣಬಹುದು. ಈ ಅಂಶದಿಂದ ಕಂಡುಬರುವುದೇನೆಂದರೆ ಗ್ರಾಮೀಣ ಪ್ರದೇಶದ ಕೃಷಿಕರು ಅಧಿಕ ಪ್ರಮಾಣದಲ್ಲಿ ಗ್ರಾಮೀಣ ಬ್ಯಾಂಕುಗಳನ್ನು ಅವಲಂಬಿಸಿದ್ದಾರೆ ಎಂಬುದನ್ನು ಕಂಡುಕೊಳ್ಳಬಹುದು.

ರಾಜ್ಯಸರ್ಕಾರವು ಬೆಳೆ ವಿಮೆ ಯೋಜನೆಯನ್ನು ಈ ಎರಡು ಹಣಕಾಸಿನ ಸಂಸ್ಥೆಗಳ ಮೂಲಕ ಜಾರಿಗೆ ತಂದಿತು. ರಾಜ್ಯ ಸರ್ಕಾರದ ನಿರ್ದೇಶನದಂತೆ ಶೇಂಗಾ ಮತ್ತು ಹತ್ತಿ ಬೆಳೆಗೆ 'ಬೆಳೆ ವಿಮೆ'ಯನ್ನು ಜಾರಿಗೊಳಿಸಲಾಯಿತು. ಫಲಾನುಭವಿಗಳು ಈ ಎರಡು ಹಣಕಾಸಿನ ಸಂಸ್ಥೆಗಳಿಂದ ಪ್ರಯೋಜನ ಪಡೆದಿದ್ದಾರೆ. ಬಳ್ಳಾರಿ ಜಿಲ್ಲೆಯ ಹಣಕಾಸು ಸಂಸ್ಥೆಗಳು ಸ್ವ ಸಹಾಯ ಗುಂಪುಗಳಿಗೂ ಹಣಕಾಸಿನ ನೆರವನ್ನು ಒದಗಿಸಿವೆ. ಸಹಕಾರ ಬ್ಯಾಂಕುಗಳು ೩೧.೩.೨೦೦೭ರ ಕೊನೆಗೆ ೨೦೩೫ ಗುಂಪುಗಳಿಗೆ ೧೦೦೪.೫೦ ಲಕ್ಷರೂಪಾಯಿಗಳ ಸಾಲದ ನೆರವನ್ನು ಒದಗಿಸಿವೆ. ಗ್ರಾಮೀಣಬ್ಯಾಂಕುಗಳು ೨೭೪೭ ಗುಂಪುಗಳಿಗೆ ೧೦೦೬ಲಕ್ಷ ರೂಪಾಯಿಗಳ ಹಣಕಾಸಿನ ನೆರವನ್ನು ಒದಗಿಸಿವೆ. ಇವೆರಡು ಸಂಸ್ಥೆಗಳ ಹಣಕಾಸಿನ ನೆರವನ್ನು ತುಲನೆ ಮಾಡಿದಾಗ ಗ್ರಾಮೀಣ ಬ್ಯಾಂಕುಗಳ ಸಹಕಾರ ಬ್ಯಾಂಕುಗಳಿಗಿಂತ ಅಧಿಕ ಪ್ರಮಾಣದಲ್ಲಿ ಸಾಲ ವಿತರಿಸಿರುವುದು ಕಂಡುಬರುತ್ತದೆ. ಗ್ರಾಮೀಣ ಜನತೆಯ ಅಭಿವೃದ್ಧಿಗೆ ಗ್ರಾಮೀಣ ಬ್ಯಾಂಕುಗಳು ಕಟುಬದ್ಧವಾಗಿ ನಿಂತಿವೆ ಎಂಬುದನ್ನು ಅಂಕಿಅಂಶಗಳಿಂದ ಕಂಡುಕೊಳ್ಳಬಹುದು.

೨೦೦೬-೦೭ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರವು ರೈತರಿಗೆ ಪ್ರತಿಶತ ೪ ಬಡ್ಡಿಯ ದರದಲ್ಲಿ ಸಾಲ ನೀಡುವ ಯೋಜನೆಯನ್ನು ಸಹಕಾರ ಬ್ಯಾಂಕುಗಳು/ಸಂಘಗಳ ಮೂಲಕ ಜಾರಿಗೆ ತಂದಿತು. ಈ ಸೌಲಭ್ಯ

ಗ್ರಾಮೀಣ ಬ್ಯಾಂಕುಗಳಲ್ಲಿ ಕೆಲವೇ ವರ್ಗಗಳಿಗೆ ಮಾತ್ರ ಸೀಮಿತವಾಗಿತ್ತು. ಆದಕಾರಣ ಈ ಅವಧಿಯಲ್ಲಿ ಅಧಿಕ ಪ್ರಮಾಣದ ರೈತರು ಸಹಕಾರ ಸಂಘಗಳ ಮೂಲಕ ಸಾಲ ಪಡೆದಿದ್ದಾರೆ. ಆದರೆ ಗ್ರಾಮೀಣ ಬ್ಯಾಂಕುಗಳು ವಿಧಿಸುವ ಬಡ್ಡಿಯ ದರದ ಪ್ರಮಾಣವು ಪ್ರತಿಶತ ೬ ರಿಂದ ೭ರಷ್ಟಿದೆ. ಮೂಲತಃ ಪ್ರತಿಶತ ೯ರಷ್ಟು ಇರುವುದಕ್ಕೆ ಕೇಂದ್ರಸರ್ಕಾರ ಪ್ರತಿಶತ ೨ರಷ್ಟು ಸಹಾಯ ಧನ ನೀಡುವುದರಿಂದ ಬಡ್ಡಿಯ ಧರ ಕಡಿಮೆಯಾಗಿದೆ.

ಗ್ರಾಮೀಣ ಭಾಗದ ರೈತರ ಮತ್ತೊಂದು ಕೊಡುಗೆಯೆಂದರೆ ಯಾವ ರೈತರು ೧.೧.೨೦೦೬ ರಿಂದ ೩೧.೧೨.೨೦೦೭ರ ಅವಧಿಯಲ್ಲಿ ಸಹಕಾರಿ ಬ್ಯಾಂಕುಗಳ ಮೂಲಕ ಪಡೆದಂತಹ ಅಲ್ಪಾವಧಿ ಬೆಳೆಸಾಲವು ಪ್ರತಿ ಸದಸ್ಯರಿಗೆ ೨೫,೦೦೦ರೂಗಳ ಗರಿಷ್ಠ ಮಿತಿಯೊಳಗಿರುವುದನ್ನು ಸಾಲ ಮನ್ನಾ ಮಾಡಲಾಗಿದೆ. ಇದರ ಪ್ರತಿಫಲವನ್ನು ಜಿಲ್ಲೆಯಾದ್ಯಂತ ಬಹಳಷ್ಟು ರೈತರು ಪಡೆದಿದ್ದಾರೆ. ಅದೇ ಕಾಲಾವಧಿಯಲ್ಲಿ ಈ ಸೌಲಭ್ಯ ಗ್ರಾಮೀಣ ಬ್ಯಾಂಕುಗಳಿಗೆ ಇರಲಿಲ್ಲ. ಆದರೆ ೨೦೦೮ ಏಪ್ರಿಲ್ ತಿಂಗಳ ನಂತರ ಈ ಸೌಲಭ್ಯವನ್ನು ಗ್ರಾಮೀಣ ಬ್ಯಾಂಕುಗಳಿಗೂ ಕೇಂದ್ರಸರ್ಕಾರದ ನಿರ್ದೇಶನದಂತೆ ಜಾರಿಗೆ ತಂದಿದೆ. ೨೦೦೮ರ ಏಪ್ರಿಲ್‌ನಂತರ ಸಣ್ಣ/ಅತಿಸಣ್ಣ ರೈತರ ಸಾಲ ಸಂಪೂರ್ಣ ಮತ್ತು ದೊಡ್ಡ ರೈತರ ಸಾಲ ೨೫,೦೦೦/-ರೂಗಳ ವರೆಗೆ ಮನ್ನಾಮಾಡಲಾಗಿದೆ. ಈ ಮನ್ನಾದ ಸೌಲಭ್ಯವನ್ನು ಬಹುತೇಕವಾಗಿ ದುರ್ಬಲ ವರ್ಗದ ಜನಪದರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ಪಡೆದಿದ್ದಾರೆ ಎನ್ನುವುದು ಗಮನಾರ್ಹವಾಗಿದೆ. ಹೀಗಾಗಿ ಸಹಕಾರ ಸಂಘಗಳ ಮತ್ತು ಗ್ರಾಮೀಣ ಬ್ಯಾಂಕುಗಳ ಮೂಲಕ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲವನ್ನು ಪಡೆಯಲು ರೈತರು ಪ್ರಯತ್ನಿಸುತ್ತಾರೆ. ಅವರಿಗೆ ಭವಿಷ್ಯದಲ್ಲೂ ಕೂಡ ಇದೇ ರೀತಿ ಸಾಲಮನ್ನಾ ಆಗಬಹುದೆಂಬ ದೃಷ್ಟಿಯೂ ಇದೆ.

ಸಹಕಾರಿ ಹಣಕಾಸಿನ ಸಂಸ್ಥೆಗಳು ಕೃಷಿಕರಿಗೆ, ಆದ್ಯತಾ ವಲಯಕ್ಕೆ ಹೆಚ್ಚಿನ ಆದ್ಯತೆ ನೀಡುತ್ತವೆ. ಆದರೆ ಗ್ರಾಮೀಣ ಬ್ಯಾಂಕುಗಳು ಆದ್ಯತಾ ವಲಯ ಮತ್ತು ಆದ್ಯತೇತರ ವಲಯಗಳಿಗೂ ಹಣಕಾಸಿನ ನೆರವನ್ನು ನೀಡುತ್ತವೆ. ಈ ಎರಡು ಹಣಕಾಸಿನ ಸಂಸ್ಥೆಗಳ ಮೂಲ ಉದ್ದೇಶ ಜನಪದರ ಜೀವನ ಮಟ್ಟವನ್ನು ಸುಧಾರಿಸುವುದಾಗಿದೆ. ಹಾಗೆಯೇ ಇವೆರಡೂ ಸಂಸ್ಥೆಗಳು ಆ ನಿಟ್ಟಿನಲ್ಲಿ ಪ್ರಯತ್ನಿಸುತ್ತವೆ. ಅಧ್ಯಯನಕ್ಕೆ ಆಯ್ಕೆಮಾಡಿಕೊಂಡಂತಹ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಕಾರಿ ಸಂಘಗಳು ಮತ್ತು ಗ್ರಾಮೀಣ ಬ್ಯಾಂಕುಗಳು ವಿತರಿಸಿದ ಸಾಲದ ಪ್ರಮಾಣವನ್ನು ತುಲನಾತ್ಮಕವಾಗಿ ನೋಡಲಾಗಿದೆ.

ಹೂವಿನಹಡಗಲಿ ತಾಲ್ಲೂಕಿನ ಸೋಗಿ ಕ್ಷೇತ್ರದಲ್ಲಿ ಸಹಕಾರ ಸಂಘ ಮತ್ತು ಗ್ರಾಮೀಣ ಬ್ಯಾಂಕು ರೈತರಿಗೆ ವಿತರಿಸಿದ ಸಾಲದ ಪ್ರಮಾಣವನ್ನು ಕಂಡುಕೊಳ್ಳಲಾಗಿದೆ. ಸೋಗಿ ಸಹಕಾರ ಸಂಘದಿಂದ ೨೪೯ಕೆಸಿಸಿ ಖಾತೆಗಳಿಗೆ ೫೫,೫೪,೦೦೦ ರೂಪಾಯಿಗಳನ್ನು ಹಾಗೆಯೇ ಗ್ರಾಮೀಣ ಬ್ಯಾಂಕ್ ಸೋಗಿ ಶಾಖೆ ೧ ಕೋಟಿ ೫೦ ಲಕ್ಷ ರೂಪಾಯಿಗಳನ್ನು ೪೩೬ ಕೆಸಿಸಿ ಖಾತೆಗಳಿಗೆ ವಿತರಿಸುವುದನ್ನು ಬ್ಯಾಂಕುಗಳ ಅಂಕಿ ಅಂಶಗಳ ಮೂಲಕ ಕಂಡುಕೊಳ್ಳಬಹುದಾಗಿದೆ. ಅದು ಪ್ರತಿಶತ ೩.೨೪ರಷ್ಟು ಅಧಿಕ ಪ್ರಮಾಣದಲ್ಲಿ ಸಾಲ

ವಿತರಿಸಿರುವುದನ್ನು ಕಾಣಬಹುದು. ಇದರಿಂದಾಗಿ ಗ್ರಾಮೀಣ ಪ್ರದೇಶದಲ್ಲಿ ಗ್ರಾಮೀಣ ಬ್ಯಾಂಕು ಅತ್ಯಧಿಕ ಪ್ರಮಾಣದಲ್ಲಿ ಸಾಲ ವಿತರಿಸುವುದರ ಜೊತೆಗೆ ಗ್ರಾಮೀಣ ಜನಪದರ ವಿಶ್ವಾಸಕ್ಕೆ ಕಾರಣವಾಗಿದೆ ಎನ್ನಬಹುದು. ಸಹಕಾರ ಸಂಘಗಳಲ್ಲಿ ಹೆಚ್ಚಾಗಿ ದೊಡ್ಡ ರೈತರು ಸಾಲವನ್ನು ಪಡೆದರೆ, ಈ ಗ್ರಾಮೀಣ ಬ್ಯಾಂಕುಗಳು ಸಣ್ಣ/ಅತಿಸಣ್ಣ ರೈತರಿಗೆ, ಹೆಚ್ಚಿನ ಗಮನಹರಿಸಿ ಸಾಲವನ್ನು ಒದಗಿಸಿ ಅವರ ಜೀವನ ಮಟ್ಟ ಸುಧಾರಿಸಲು ಯತ್ನಿಸಿದೆ ಎನ್ನಬಹುದು. ಕೂಡ್ಲಿಗಿ ತಾಲ್ಲೂಕಿನ ಹೊಸಹಳ್ಳಿಯಲ್ಲಿ ಸಹಕಾರ ಸಂಘಗಳು ೧೯೯೮ ಕೆಸಿಸಿ ಖಾತೆಗಳಿಗೆ ೨ ಕೋಟಿ, ೬೫,೫೫೦ ರೂಪಾಯಿಗಳ ಸಾಲವನ್ನು ವಿತರಿಸಿವೆ. ಹಾಗೆಯೇ ಗ್ರಾಮೀಣ ಬ್ಯಾಂಕು ಸಹ ೫೦೦ ಕೆಸಿಸಿ ಖಾತೆಗೆ ೬ ಕೋಟಿ ೨೦ ಲಕ್ಷ ರೂಪಾಯಿಗಳ ಸಾಲವನ್ನು ವಿತರಿಸಿರುವುದನ್ನು ಬ್ಯಾಂಕುಗಳ ದಾಖಲೆಗಳಿಂದ ಕಂಡುಕೊಳ್ಳಬಹುದು. ಇದರಿಂದ ಸ್ಪಷ್ಟವಾಗುವುದೇನೆಂದರೆ ಸಹಕಾರ ಸಂಸ್ಥೆಗಳಿಗಿಂತಲೂ ಗ್ರಾಮೀಣಬ್ಯಾಂಕುಗಳು ಪ್ರತಿಶತ ೩೦೮ ಅಧಿಕ ಪ್ರಮಾಣದಲ್ಲಿ ಸಾಲವನ್ನು ವಿತರಿಸಿದೆ. ಅದರಿಂದ ಸಹಕಾರ ಸಂಘಗಳಿಗಿಂತಲೂ ಗ್ರಾಮೀಣ ಬ್ಯಾಂಕುಗಳು ಅತ್ಯಧಿಕ ಪ್ರಮಾಣದಲ್ಲಿ ಸಾಲ ವಿತರಿಸುವುದನ್ನು ಕಾಣಬಹುದು. ಗ್ರಾಮೀಣ ಜನತೆ ಗ್ರಾಮೀಣ ಬ್ಯಾಂಕನ್ನು ತಮ್ಮ ಉದ್ದಾರಕ್ಕಾಗಿ ಬಂದಿದೆ ಎಂದು ನಂಬಿದ್ದಾರೆ. ಸಹಕಾರ ಸಂಘಗಳಲ್ಲಿ ದೊಡ್ಡ ರೈತರು, ಪ್ರಭಾವಿ ವ್ಯಕ್ತಿಗಳು ತಮ್ಮ ಪ್ರಭಾವವನ್ನು ಬೀರಿ ಸಾಲ ಪಡೆಯಲು ಯತ್ನಿಸುತ್ತಾರೆ. ಆದರೆ ಕೂಡ್ಲಿಗಿ ತಾಲ್ಲೂಕಿನಲ್ಲಿರುವ ಹೊಸಹಳ್ಳಿಯಲ್ಲಿರುವ ಬ್ಯಾಂಕು ಜನಸಾಮಾನ್ಯರಿಗೆ ಹತ್ತಿರದ ಬ್ಯಾಂಕಾಗಿ ಕಾರ್ಯನಿರ್ವಹಿಸುವುದರಿಂದ, ಜನಪದರು ಹೆಮ್ಮೆಯಿಂದ ನಮ್ಮ ಮನೆಯ ಬ್ಯಾಂಕು ಎಂದು ಹೇಳಿಕೊಳ್ಳುತ್ತಾರೆಂದರೆ ಅದು ಆ ಪ್ರದೇಶದಲ್ಲಿ ಹೇಗೆ ಕಾರ್ಯನಿರ್ವಹಿಸರಬೇಕೆಂದು ಕಂಡುಕೊಳ್ಳಬಹುದು. ಈ ಬ್ಯಾಂಕುಗಳು ಆದ್ಯತೇತರ ವಲಯಕ್ಕೆ ಸಾಕಷ್ಟು ಹಣವನ್ನು ವಿತರಿಸಿದೆ. ಇದರಿಂದಾಗಿ ಸಮಾಜದಲ್ಲಿನ ಆದ್ಯತಾ/ಆದ್ಯತೇತರ ವಲಯಗಳೆರಡೂ ಬೆಳೆಯಲಿಕ್ಕೆ ಗ್ರಾಮೀಣ ಬ್ಯಾಂಕು ಪ್ರಯತ್ನಿಸಿದೆ..

ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಹಂಪಾಸಾಗರದಲ್ಲಿನ ಸಹಕಾರ ಸಂಘಗಳು ೧೩೮ ಕೆಸಿಸಿ ಖಾತೆಗೆ ೨೧,೪೩,೦೦೦ ರೂಪಾಯಿಗಳ ಸಾಲವನ್ನು ವಿತರಿಸಿವೆ. ಹಾಗೆಯೇ ಗ್ರಾಮೀಣ ಬ್ಯಾಂಕು ಸಹ ೩೪೪ ಕೆಸಿಸಿ ಖಾತೆಗಳಿಗೆ ೧ ಕೋಟಿ ೫೫ ಲಕ್ಷ ರೂಪಾಯಿಗಳ ಸಾಲವನ್ನು ವಿತರಿಸಿರುವುದನ್ನು ಬ್ಯಾಂಕು ದಾಖಲೆಗಳಿಂದ ಕಂಡುಕೊಳ್ಳಬಹುದು. ಈ ಎರಡು ಸಂಸ್ಥೆಗಳು ವಿತರಿಸುವ ಸಾಲವನ್ನು ತುಲನೆ ಮಾಡಿದಾಗ ಗ್ರಾಮೀಣ ಬ್ಯಾಂಕುಗಳು ಸಹಕಾರ ಸಂಘಗಳಿಗಿಂತ ಅಧಿಕ ಪ್ರಮಾಣದಲ್ಲಿ ಸಾಲ ವಿತರಣೆ ಮಾಡಿರುವುದನ್ನು ಕಾಣಬಹುದು. ಅದು ಪ್ರತಿಶತ ೭೨೩ರಷ್ಟು ಅಧಿಕವಾಗಿದೆ. ಇದರಿಂದ ಕಂಡುಬರುವುದೇನೆಂದರೆ ಈ ಭಾಗದ ಜನಪದರು ಅತ್ಯಧಿಕ ಪ್ರಮಾಣದಲ್ಲಿ ಗ್ರಾಮೀಣ ಬ್ಯಾಂಕನ್ನು ಅವಲಂಬಿಸಿರುವುದು ಸ್ಪಷ್ಟ. ಸಹಕಾರ ಸಂಘಗಳಿಗಿಂತ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಅತ್ಯಧಿಕ ಪ್ರಮಾಣದಲ್ಲಿ ಸಾಲವನ್ನು ವಿತರಿಸಿದೆ. ಪ್ರತಿಯೊಬ್ಬ ಖಾತೆದಾರನು ಈ ಬ್ಯಾಂಕಿನ ಬಗ್ಗೆ ಸಾಲಪಡೆಯುವ ನಂಬಿಕೆ ಇಟ್ಟಿದ್ದಾನೆ.

ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿಯಲ್ಲಿ ಪ್ರಗತಿ ಗ್ರಾಮೀಣಬ್ಯಾಂಕ್ ಜೊತೆಗೆ ಸಹಕಾರ ಸಂಘಗಳು ಮತ್ತು ಬ್ಯಾಂಕ್ ಆಫ್ ಇಂಡಿಯಾ ಕಾರ್ಯನಿರ್ವಹಿಸುತ್ತಿವೆ. ೨೦೦೭ರ ಜೂನ್ ವೇಳೆಗೆ ಸಹಕಾರ ಸಂಘವು ೨೧೩ ಕೆಸಿಸಿ ಖಾತೆಗಳಿಗೆ ೩೭,೮೯,೨೦೦ ರೂಪಾಯಿಗಳ ಸಾಲವನ್ನು ವಿತರಿಸಿದೆ. ಇದೇ ಕಾಲಾವಧಿಯಲ್ಲಿ ಗ್ರಾಮೀಣ ಬ್ಯಾಂಕು ೫೮೯ ಕೆಸಿಸಿ ಖಾತೆಗಳಿಗೆ ೩.೧೧ ಕೋಟಿ ರೂಪಾಯಿಗಳ ಸಾಲವನ್ನು ಒದಗಿಸಿರುವುದನ್ನು ಬ್ಯಾಂಕು ದಾಖಲೆಗಳಿಂದ ಕಂಡುಕೊಳ್ಳಬಹುದು. ಇದರಿಂದ ಸ್ಪಷ್ಟವಾಗುವ ಅಂಶವೆಂದರೆ ಎರಡು ಹಣಕಾಸಿನ ಸಂಸ್ಥೆಗಳಲ್ಲಿ ಗ್ರಾಮೀಣ ಬ್ಯಾಂಕು ಸಹಕಾರಸಂಘಗಳಿಗಿಂತ ಪ್ರತಿಶತ ೮೨೦ ರಷ್ಟು ಅಧಿಕ ಪ್ರಮಾಣದಲ್ಲಿ ಸಾಲವನ್ನು ವಿತರಿಸಿದೆ ಎನ್ನುವುದನ್ನು ಅಂಕಿ ಅಂಶಗಳ ಮೂಲಕ ಕಂಡುಕೊಳ್ಳಬಹುದು.

ಬ್ಯಾಂಕ್ ಆಫ್ ಇಂಡಿಯಾ ಶಾಖೆಯು ೨೦೦೯ರ ಮಾರ್ಚ್ ವೇಳೆಗೆ ಕೃಷಿಗೆ ೧,೫೨,೭೯೦೦೦ರೂಗಳನ್ನು, ಸಣ್ಣ ವ್ಯಾಪಾರಕ್ಕೆ ೪೧,೯೬೦೦೦ರೂಗಳನ್ನು, ಹೈನುಗಾರಿಕೆಗೆ ೨೮,೦೦೦೦೦ರೂಗಳನ್ನು, ಸಣ್ಣ ಉದ್ದಿಮೆದಾರರಿಗ ೧೫,೦೦೦೦೦ರೂಗಳನ್ನು ಮತ್ತು ಸ್ವಸಹಾಯ ಗುಂಪುಗಳಿಗೆ ೭೫,೦೦೦೦೦ ಒದಗಿಸಿದೆ. ಪ್ರಗತಿ ಗ್ರಾಮೀಣ ಬ್ಯಾಂಕ್ ಇದೇ ಕಾಲಾವಧಿಯಲ್ಲಿ ಕೃಷಿಗೆ ೨.೬೪ ಕೋಟಿ, ಸಣ್ಣ ವ್ಯಾಪಾರಕ್ಕೆ ೩೦ ಲಕ್ಷ, ಸಣ್ಣ ಉದ್ದಿಮೆದಾರರಿಗೆ ೩೫,೦೦೦೦೦, ಹೈನುಗಾರಿಕೆಗೆ, ೩೫,೦೦೦೦೦, ಸ್ವಸಹಾಯ ಗುಂಪುಗಳಿಗೆ ೧.೩೦ಲಕ್ಷ ರೂಗಳ ನೆರವನ್ನು ಒದಗಿಸಿದೆ. ಗ್ರಾಮೀಣ ಬ್ಯಾಂಕ್ ಕೃಷಿಗೆ ೧.೧೨ಕೋಟಿ ರೂಗಳನ್ನು ಹೈನುಗಾರಿಕೆಗೆ ೭ಲಕ್ಷ, ಸ್ವಸಹಾಯ ಗುಂಪುಗಳಿಗೆ ೫೫ಲಕ್ಷ, ಸಣ್ಣ ಉದ್ದಿಮೆದಾರರಿಗೆ ೧೫ಲಕ್ಷ ರೂಗಳನ್ನು ಬ್ಯಾಂಕ್ ಆಫ್ ಇಂಡಿಯಾದ ಸಾಲಕ್ಕಿಂತಲೂ ಅಧಿಕವಾದ ಪತ್ತು ವಿತರಿಸಿರುವುದನ್ನು ಅಂಕಿ ಅಂಶಗಳ ಮೂಲಕ ಕಂಡುಕೊಳ್ಳಬಹುದು. ಹಾಗಾಗಿ ಇಲ್ಲಿನ ಜನಪದರು ಈ ಬ್ಯಾಂಕನ್ನು ತಮ್ಮ ಆಶೋತ್ತರಗಳನ್ನು ಈಡೇರಿಸಲು ಕಾರ್ಯನಿರ್ವಹಿಸುತ್ತಿದೆ ಎಂದಿದ್ದಾರೆ.

ಸಂಡೂರು ತಾಲ್ಲೂಕಿನ ಹೊಸ ದರೋಜಿ ಗ್ರಾಮದಲ್ಲಿ ಸಹಕಾರ ಸಂಘಗಳು ೨೩೪ ಕೆಸಿಸಿ ಖಾತೆಗಳಿಗೆ ೮೩,೩೪,೯೩೦ ರೂಪಾಯಿಗಳ ಸಾಲವನ್ನು ಭತ್ತ, ಮೆಣಸಿನ ಕಾಯಿ ಬೆಳೆಗೆ ಒದಗಿಸಿದೆ (೨೦೦೭-೦೮). ಇದೇ ಕಾಲಾವಧಿಯಲ್ಲಿ ಗ್ರಾಮೀಣ ಬ್ಯಾಂಕು ೬೧೬ ಕೆಸಿಸಿ ಖಾತೆಗಳಿಗೆ ೨ ಕೋಟಿ ೧೨ ಲಕ್ಷ ರೂಪಾಯಿಗಳ ಸಾಲವನ್ನು ಭತ್ತದ ಬೆಳೆಗೆ ನೀಡಿದೆ. ಈ ಅಂಶದಿಂದ ಸ್ಪಷ್ಟವಾಗುವುದೇನೆಂದರೆ ಈ ಎರಡು ಹಣಕಾಸಿನ ಸಂಸ್ಥೆಗಳಲ್ಲಿ ಗ್ರಾಮೀಣ ಬ್ಯಾಂಕು ಅತ್ಯಧಿಕ ಪ್ರಮಾಣದಲ್ಲಿ ಸಾಲ ವಿತರಿಸಿದೆ. ಅಂದರೆ ಸಹಕಾರ ಸಂಘಗಳಿಗಿಂತ ಪ್ರತಿಶತ ೨೫೪ ಪಟ್ಟು ಅಧಿಕ ಪ್ರಮಾಣ ಸಾಲವನ್ನು ಗ್ರಾಮೀಣ ಬ್ಯಾಂಕು ವಿತರಿಸಿದೆ. ಹೀಗಾಗಿ ಈ ಬ್ಯಾಂಕು ಜನಸಾಮಾನ್ಯರ ಬ್ಯಾಂಕಾಗಿ ಕಾರ್ಯನಿರ್ವಹಿಸುತ್ತಿದೆ ಎನ್ನಬಹುದು. ಗ್ರಾಮೀಣ ಭಾಗದಲ್ಲಿ ಸಾಲ ವಿತರಿಸುವಲ್ಲಿ ಗ್ರಾಮೀಣ ಬ್ಯಾಂಕು ಪ್ರಮುಖ ಪಾತ್ರವನ್ನು ವಹಿಸಿವೆ ಎನ್ನಬಹುದು.

ಸಿರುಗುಪ್ಪ ತಾಲ್ಲೂಕು ರಾರಾವಿ ಸಹಕಾರ ಸಂಘವು ೧೫೩ ಕೆಸಿಸಿ ಖಾತೆಗಳಿಗೆ ೪೧,೫೪೦೦೦ ರೂಪಾಯಿಗಳ ಸಾಲವನ್ನು ಮೆಣಸಿನಕಾಯಿ ಬೆಳೆಗೆ ವಿತರಿಸಿದೆ. ಹಾಗೆಯೇ ಗ್ರಾಮೀಣ ಬ್ಯಾಂಕುಗಳು ಸಹ ಕೆಸಿಸಿ ಖಾತೆಗಳಿಗೆ ೧.೬೬ಲಕ್ಷ ರೂಪಾಯಿಗಳ ಸಾಲವನ್ನು ವಿತರಿಸಿರುವುದನ್ನು ಬ್ಯಾಂಕುಗಳ ದಾಖಲೆಗಳಿಂದ

ಕಂಡುಕೊಳ್ಳಬಹುದು. ಇದರಿಂದ ಸ್ಪಷ್ಟವಾಗುವುದೇನೆಂದರೆ ಸಹಕಾರ ಸಂಸ್ಥೆಗಳಿಗಿಂತಲೂ ಗ್ರಾಮೀಣ ಬ್ಯಾಂಕುಗಳು ಪ್ರತಿಶತ ೬೯ ಅಧಿಕ ಪ್ರಮಾಣದಲ್ಲಿ ಸಾಲವನ್ನು ವಿತರಿಸಿದೆ. ಈ ಅಂಶದಿಂದ ಕಂಡುಬರುವುದೇನೆಂದರೆ ಗ್ರಾಮೀಣ ಬ್ಯಾಂಕುಗಳು ಸಹಕಾರ ಸಂಘಗಳಿಗಿಂತ ಅತ್ಯಧಿಕ ಪ್ರಮಾಣದಲ್ಲಿ ಸಾಲ ವಿತರಿಸಿದೆ. ಗ್ರಾಮೀಣ ಬ್ಯಾಂಕನ್ನು ತಮ್ಮ ಬ್ಯಾಂಕು ಎಂದು ಜನಪದರು ತಿಳಿಸಿದ್ದಾರೆ.

ಬಳ್ಳಾರಿ ತಾಲ್ಲೂಕು ಬಾಣಾಪುರದ ಹತ್ತಿರದ ಸಹಕಾರ ಸಂಘಗಳು ಕೆಸಿಸಿ ಖಾತೆ ೧೪೮೯ ಖಾತೆಗಳಿಗೆ ೮ ಕೋಟಿ ರೂ ಸಾಲಗಳನ್ನು ವಿತರಿಸಿವೆ. ಗ್ರಾಮೀಣ ಬ್ಯಾಂಕು ಅತ್ಯಧಿಕ ಪ್ರಮಾಣದಲ್ಲಿ ಸಾಲ ವಿತರಿಸಿರುವುದನ್ನು ಬ್ಯಾಂಕುಗಳ ದಾಖಲೆಗಳ ಮೂಲಕ ಕಂಡುಕೊಳ್ಳಬಹುದಾಗಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ ಸಹಕಾರ ಸಂಘಟನೆಗಳಿಗಿಂತಲೂ ಗ್ರಾಮೀಣ ಬ್ಯಾಂಕು ಅಧಿಕ ಪ್ರಮಾಣದಲ್ಲಿ ಸಾಲವನ್ನು ವಿತರಿಸಿದೆ. ಹಾಗೂ ಗ್ರಾಮೀಣ ಪ್ರದೇಶದ ಜನಪದರು ಅತ್ಯಧಿಕ ಪ್ರಮಾಣದಲ್ಲಿ ಗ್ರಾಮೀಣ ಬ್ಯಾಂಕುಗಳನ್ನು ಅವಲಂಬಿಸಿರುವುದಲ್ಲದೆ ತಮ್ಮ ಮನೆಯ ಬ್ಯಾಂಕ್ ಎಂದು ನಂಬಿರುತ್ತಾರೆ.

ಬಳ್ಳಾರಿ ಜಿಲ್ಲೆಯಲ್ಲಿನ ಎಲ್ಲಾ ತಾಲ್ಲೂಕುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮೀಣ ಬ್ಯಾಂಕುಗಳಿಗೆ ಪ್ರತಿಸ್ಪರ್ಧಿಯಾಗಿ ಸಹಕಾರ ಸಂಘಗಳು ಬೆಳೆಯಬಹುದಾಗಿತ್ತು, ಆದರೆ ಸಹಕಾರ ಸಂಘಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಕೃಷಿಗೆ ಒದಗಿಸಿದ ಸಾಲದ ಪ್ರಮಾಣವನ್ನು ನೋಡಿದಾಗ ಗ್ರಾಮೀಣ ಬ್ಯಾಂಕುಗಳು ಅತಿಹೆಚ್ಚಿನ ಪ್ರಮಾಣದಲ್ಲಿ ಸಾಲವಿತರಿಸುವುದನ್ನು ಕಾಣಬಹುದು. ಸಣ್ಣ/ಅತಿಸಣ್ಣ ರೈತರು ಅತ್ಯಧಿಕ ಪ್ರಮಾಣದಲ್ಲಿ ಬ್ಯಾಂಕ್ ಸಾಲದ ಪ್ರಯೋಜನ ಪಡೆದಿದ್ದಾರೆ. ಆದರೆ ಸಹಕಾರಿ ಸಂಘಗಳಿಂದ ಸಣ್ಣ ರೈತರ ಜೊತೆಗೆ ದೊಡ್ಡ ರೈತರು ಹೆಚ್ಚಿನ ಪ್ರಯೋಜನ ಪಡೆದಿದ್ದಾರೆ. ಈ ಬ್ಯಾಂಕು ಆದ್ಯತೆ ಮತ್ತು ಆದ್ಯತೇತರ ವಲಯಕ್ಕೆ ಹೆಚ್ಚಿನ ಹಣಕಾಸಿನ ನೆರವನ್ನು ಇತರೆ ಹಣಕಾಸಿನ ಸಂಸ್ಥೆಗಳಿಗಿಂತ ಅತ್ಯಧಿಕವಾಗಿ ನೀಡಿದೆ. ಹಾಗಾಗಿ ಈ ಬ್ಯಾಂಕುಗಳು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗಾಗಿ ಪೂರಕವಾಗಿ ನಿಂತಿವೆ ಎಂದರೆ ತಪ್ಪಾಗಲಾರದು.

**ಆಧುನಿಕತೆ ಮತ್ತು ಬ್ಯಾಂಕಿಂಗ್ ವ್ಯವಸ್ಥೆ**

ರಾಷ್ಟ್ರದಲ್ಲಿ ತ್ರಿಕರಣ ಸೂತ್ರಗಳನ್ನು ಅಳವಡಿಸಿಕೊಂಡ ಮೇಲೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬದಲಾವಣೆಯನ್ನು ತರುವುದು ಅನಿವಾರ್ಯವಾಯಿತು. ವಿಜ್ಞಾನ ಮತ್ತು ತಂತ್ರಜ್ಞಾನ ಬದಲಾವಣೆಯಾದ ಹಾಗೆ, ಬ್ಯಾಂಕಿಂಗ್ ಕ್ಷೇತ್ರದಲ್ಲೂ ಬದಲಾವಣೆ ತಂದು ಜಾಗತೀಕರಣಕ್ಕೆ ತೆರೆದುಕೊಳ್ಳುವುದು ಅನಿವಾರ್ಯವಾಯಿತು.

ಕೇಂದ್ರಸರ್ಕಾರವು ೧೯೯೧ರಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸುಧಾರಣೆಗಳನ್ನು ತರಲು ಎಂ.ನರಸಿಂಹನ್‌ರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು. ಆ ಸಮಿತಿಯು ತನ್ನ ವರದಿಯನ್ನು ಅದೇ ವರ್ಷ ಸಲ್ಲಿಸಿತು. ಸಮಿತಿಯು ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸುಧಾರಣೆ ತರಲು ಕೆಲವೊಂದು ಕ್ರಾಂತಿಕಾರಕ ಶಿಫಾರಸ್ಸುಗಳನ್ನು ಮಾಡಿತು. ಖಾಸಗಿ ಬ್ಯಾಂಕುಗಳ ಮೇಲಿನ ನಿರ್ಬಂಧಗಳನ್ನು

ಸಡಿಲಗೊಳಿಸುವುದು. ಖಾಸಗಿ ಮತ್ತು ವಿದೇಶಿ ಬ್ಯಾಂಕುಗಳಿಗೆ ದೇಶದ ಅರ್ಥವ್ಯವಸ್ಥೆಯಲ್ಲಿ ವಹಿಸಬೇಕಾದ ಮಹತ್ವದ ಪಾತ್ರದ ಬಗ್ಗೆ ಹೊಸ ಶಾಖೆಗಳನ್ನು ತೆರೆಯಲು ಲೈಸನ್ಸ್ ಪಡೆಯುವ ಪದ್ಧತಿಯನ್ನು ರದ್ದುಪಡಿಸುವುದು. ಈಗಿರುವ ಸಾಮಾನ್ಯ ಬ್ಯಾಂಕುಗಳ ಸಿಬ್ಬಂದಿ ನೇಮಕಾತಿ ವಿಧಾನವನ್ನು ಕೈಬಿಡುವುದು. ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣ ನೀತಿಗೆ ತಿಲಾಂಜಲಿಯನ್ನು ನೀಡುವುದು ಇವೇ ಮೊದಲಾದ ಕ್ರಾಂತಿಕಾರಕ ಹಾಗು ದೂರಗಾಮಿ ಶಿಫಾರಸ್ಸುಗಳನ್ನು ಮಾಡಿದೆ. ಸಮಿತಿಯ ಪ್ರಮುಖ ಶಿಫಾರಸ್ಸುಗಳು ಈ ಕೆಳಗಿನಂತಿವೆ.

೧. ದೇಶದಲ್ಲಿನ ಬ್ಯಾಂಕಿಂಗ್ ವ್ಯವಸ್ಥೆಯನ್ನು ಪುನರ್‌ಸಂಘಟಿಸುವುದು ದೇಶದಲ್ಲಿ ಭಾರತೀಯ ಸ್ಟೇಟ್ ಬ್ಯಾಂಕುಗಳನ್ನೊಳಗೊಂಡು ಮೂರು ಅಥವಾ ನಾಲ್ಕು ಬೃಹತ್ ವಾಣಿಜ್ಯ ಬ್ಯಾಂಕುಗಳು ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ವ್ಯವಹರಿಸುವ ಬ್ಯಾಂಕುಗಳಾಗಬೇಕು.

೨. ದೇಶದಾದ್ಯಂತಹ ಶಾಖೆಗಳನ್ನು ಹೊಂದಿದ ಎಂಟು ಅಥವಾ ಹತ್ತು ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರಮಟ್ಟದ ಬ್ಯಾಂಕುಗಳೆಂದು ಸಂಘಟಿಸಬೇಕು. ಅವು ಎಲ್ಲಾ ಪ್ರಕಾರದ ಬ್ಯಾಂಕಿಂಗ್ ವ್ಯವಹಾರವನ್ನು ಕೈಗೊಳ್ಳಬೇಕು.

೩. ನಿರ್ದಿಷ್ಟ ಪ್ರದೇಶದಲ್ಲಿ ವ್ಯವಹರಿಸಲು ಸ್ಥಳೀಯ ಬ್ಯಾಂಕುಗಳು ಇರಬೇಕು. ಈ ಬ್ಯಾಂಕುಗಳ ಕಾರ್ಯನಿರ್ವಹಣೆಯನ್ನು ನಿರ್ದಿಷ್ಟ ಪ್ರದೇಶಕ್ಕೆ ಸೀಮಿತಗೊಳಿಸಬೇಕು.

೪. ಗ್ರಾಮೀಣ ಮಟ್ಟದಲ್ಲಿ ಗ್ರಾಮೀಣ ಬ್ಯಾಂಕುಗಳನ್ನು ಸಂಘಟಿಸಬೇಕು. ಅವು ಗ್ರಾಮೀಣ ಪ್ರದೇಶದಲ್ಲಿ ಕಾರ್ಯನಿರ್ವಹಿಸಬೇಕು, ಹಾಗೂ ಕೃಷಿ ಅದಕ್ಕೆ ಸಂಬಂಧಪಟ್ಟ ಚಟುವಟಿಕೆಗಳಿಗೆ ಮಾತ್ರ ಹಣಕಾಸನ್ನು ಒದಗಿಸಬೇಕು.

೫. ಬ್ಯಾಂಕಿಂಗ್ ವ್ಯವಸ್ಥೆಯು ಮಾರುಕಟ್ಟೆಯಾಧಾರಿತವಾಗಿ ಹಾಗೂ ಲಾಭದ ಉದ್ದೇಶಗಳನ್ನಿಟ್ಟುಕೊಂಡು ಕಾರ್ಯನಿರ್ವಹಿಸಬೇಕು.

೬. ಮುಂದೆ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಬಾರದು. ಇದರಿಂದಾಗಿ ಖಾಸಗಿ ವಲಯದ ವಾಣಿಜ್ಯ ಬ್ಯಾಂಕುಗಳಿಗೆ ಹೆಚ್ಚು ಆಸಕ್ತಿಯಿಂದ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ.

೭. ವಾಣಿಜ್ಯ ಬ್ಯಾಂಕುಗಳು ತಮ್ಮ ಶಾಖೆಗಳನ್ನು ತೆರೆಯಲು ಆರ್‌ಬಿಐನಿಂದ ಪರವಾನಗಿ ಪಡೆಯುವ ಪದ್ಧತಿಯನ್ನು ಕೈಬಿಡಬೇಕು. ಹೊಸಶಾಖೆಯನ್ನು ತೆರೆಯಲು ಅಥವಾ ಹಾಲಿಶಾಖೆಯನ್ನು ಮುಚ್ಚಲು ಸಂಬಂಧಿಸಿದ ವಾಣಿಜ್ಯಬ್ಯಾಂಕಿಗೆ ನಿರ್ಣಯ ಕೈಗೊಳ್ಳಲು ಬಿಡಬೇಕು.

೮. ದೇಶಿಯ ಬ್ಯಾಂಕುಗಳಿಗೆ ಅನ್ವಯವಾಗುವ ನಿಯಮ-ನಿರ್ಬಂಧಗಳನ್ನೇ ಸದ್ಯಕ್ಕೆ ರಾಷ್ಟ್ರದಲ್ಲಿರುವ ವಿದೇಶಿ ಬ್ಯಾಂಕುಗಳಿಗೆ ಅನ್ವಯಿಸಬೇಕು.

೯. ವಿದೇಶಿ ವಿನಿಮಯ ಬ್ಯಾಂಕುಗಳು ಭಾರತದಲ್ಲಿ ತಮ್ಮ ಶಾಖೆಗಳನ್ನು ತೆರೆಯಲು ಮುಕ್ತ ಅವಕಾಶ ನೀಡಬೇಕು. ದೇಶಿಯ ಹಾಗೂ ವಿದೇಶಿ ಬ್ಯಾಂಕುಗಳು ಸಂಯುಕ್ತವಾಗಿ ವ್ಯವಹಾರಗಳನ್ನು ಕೈಗೊಳ್ಳುವಂತೆ ಉತ್ತೇಜನ ನೀಡಬೇಕು.

೧೦. ಭಾರತೀಯ ಬ್ಯಾಂಕುಗಳು ವಿದೇಶದಲ್ಲಿ ಕೈಗೊಳ್ಳುವ ವ್ಯವಹಾರಗಳನ್ನು ಸಮನ್ವಯೀಕರಿಸಬೇಕು.

೧೧. ಬ್ಯಾಂಕಿಂಗ್ ವ್ಯವಹಾರಗಳನ್ನು ಕಂಪ್ಯೂಟರ್ ವ್ಯವಸ್ಥೆಗೆ ಅಳವಡಿಸಲು ಉತ್ತೇಜನ ನೀಡಬೇಕು.

೧೨. ಬ್ಯಾಂಕುಗಳ ಅಧಿಕಾರಿ ವರ್ಗದವರನ್ನು ಹಾಗೂ ಸಾಮೂಹಿಕವಾಗಿ ಬ್ಯಾಂಕುಗಳ ಸಾಮಾನ್ಯ ಸಿಬ್ಬಂದಿ ವರ್ಗದವರನ್ನು ನೇಮಿಸುವಂತಹ ಮಂಡಳಿಗಳನ್ನು ರದ್ದುಪಡಿಸಬೇಕು.

೧೩. ಬ್ಯಾಂಕುಗಳ ಆಂತರಿಕ ಸಂಘಟನೆಗೆ ಸಂಬಂಧಿಸಿದಂತೆ ಹಾಗೂ ಹುದ್ದೆಗಳ ನಿರ್ಮಾಣ, ಹುದ್ದೆಗಳ ವರ್ಗೀಕರಣ, ಬಡ್ತಿ ವಿಧಾನಗಳು ಇವೆ ಮೊದಲಾದವುಗಳ ಬಗೆಗೆ ಕೇಂದ್ರ ಸರ್ಕಾರ ಅಥವಾ ಆರ್.ಬಿ.ಐ. ನೀಡುತ್ತಿರುವ ಮಾರ್ಗದರ್ಶಕ ಸೂತ್ರಗಳನ್ನು ಪುನರ್‌ಪರಿಶೀಲಿಸಬೇಕು.

೧೪. ಸದ್ಯಕ್ಕಿರುವ ಭಾರತೀಯ ರಿಸರ್ವಬ್ಯಾಂಕ್ ಹಾಗು ಹಣಕಾಸಿನ ಮಂತ್ರಿಶಾಖೆಯ ಬ್ಯಾಕಿಂಗ್ ವಿಭಾಗಗಳು ಬ್ಯಾಂಕಿಂಗ್ ವ್ಯವಸ್ಥೆಯ ಮೇಲೆ ಹೊಂದಿರುವ ದ್ವಿಮುಖ ನಿಯಂತ್ರಣವನ್ನು ಕೊನೆಗೊಳಿಸಬೇಕು.

೧೫. ಬ್ಯಾಂಕುಗಳ ಮುಖ್ಯಾಧಿಕಾರಿಗಳ ಹಾಗು ಬ್ಯಾಂಕುಗಳ ಮಂಡಳಿಗಳಿಗೆ ರಾಜಕೀಯ ವ್ಯಕ್ತಿಗಳನ್ನು ನೇಮಕ ಮಾಡಬಾರದು.

೧೬. ವಾಣಿಜ್ಯ ಬ್ಯಾಂಕುಗಳು ಕೈಗಾರಿಕೆಗಳಿಗೆ ಧೀರ್ಘಾವಧಿ ಸಾಲಗಳನ್ನು ನೀಡಬೇಕು ಮತ್ತು ಅಭಿವೃದ್ಧಿಯ ಹಣಕಾಸಿನ ಸಂಸ್ಥೆಗಳು ದುಡಿಯುವ ಬಂಡವಾಳವನ್ನು ಒದಗಿಸಬೇಕು.

೧೭. ಭಾರತೀಯ ಕೈಗಾರಿಕಾಭಿವೃದ್ಧಿ ಬ್ಯಾಂಕು ತನ್ನ ಶೃಂಗ ಸ್ಥಾನವನ್ನು ಉಳಿಸಿಕೊಳ್ಳಬೇಕು ಮತ್ತು ಅದೇ ವೇಳೆಗೆ ಪುನರ್‌ಧನ ಸೌಲಭ್ಯವನ್ನು ಮುಂದುವರಿಸಬೇಕು.

೧೮. ಅಭಿವೃದ್ಧಿಯ ಹಣಕಾಸಿನ ಸಂಸ್ಥೆಗಳು ತಮಗೆ ಬೇಕಾಗುವ ಸಂಪನ್ಮೂಲಗಳನ್ನು ಸ್ಪರ್ಧಾತ್ಮಕ ಕರಾರುಗಳ ಮೂಲಕ ಮಾರುಕಟ್ಟೆಯಿಂದ ಪಡೆಯಬೇಕು. ಅವು ಶಾಸನಬದ್ಧ ದ್ರವತ್ವದ ಪ್ರಮಾಣದ ಮೂಲಕ ಪಡೆಯಬಹುದಾದ ರಿಯಾಯ್ತಿ ಹಣಕಾಸನ್ನು ಮೂರು ವರುಷಗಳವರೆಗೆ ಹಂತಹಂತವಾಗಿ ಒದಗಿಸಬೇಕು.

೧೯. ಬ್ಯಾಂಕುಗಳ ಶಾಸನಬದ್ಧ ದ್ರವತ್ವದ ಪ್ರಮಾಣವನ್ನು ಐದು ವರ್ಷಗಳ ಅವಧಿಯಲ್ಲಿ ಶೇ.೨೫ಕ್ಕೆ ಇಳಿಸಲೇಬೇಕು. ಅವು ಇಟ್ಟುಕೊಳ್ಳಬೇಕಾದ ಅದು ಹೆಚ್ಚಿನ ನಗದು ಹಣದ ನಿಧಿಯ ಹಣದ ಪ್ರಮಾಣವನ್ನು ಕ್ರಮೇಣ ಇಳಿಸುವ ಬಗ್ಗೆ ಭಾರತೀಯ ರಿಸರ್ವ್‌ಬ್ಯಾಂಕ್ ಪರಿಶೀಲಿಸಬೇಕು.

೨೦. ಬ್ಯಾಂಕುಗಳ ಹೂಟೆಗಳ ಮೇಲೆ ಅಥವಾ ನಗದು ನಿಧಿಯ ಪ್ರಮಾಣದ ಮೇಲೆ ಕೂಡಲೇಬೇಕಾದ ಬಡ್ಡಿದರವನ್ನು ಹೆಚ್ಚಿಸಬೇಕು.

೨೧. ಬ್ಯಾಂಕುಗಳು ವಿಧಿಸುವ ಬಡ್ಡಿದರಗಳು ಮಾರುಕಟ್ಟೆಯ ಪರಿಸ್ಥಿತಿಯನ್ನು ಪ್ರತಿ ಬಿಂಬಿಸುವಂತಾಗಲು ಅವುಗಳ ಮೇಲಿನ ನಿರ್ಬಂಧಗಳನ್ನು ತೆಗೆದುಹಾಕಬೇಕು.

೨೨. ಬಂಡವಾಳ ಮಾರುಕಟ್ಟೆಯಲ್ಲಿ ಉದಾರಧೋರಣೆಯನ್ನು ಅನುಸರಿಸಬೇಕು.

೨೩. ಈ ಶಿಫಾರಸ್ಸುಗಳನ್ನು ಉದ್ದಿಮೆದಾರರು ಹಾಗೂ ವ್ಯಾಪಾರಸ್ಥರು ವ್ಯಾಪಕವಾಗಿ ಸ್ವಾಗತಿಸಿದ್ದಾರೆ. ಈ ಶಿಫಾರಸ್ಸುಗಳು ಸದ್ಯ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕಂಡುಬರುವ ಸ್ಥಿತ್ಯಂತರಗಳಿಗೆ ಅನುಗುಣವಾಗಿರುತ್ತವೆಂದು ಸಮಿತಿಯು ತನ್ನ ವರದಿಯಲ್ಲಿ ಸ್ಪಷ್ಟಪಡಿಸಿದೆ. ಈ ಎಲ್ಲಾ ಶಿಫಾರಸ್ಸುಗಳನ್ನು ಭಾರತ ಸರ್ಕಾರವು ಅಂಗೀಕರಿಸಿದೆ.

ಭಾರತ ಸರಕಾರವು ಪುನಃ ೧೯೯೮ರಲ್ಲಿ ಎಂ.ನರಸಿಂಹಮನ್ ಅಧ್ಯಕ್ಷತೆಯಲ್ಲಿ ಇನ್ನೊಂದು ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಗೆ ಬ್ಯಾಂಕಿಂಗ್ ವಲಯದ ಮೇಲಿನ ಸುಧಾರಣಾ ಸಮಿತಿ ಎಂದು ಕರೆಯಲಾಯಿತು. ಈ ಸಮಿತಿಯು ೧೯೯೮ರ ಏಪ್ರಿಲ್ ತಿಂಗಳಲ್ಲಿ ತನ್ನವರದಿ ಸಲ್ಲಿಸಿತು. ಅದರಲ್ಲಿನ ಪ್ರಮುಖ ಶಿಫಾರಸ್ಸುಗಳು.

೧. ಬಲಿಷ್ಟ ಬ್ಯಾಂಕಿಂಗ್ ವ್ಯವಸ್ಥೆಯ ನಿರ್ಮಾಣ.

೨. ಅಧಿಕ ಬಂಡವಾಳ ಪರ್ಯಾಪ್ತಿ ಅನುಪಾತವನ್ನು ನಿರ್ಧರಿಸುವುದು.

೩. ಬ್ಯಾಂಕಿಂಗ್ ನಿಯಮಗಳ ವಿಮರ್ಶೆ ಮತ್ತು ತಿದ್ದುಪಡಿ

೪. ಬಲಹೀನ ಬ್ಯಾಂಕುಗಳ ಸುಧಾರಣೆ

೫. ಸಣ್ಣ/ಸ್ಥಳೀಯ ಬ್ಯಾಂಕುಗಳ ಸ್ಥಾಪನೆ

ಈ ಎಲ್ಲಾ ಸುಧಾರಣೆಗಳೊಂದಿಗೆ ಇನ್ನುಳಿದ ಪ್ರಮುಖ ಸುಧಾರಣೆಗಳೆಂದರೆ

೧. ಎಸ್.ಎಲ್.ಆರ್, ಸಿ.ಆರ್.ಆರ್, ಇಳಿಕೆ ಸರ್ಕಾರವು ಶಾಸನಬದ್ಧ ದ್ರವ್ಯತಾ ಅನುಪಾತವನ್ನು ಪ್ರತಿಶತ ೩೫ ರಿಂದ ೨೫ಕ್ಕೆ ಇಳಿಸುವುದು ನಗದು ಮೀಸಲು ಅನುಪಾತವನ್ನು ಪ್ರತಿಶತ ೧೫ ರಿಂದ ಹಂತಹಂತವಾಗಿ ೭.೫ಕ್ಕೆ ಇಳಿಸುವುದು. ಪ್ರತಿಶತ ೧೦ ಹೆಚ್ಚುವರಿ ನಗದು ಮೀಸಲು ಅನುಪಾತವನ್ನು ಸಂಪೂರ್ಣವಾಗಿ ರದ್ದುಗೊಳಿಸಿದೆ.

೨. ಬಡ್ಡಿ ದರಗಳ ನಿಯಂತ್ರಣ ರಹಿತ, ಇದರ ಉದಾರೀಕರಣವು ಹಣಕಾಸು ವಲಯದ ಸುಧಾರಣೆಯ ಅತ್ಯಂತ ಮಹತ್ವದ ಭಾಗವಾಗಿದೆ. ಬಡ್ಡಿಯ ದರಗಳ ಸಂರಚನೆಯು ಅತ್ಯಂತ ಸರಳವಾಗಿ ಮುಕ್ತವಾಗಿವೆ. ಈಗ ಬ್ಯಾಂಕುಗಳು ತಮ್ಮ ಠೇವಣಿ ಮೇಲಿನ ಬಡ್ಡಿಯದರಗಳನ್ನು ನಿರ್ಧರಿಸಿಕೊಳ್ಳಲು ತಾವು ಸ್ವತಂತ್ರರು. ಪ್ರಸ್ತುತ ಉಳಿತಾಯದ ಮೇಲಿನ ಬಡ್ಡಿಯ ದರ ಮಾರುಕಟ್ಟೆಯ ಮೂಲಕ ನಿರ್ಧಾರಿತವಾಗಿದೆ.

೩. ವಿವೇಕಯುತ ನಿಯಂತ್ರಣ ಮತ್ತು ಮೇಲುಸ್ತುವಾರಿ ಕ್ರಮಗಳನ್ನು ಜಾರಿಗೊಳಿಸಲಾಗಿದೆ. ಇದರಲ್ಲಿ ಆದಾಯ ಗುರುತಿಸುವುದು ಆಸ್ತಿಗಳ ವಿಂಗಡಣೆ, ಕೆಟ್ಟಸಾಲಗಳ ನಿರ್ವಹಣೆ ಕುರಿತು ಹಲವು ಕ್ರಮಗಳನ್ನು ಸೂಚಿಸಲಾಗಿದೆ.

೪. ಬಂಡವಾಳ ಮಾರುಕಟ್ಟೆ ಪ್ರದೇಶ: ಕೇಂದ್ರಸರ್ಕಾರವು ಬ್ಯಾಂಕಿಂಗ್ ಕಂಪನಿ ಕಾಯ್ದೆಗೆ ತಿದ್ದುಪಡಿತಂದಿದೆ. ಈಗ ಸಾರ್ವಜನಿಕ ವಲಯದ ಬ್ಯಾಂಕುಗಳು ಪಾವತಿಯಾದ ಬಂಡವಾಳದಲ್ಲಿ ಸರ್ಕಾರವು ತನ್ನ ಪಾಲನ್ನು ಶೇಕಡಾ ೫೧ಕ್ಕೆ ಹೆಚ್ಚಿಸಲು ನಿರ್ಧರಿಸಲಾಯಿತು.

೫. ಸ್ವತಂತ್ರ ವ್ಯವಹಾರ: ಬ್ಯಾಂಕುಗಳು ತಮ್ಮವ್ಯವಹಾರವನ್ನು ತಮಗಿಷ್ಟ ಬಂದಂತೆ ನಡೆಸಿಕೊಂಡು ಹೋಗಲು ಸಂಪೂರ್ಣ ಸ್ವಾತಂತ್ರ್ಯ ನೀಡಲಾಗಿದೆ. ಮುಖ್ಯವಾಗಿ ಶಾಖೆಗಳ ವಿಸ್ತರಣಾ ಶಾಖೆಗಳನ್ನು ಮೇಲ್ದರ್ಜೆಗೆ ಏರಿಸುವುದು ಇತ್ಯಾದಿ.

೬. ಪೈಪೋಟಿ: ದೇಶದಲ್ಲಿನ ಖಾಸಗಿ ಬ್ಯಾಂಕುಗಳಿಗೆ ಅವುಗಳ ಕ್ಷೇತ್ರದಲ್ಲಿ ಅವುಗಳ ವಿಸ್ತರಣೆಗೆ ಮುಕ್ತ ಅವಕಾಶ ಕಲ್ಪಿಸಲಾಗಿದೆ.

೭. ಸ್ಥಳೀಯ ಪ್ರದೇಶ ಬ್ಯಾಂಕುಗಳು: ಮೂರುಜಿಲ್ಲೆಯ ವ್ಯಾಪ್ತಿಯನ್ನು ಒಳಗೊಂಡಂತೆ ಹೊಸ ಖಾಸಗಿ/ ಸ್ಥಳೀಯ ಪ್ರದೇಶ ಬ್ಯಾಂಕುಗಳನ್ನು ಸ್ಥಾಪಿಸಲು ಅನುಮತಿ ನೀಡಿದೆ. ಈ ಬ್ಯಾಂಕುಗಳು ಗ್ರಾಮೀಣ ಉಳಿತಾಯದ ಸಂಗ್ರಹಣೆ ಮತ್ತು ಅದೇ ಪ್ರದೇಶದಲ್ಲಿ ಅವರ ಹೂಡಿಕೆಗೆ ನೆರವಾಗುತ್ತದೆ ಎಂದು ಆಶಿಸಲಾಗಿದೆ. ಬ್ಯಾಂಕುಗಳ ಕಂಪ್ಯೂಟರೀಕರಣ, ಪೈಪೋಟಿ ಸಾಮರ್ಥ್ಯ ವೃದ್ಧಿಗಾಗಿ ಮರುಸಂಘಟನೆ, ಗ್ರಾಮೀಣ ದೂರುಗಳ ವ್ಯವಸ್ಥೆಯ ಪರಿಶೀಲನೆ ಸಾಲ ವಸೂಲಾತಿ ಮುಂತಾದವುಗಳು.

ಜಾರಿಗೊಂಡ ಇತರೆ ಸುಧಾರಣೆಗಳೆಂದರೆ

೧. ದುರ್ಬಲ ಬ್ಯಾಂಕುಗಳನ್ನು ಸಶಕ್ತ ಬ್ಯಾಂಕುಗಳೊಂದಿಗೆ ವಿಲೀನಗೊಳಿಸವುದು.

೨. ಬೃಹತ್‌ಬ್ಯಾಂಕುಗಳು ಜಾಗತೀಕರಣದ ಲಕ್ಷಣಗಳನ್ನು ಹೊಂದಿರಬೇಕು.

೩. ಜಾಗತೀಕರಣ ಪರಿಸರಕ್ಕೆ ತಕ್ಕಂತೆ ಬ್ಯಾಕಿಂಗ್ ಕಾನೂನನ್ನು ತಿದ್ದುಪಡಿ ಮಾಡುವುದು.

ಈ ಎಲ್ಲಾ ಬ್ಯಾಂಕಿಂಗ್ ಸುಧಾರಣಾ ಕ್ರಮಗಳು ಭಾರತೀಯ ಬ್ಯಾಂಕುಗಳಿಗೆ ಅವಕಾಶದ ಬಾಗಿಲನ್ನು ಮುಕ್ತಗೊಳಿಸಿತು. ಬ್ಯಾಂಕುಗಳು ಜಾಗತಿಕ ಮಟ್ಟಕ್ಕೇರಲು, ಲಾಭದಾಯಕತೆಯನ್ನು ಸಾಧಿಸಲು ಬದಲಾವಣೆಯ ಪರಿಸರದೊಂದಿಗೆ ಮುನ್ನಡೆಯಲು ಅನಿವಾರ್ಯವಾಯಿತು.

ರಾಷ್ಟ್ರದ ಅಭಿವೃದ್ಧಿಯಲ್ಲಿ ಬ್ಯಾಂಕುಗಳು ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಾ ಬಂದಿವೆ. ಇವುಗಳು ರಾಷ್ಟ್ರದಲ್ಲಿನ ಸಂಪನ್ಮೂಲಗಳನ್ನು ಕ್ರೂಢೀಕರಿಸಿ, ಅಭಿವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಸುವುದರ ಮೂಲಕ ರಾಷ್ಟ್ರದ ಅಭಿವೃದ್ಧಿಯನ್ನು ತ್ವರಿತಗೊಳಿಸುತ್ತಾ ಬಂದಿರುವುದನ್ನು ಕಾಣಬಹುದು. ಪ್ರಪಂಚದ ಬಹುತೇಕ ರಾಷ್ಟ್ರಗಳಲ್ಲಿ ಗ್ರಾಮೀಣ ಜನಪದರಿಗೆ ಸಾಲ-ಸೌಲಭ್ಯಗಳನ್ನು ಒದಗಿಸುತ್ತಾ ಬಂದಿವೆ. ಕೆಲವು ರಾಷ್ಟ್ರಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ, ಕೆಲವು ರಾಷ್ಟ್ರಗಳಲ್ಲಿ ಕನಿಷ್ಠ ಪ್ರಮಾಣದಲ್ಲಿ ಬ್ಯಾಂಕುಗಳು ಸಾಲ ಒದಗಿಸುತ್ತಾ ಬಂದಿರುವುದು ಕಂಡುಬರುತ್ತದೆ. ಉದಾಹರಣೆಗೆ ದಕ್ಷಿಣ ಆಫ್ರಿಕಾದ ರಾಷ್ಟ್ರಗಳು ಪ್ರತಿಶತ ೧೮ಷ್ಟು ಮಾತ್ರ

ಹಣಕಾಸಿನ ನೆರವನ್ನು ಒದಗಿಸಿದರೆ ಏಷ್ಯಾ ಖಂಡದಲ್ಲಿ ಕೆಲವು ರಾಷ್ಟ್ರಗಳು ಪ್ರತಿಶತ ೧೫ರಷ್ಟು ಹಣಕಾಸನ್ನು ಗ್ರಾಮೀಣ ಜನಪದರಿಗೆ ನೀಡುತ್ತಾ ಬಂದಿವೆ. ಆದರೆ ಸಾಲ ವಿತರಣೆಯಲ್ಲಿ ಸಣ್ಣ ಮತ್ತು ಅತಿಸಣ್ಣ ರೈತರು ಬ್ಯಾಂಕಿಂಗ್ ವಲಯದಿಂದ ಕನಿಷ್ಟ ಪ್ರಮಾಣದ ನೆರವನ್ನು ಪಡೆದಿರುವುದಿಲ್ಲ. ಈ ರಾಷ್ಟ್ರಗಳಲ್ಲಿ ಮಾನವ ಮತ್ತು ನೈಸರ್ಗಿಕ ಸಂಪನ್ಮೂಲಗಳು ಹೇರಳವಾಗಿದ್ದು, ಅವುಗಳನ್ನು ಉಪಯೋಗಿಸಿಕೊಂಡು ಗ್ರಾಮೀಣ ಪ್ರದೇಶದ ಕೃಷಿ ಮತ್ತು ಅದರ ಉತ್ಪನ್ನಗಳನ್ನು ಹೆಚ್ಚಿಸಿಕೊಂಡು ಅವರ ಉದ್ಯೋಗಾವಕಾಶ ಮತ್ತು ವರಮಾನಗಳನ್ನು ಸುಧಾರಿಸಬೇಕಾಗಿದೆ.

ಆದರೆ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಸಂಪನ್ಮೂಲ ಕೊರತೆಯಲ್ಲಿವೆ. ಹಾಗಾಗಿ ಈ ರಾಷ್ಟ್ರಗಳ ಬೆಳವಣಿಗೆ ನಿಧಾನವಾಗಿರುತ್ತದೆ. ಅಭಿವೃದ್ಧಿಯನ್ನು ತ್ವರಿತಗೊಳಿಸಬೇಕಾದರೆ ವ್ಯವಸ್ಥಿತವಾದ ಬ್ಯಾಂಕಿಂಗ್ ಸೇವೆಯನ್ನು ರಾಷ್ಟ್ರದ ಎಲ್ಲಾ ಭಾಗಗಳಿಗೂ ವಿಸ್ತರಿಸಬೇಕಾಗಿದೆ. ಏಕೆಂದರೆ ಈ ವ್ಯವಸ್ಥೆಯು ವಾಣಿಜ್ಯ ಅಂಶಗಳ ಬೆಳವಣಿಗೆಗೆ ಸಹಾಯಕವಾಗುವುದರ ಜೊತೆಗೆ ಆರ್ಥಿಕಾಭಿವೃದ್ಧಿಗೆ ಪ್ರೋತ್ಸಾಹ ನೀಡುತ್ತದೆ. ಪ್ರಸತುತ ಸನ್ನಿವೇಶದಲ್ಲಿ ಬ್ಯಾಂಕುಗಳು ಭದ್ರತೆಯಾಧಾರದ ಮೇಲೆ ನೀಡುತ್ತಿದ್ದ ಪತ್ತನ್ನು ಉತ್ಪಾದನಾ ಆಧಾರಿತ ಮೇಲೆ ಬದಲಾಯಿಸಿಕೊಂಡಿರುವುದು ಆರೋಗ್ಯಕರವಾದ ಬೆಳವಣಿಗೆ ಎನ್ನಬಹುದು. ಇದು ಆರ್ಥಿಕಾಭಿವೃದ್ಧಿಗೆ ಹೊಸ ಚೇತನವನ್ನು ತರಬಹುದೆನ್ನುವಂತಹ ನಿರೀಕ್ಷೆ ಇಟ್ಟುಕೊಳ್ಳಬಹುದು.

ಬ್ಯಾಂಕುಗಳು ಉಳಿತಾಯಕ್ಕೆ ಪ್ರೋತ್ಸಾಹ ನೀಡಿ ಯೋಜಿತ ಹೂಟೆ ಮತ್ತು ಉಳಿತಾಯದ ನಡುವೆ ಕಂಡುಬರುವಂತಹ ಅಂತರ ಕಡಿಮೆಮಾಡುವಲ್ಲಿ ನಿರ್ಣಾಯಕ ಪಾತ್ರವಹಿಸುತ್ತವೆ. ಇದರ ಅಂತರವನ್ನು ಕಡಿಮೆ ಮಾಡಲು ಬ್ಯಾಂಕುಗಳು ಉಳಿತಾಯದ ಪ್ರಮಾಣವನ್ನು ಅಧಿಕಗೊಳಿಸುವುದರ ಮೂಲಕ ಸಾಧಿಸಲಾರಂಭಿಸಿವೆ. ಇದರ ಜೊತೆಗೆ ಕೃಷಿ ಮತ್ತು ಕೃಷಿಯೇತರ ವಲಯದಲ್ಲಿ ಸಾಂಪ್ರದಾಯ ಬೇಸಾಯ ಪದ್ಧತಿಯಿಂದ ಆಧುನಿಕ ಬೇಸಾಯ ಪದ್ಧತಿಯ ಕಡೆಗೆ ಜನಪದರನ್ನು ತರುವಲ್ಲಿ ಬ್ಯಾಂಕುಗಳು ಪರಿಶ್ರಮ ಪಡುತ್ತವೆ.

ಗ್ರಾಮೀಣ ಸಮಾಜವು ಸಂಪ್ರದಾಯ, ಕಂದಚಾರ, ಮೂಢನಂಬಿಕೆಗಳಿಂದ ಕೂಡಿದೆ. ಗ್ರಾಮೀಣ ಜನಪದರು ಬ್ಯಾಂಕಿನ ಜೊತೆ ವ್ಯವಹರಿಸುವುದು ಅಥವಾ ಬ್ಯಾಂಕಿನ ಸೇವೆಯನ್ನು ಪಡೆದುಕೊಳ್ಳುವುದಕ್ಕೆ ಪೂರಕವಾತಾವರಣವನ್ನು ಕಲ್ಪಿಸುವುದರಲ್ಲಿ ಇನ್ನು ಹೆಚ್ಚಿನ ಪರಿಶ್ರಮ ಪಡಬೇಕಾಗಿರುವುದು ಅನಿವಾರ್ಯವಾಗಿದೆ. ಏಕೆಂದರೆ ಗ್ರಾಮೀಣ ಜನಪದರು ತಮ್ಮ ಹಣವನ್ನು ನಗದಾಗಿಟ್ಟುಕೊಳ್ಳುವುದನ್ನು ತಪ್ಪಿಸಿ ಬ್ಯಾಂಕುಗಳಲ್ಲಿಟ್ಟರೆ ಸುರಕ್ಷಿತ ಎನ್ನುವುದನ್ನು ಮನದಟ್ಟು ಮಾಡಿಕೊಡುವಲ್ಲಿ ಬ್ಯಾಂಕರರು ಇನ್ನು ಯಶಸ್ಸು ಸಾಧಿಸಬೇಕಾಗಿದೆ. ಇಂತಹ ಸನ್ನಿವೇಶದಲ್ಲಿ ಬ್ಯಾಂಕರರು ಸೇವಾ ಭದ್ರತೆಯ ಬಗ್ಗೆ ಮತ್ತು ತಮ್ಮ ಹಣವನ್ನು ತಮಗೆ ಬೇಕಾದಾಗ ವಾಪಾಸ್ಸು ಪಡೆಯುವ ಅವಕಾಶವನ್ನು ಗ್ರಾಮೀಣ ಜನಪದರಿಗೆ ಮನದಟ್ಟು ಮಾಡಿಸಿ, ಉಳಿತಾಯದ ಪ್ರಮಾಣವನ್ನು ಹೆಚ್ಚಿಸಿಕೊಳ್ಳಲಿಕ್ಕೆ ಬ್ಯಾಂಕರರು ಆದ್ಯತೆ ನೀಡಬೇಕಾಗಿದೆ. ಅಷ್ಟೇ ಅಲ್ಲದೆ ವಿವಿಧ ಮಾಧ್ಯಮಗಳ ಮೂಲಕ ಜಾಹಿರಾತನ್ನು ನೀಡಿ ಗ್ರಾಮೀಣ ಜನಪದರ ಮನವೊಲಿಸಿ ಅವರನ್ನು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮದಲ್ಲಿ ತೊಡಗಿಸಿಕೊಳ್ಳುವಂತೆ ಮಾಡಬೇಕಾಗಿದೆ.

# ಅಧ್ಯಾಯ ೬

# ಉಪ ಸಂಹಾರ

ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯು ಬಹುತೊಡಕಾದ ಅಂಶವಾಗಿದೆ. ಏಕೆಂದರೆ ಬಹುಪಾಲು ಜನರು ಬಹುದೂರದ ಗ್ರಾಮಗಳಲ್ಲಿ ವಾಸಿಸುತ್ತಾರೆ. ಈ ಗ್ರಾಮಗಳ ಬಹುಪಾಲು ಜನರು ಕೃಷಿಯನ್ನವಲಂಬಿಸಿದ್ದಾರೆ. ಕೃಷಿ ಅವಲಂಬಿತ ಕುಟುಂಬಗಳಲ್ಲಿನ ಸದಸ್ಯರು ಅರೆ ಉದ್ಯೋಗಿಗಳಾಗಿದ್ದು, ಕೃಷಿ ಅವಲಂಬಿತ ಚಟುವಟಿಕೆಗಳಾದ ಪಶುಪಾಲನೆ, ಕುರಿಸಾಕಾಣೆ, ಕೋಳಿಸಾಕಾಣೆ ಇವುಗಳ ಜೊತೆಗೆ ಪರಂಪರಾಗತವಾಗಿ ನಡೆದುಬಂದಂತಹ ಬಡಗಿತನ, ಕಮ್ಮಾರಿಕೆ, ಕುಂಬಾರಿಕೆ, ಚಮ್ಮಾರಿಕೆ, ನೇಕಾರಿಕೆ ಇತ್ತೀಚಿಗೆ ಬಂದಂತಹ ಹೋಟೆಲ್, ತರಕಾರಿ ಮಾರಾಟ, ಮಡಿವಾಳಿಕೆ, ಹೇರ್‌ಕಟಿಂಗ್ ಮುಂತಾದವುಗಳಲ್ಲಿ ತೊಡಗಿದ್ದಾರೆ. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಬಡತನವು ಅಧಿಕವಾಗಿದೆ. ಸ್ವಾತಂತ್ರ್ಯದ ನಂತರದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗೆ ಪ್ರಯತ್ನಿಸಿವೆ. ಆದರೆ ಅಭಿವೃದ್ಧಿಯು ಅಲ್ಪಮಟ್ಟಿಗೆ ಆಗಿರುವುದನ್ನು ಕಾಣಬಹುದು. ಆದ್ದರಿಂದ ಭವಿಷ್ಯದಲ್ಲಿ ಯೋಜನೆಗಳ ಮೂಲಕ ಈ ಪ್ರದೇಶಗಳ ಅಭಿವೃದ್ಧಿಗೆ ಹಣಕಾಸಿನ ಸೌಲಭ್ಯವನ್ನು ಒದಗಿಸುವುದರ ಜೊತೆಗೆ, ಇದಕ್ಕೆ ಪೂರಕವಾದ ಸಿಬ್ಬಂದಿ ಹಾಗೂ ಫಲಾನುಭವಿಗಳ ಮತ್ತು ರಾಜಕೀಯ ಬದ್ಧತೆ ಹೆಚ್ಚಿಸಬೇಕಾಗಿದೆ.

ಕೃಷಿ ಚಟುವಟಿಕೆಗಳಿಂದ ಬರುವ ವರಮಾನ ಅನಿಶ್ಚಿತತೆಯಿಂದ ಕೂಡಿದೆ. ಆದ್ದರಿಂದ ಕೃಷಿಕರ ವರಮಾನವನ್ನು ಸುಧಾರಿಸಲು ಎಕರೆವಾರು ಉತ್ಪನ್ನವನ್ನು ಹೆಚ್ಚಿಸುವುದು ಸೂಕ್ತವಾಗಿದೆ. ಕೃಷಿ ಉತ್ಪನ್ನ ಸುಧಾರಿಸಬೇಕಾದರೆ ನೀರಾವರಿ ಸೌಲಭ್ಯವನ್ನು ವಿಸ್ತರಿಸುವುದರ ಮೂಲಕ ಸಾಧ್ಯವಾಗಬಹುದು. ಅಂದರೆ ಆ ಪ್ರದೇಶಗಳಲ್ಲಿ ಕೆರೆ, ಒಡ್ಡು, ಕಾಲುವೆ, ಸಣ್ಣ ಅಣೆಕಟ್ಟು, ಏತ, ತುಂತುರು, ಹನಿನೀರಾವರಿ ಯೋಜನೆಯನ್ನು ಅವರಿಗೊದಗಿಸುವುದರ ಮೂಲಕ ಉತ್ಪನ್ನವನ್ನು ಸುಧಾರಿಸಬಹುದು. ಇದರ ಜೊತೆಗೆ ಒಣಭೂಮಿ ಅಭಿವೃದ್ಧಿ ಯೋಜನೆಗಳನ್ನು ಅಭಿವೃದ್ಧಿಪಡಿಸುವುದರಿಂದ ಕೃಷಿಯನ್ನು ಸ್ವಾವಲಂಬನೆ, ವಲಯವನ್ನಾಗಿ ಪರಿವರ್ತಿಸಬಹುದು. ನೀರಾವರಿ ಸೌಲಭ್ಯಗಳನ್ನು ಗ್ರಾಮಗಳಲ್ಲಿರುವ ಎಲ್ಲಾ ಕುಟುಂಬಗಳಿಗೆ ಯಾವುದೇ ತಾರತಮ್ಯವಿಲ್ಲದಂತೆ ಒದಗಿಸಬೇಕು. ಸಣ್ಣ/ಅತಿಸಣ್ಣ ರೈತರಿಗೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ನೀರಿನ ಬರದಿಂದ ಮುಕ್ತಗೊಳಿಸಬೇಕು. ಇವರೆಲ್ಲರಿಗೂ ತಾಂತ್ರಿಕ ಸೇವೆ,. ತರಬೇತಿ ಶಿಬಿರಗಳ ಮೂಲಕ ಸೌಲಭ್ಯಗಳನ್ನು ಒದಗಿಸುವುದರಿಂದ ಅವರನ್ನು ಅಭಿವೃದ್ಧಿ ಪಡಿಸಬಹುದು.

ಗ್ರಾಮೀಣ ಪ್ರದೇಶಗಳಿಗೆ ಮೂಲಭೂತ ಸೌಕರ್ಯಗಳಾದ ಉತ್ತಮವಾದ ರಸ್ತೆ, ಸಾರಿಗೆ ವ್ಯವಸ್ಥೆ, ಶಾಲಾ ವ್ಯವಸ್ಥೆ, ಚರಂಡಿ ವ್ಯವಸ್ಥೆ, ಗ್ರಂಥಾಲಯ, ಆಸ್ಪತ್ರೆ, ಶೌಚಾಲಯ, ವಿದ್ಯುತ್, ವಯಸ್ಕರ ಶಿಕ್ಷಣ, ಹಣಕಾಸಿನ ಸೌಲಭ್ಯ ಇವುಗಳ ಜೊತೆಗೆ ಕೃಷಿಕರು ಬೆಳೆದಂತಹ ದವಸ-ಧಾನ್ಯಗಳನ್ನು ಸಂಗ್ರಹಿಸಲು ಉಗ್ರಾಣದ ವ್ಯವಸ್ಥೆ, ಜಾನುವಾರುಗಳಿಗೆ ಪಶು ಆಸ್ಪತ್ರೆ, ಗ್ರಾಮೀಣ ಸಂತೆ ಇನ್ನೂ ಮುಂತಾದ ಸೌಲಭ್ಯಗಳನ್ನು ಒದಗಿಸುವುದರಿಂದ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ. ಈ ಎಲ್ಲಾ ಸೌಲಭ್ಯಗಳನ್ನು ಎಲ್ಲಾ ಗ್ರಾಮಗಳಿಗೆ ಒದಗಿಸಲು ಸಾಧ್ಯವಾಗುವ ರೀತಿಯಲ್ಲಿ ಪ್ರಯತ್ನಿಸಬೇಕು. ಆದರೆ ಕೆಲವೊಂದು ಗ್ರಾಮಗಳು ಸರ್ಕಾರದ ಸವಲತ್ತುಗಳನ್ನು ಪಡೆದುಕೊಂಡು ಅಭಿವೃದ್ಧಿ ಸಾಧಿಸುವಲ್ಲಿ ವಿಫಲವಾಗಿವೆ. ಆದ್ದರಿಂದ ಕೇಂದ್ರ-ರಾಜ್ಯ, ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗಳು ಆದ್ಯತೆ ನೀಡಿ ಮುಂದಿನ ಯೋಜನೆಗಳಲ್ಲಿ ಜನರು ಸ್ವ-ಇಚ್ಛೆಯಿಂದ ಬೆರೆತುಕೊಂಡು ಯೋಜನೆಯ ಲಾಭ ಬೇರೆಯವರ ಪಾಲಾಗದಂತೆ ನೋಡಿಕೊಳ್ಳಬೇಕಾಗಿದೆ.

ಜನಸಾಮಾನ್ಯರು ಆವೇಶಭರಿತರಾಗಿ ಮಾರುಕಟ್ಟೆ ನ್ಯೂನ್ಯತೆಯ ಬಗ್ಗೆ ತಮ್ಮ ಭಾವನೆ ವ್ಯಕ್ತಪಡಿಸಿದ್ದಾರೆ. ವಾಣಿಜ್ಯ ಬ್ಯಾಂಕುಗಳಲ್ಲದೆ, ಕೃಷಿ ಮಾರುಕಟ್ಟೆಯನ್ನು ಎಲ್ಲಾ ಗ್ರಾಮೀಣ ಬ್ಯಾಂಕುಗಳ ಜೊತೆ ಸಹಕರಿಸಬೇಕೆಂದು ಸಲಹೆ ನೀಡಿದ್ದಾರೆ. ಈ ಮಾರುಕಟ್ಟೆಗಳು ಕೃಷಿಕರಿಗೆ ಬೇಕಾದ ಎಲ್ಲಾ ಸೌಲಭ್ಯಗಳನ್ನು ಒದಗಿಸಿಕೊಡಬೇಕಾಗಿದೆ. ಈ ಬ್ಯಾಂಕುಗಳ ಮೂಲಕ ಸಾಲ ಪಡೆಯಲಿ, ಪಡೆಯದೇ ಇರಲಿ ಅಂತಹವರು ಯಾವುದೇ ಕಾರಣಕ್ಕೂ ಮಧ್ಯವರ್ತಿಗಳ, ದಲ್ಲಾಳರ, ಶ್ರೀಮಂತರ, ಜಮೀನ್ದಾರರ ಶೋಷಣೆಗೆ ಒಳಗಾಗದಂತೆ ರಾಜ್ಯಸರ್ಕಾರ ಸೂಕ್ತ ಕ್ರಮಕೈಗೊಂಡು ರೈತರ ಹಿತವನ್ನು ಕಾಪಾಡುವುದರಿಂದ ಅವರ ಆತ್ಮಹತ್ಯೆಯಂತಹ ಘಟನೆಗಳನ್ನು ತಡೆಯಬಹುದಾಗಿದೆ.

ನಮ್ಮ ರಾಷ್ಟ್ರದಲ್ಲಿ ಕೃಷಿಕನ ಉತ್ಪಾದನೆಗೆ ಸರಿಯಾದ ಬೆಲೆ ಇಲ್ಲ. ಸುಗ್ಗಿಯ ಕಾಲಲದ್ಲೇ ಅತ್ಯಲ್ಪ ಮೊತ್ತಕ್ಕೆ ತಾನು ಬೆಳೆದ ಬೆಳೆಯನ್ನು ಮಾರಾಟ ಮಾಡುತ್ತಾನೆ. ಕೃಷಿಕರಿಗೆ ಬರೀ ಬೆಂಬಲ ಬೆಲೆ ಕೊಟ್ಟರೆ ಸಾಲದು ಏಕೆಂದರೆ ಬೆಂಬಲ ಬೆಲೆ ಪಡೆದವರು ದೊಡ್ಡ ರೈತರಾಗಿರುತ್ತಾರೆ. ಆದ್ದರಿಂದ ಸಣ್ಣ/ಅತಿಸಣ್ಣ ರೈತರು ಬೆಳೆದಂತಹ ಬೆಳೆಗೆ ಉತ್ತಮ ಬೆಲೆ ಸಿಗುವಂತೆ ಆಗಬೇಕಾದರೆ ಕೃಷಿಯನ್ನು ಕೂಡ ಉದ್ಯಮವೆಂದು ಪರಿಗಣಿಸಿದರೆ ಮಾತ್ರ ಕೃಷಿಕರಿಗೆ ಉತ್ತಮವಾದ ಬೆಲೆ ದೊರೆತು ವರಮಾನ ಸುಧಾರಿಸಿಕೊಳ್ಳಬಹುದು.

ರೈತರು ತಮ್ಮ ಭೂಮಿಯಲ್ಲಿ ಮಿಶ್ರ ಬೆಳೆಗಳನ್ನು ತೆಗೆದರೆ ಮಾತ್ರ ಪ್ರಸ್ತುತ ದಿನಗಳಲ್ಲಿ ವರಮಾನ ಪಡೆಯಲು ಸಾಧ್ಯ. ಏಕೆಂದರೆ ಅಲ್ಪ ಮಳೆಗಾಲದಲ್ಲೂ ಯಾವುದಾದರೂ ಒಂದು ಬೆಳೆ ಸಿಗಲಿಕ್ಕೆ ಸಾಧ್ಯವಾಗುವುದರಿಂದ ಮಿಶ್ರ ಬೆಳೆಯು ಸೂಕ್ತವೆಂದು ತಿಳಿಸಬಹುದು.

ಗ್ರಾಮೀಣ ಪ್ರದೇಶಗಳಲ್ಲಿನ ನಿವಾಸಿಗಳು ರಾಷ್ಟ್ರದ ಅಭಿವೃದ್ಧಿಯ ಬೆನ್ನೆಲುಬಾಗಿದ್ದಾರೆ. ಪ್ರತಿಶತ ೯೦ರಷ್ಟು ಜನರು ಆ ಪ್ರದೇಶಗಳಲ್ಲಿ ವಾಸಮಾಡುತ್ತಿದ್ದರೆ, ಇನ್ನುಳಿದ ನಿವಾಸಿಗಳು ಪಟ್ಟಣಕ್ಕೆ ಲಾಭದಾಯಕ ಹುದ್ದೆಗಳನ್ನು ಹುಡುಕಿಕೊಂಡು ಬರುತ್ತಾರೆ. ಹೀಗೆ ಪಟ್ಟಣಕ್ಕೆ ವಲಸೆ ಬಂದ ಜನಪದರು ಮತ್ತೆಂದೂ ತಮ್ಮ ಗ್ರಾಮಗಳಿಗೆ ಹಿಂದಿರುಗುವ ಮನಸ್ಸು ಮಾಡುವುದಿಲ್ಲ. ಏಕೆಂದರೆ ಅವರು ಪಟ್ಟಣ ಪ್ರದೇಶಗಳ

ಮನೋವೃತ್ತಿ ಬೆಳೆಸಿಕೊಂಡಿರುತ್ತಾರೆ. ಇನ್ನು ಕೆಲವು ಬಡ ಜನರು ಉದ್ಯೋಗಗಳನ್ನು ಅರಸಿಕೊಂಡು ಪಟ್ಟಣಕ್ಕೆ ಬಂದು ವಾಸಕ್ಕೆ ಯೋಗ್ಯಸ್ಥಳ ದೊರೆಯದೆ ತಾತ್ಕಾಲಿಕವಾಗಿ ಕೊಳಚೆ ಪ್ರದೇಶಗಳಲ್ಲಿ ಗುಡಿಸಲುಗಳನ್ನು ಹಾಕಿಕೊಂಡು ವಾಸ ಮಾಡುತ್ತಾರೆ. ಇದರಿಂದಾಗಿ ಪಟ್ಟಣ ಪ್ರದೇಶಗಳಲ್ಲಿ ಕೊಳಚೆ ಪ್ರದೇಶಗಳು ಬೆಳೆಯುತ್ತವೆ. ಇವರಿಗೆ ಸರಿಯಾದ ಉದ್ಯೋಗ ಸಿಗದೇ ಇದ್ದಾಗ ಕಾನೂನು ಬಾಹಿರ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಇದಲ್ಲದೆ ಈ ಪ್ರದೇಶಗಳಲ್ಲಿ ವಾಸಮಾಡುವುದರಿಂದ ಜೀವನಪೂರ್ತಿ ಅನಾರೋಗ್ಯ ಪರಿಸ್ಥಿತಿಯಲ್ಲಿ ಕಾಲ ಕಳೆಯುತ್ತಾರೆ. ಆದ್ದರಿಂದ ಗ್ರಾಮೀಣ ಪ್ರದೇಶಗಳಿಂದ ವಲಸೆ ಹೋಗುವವರನ್ನು ಮತ್ತು ಬರುವವರನ್ನು ಪಂಚಾಯ್ತಿಗಳು ಮತ್ತು ಮುನಸಿಪಾಲಿಟಿಗಳು ತಡೆಗಟ್ಟಲು ಮುಂದಾಗಬೇಕು. ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳಾದ

ಉದ್ಯಾನವನ ನಿರ್ಮಾಣ, ಗ್ರಾಮಗಳನ್ನು ಸ್ವಚ್ಛ ಮತ್ತು ಸುಂದರವಾಗಿಡಲು ಪ್ರಯತ್ನಿಸುವುದು. ಕೃಷಿಯೇತರ ಚಟುವಟಿಕೆಗಳಾದ ಸಣ್ಣ ಹೋಟೆಲ್, ಕರಕುಶಲ ವಸ್ತುಗಳ ಉತ್ಪಾದನೆ, ಹೊಲಿಗೆ ಕೆಲಸ, ಕಸೂತಿಕೆಲಸ, ಬಡಗಿತನ, ಕುಂಬಾರಿಕೆ, ತರಕಾರಿ ಮಾರಾಟ, ಚಿಲ್ಲರೆ ವ್ಯಾಪಾರ ಮುಂತಾದ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡುವುದು. ಗ್ರಾಮಗಳಲ್ಲಿ ವಾಹನ ನಿಲ್ದಾಣಗಳನ್ನು ನಿರ್ಮಿಸುವುದು, ವಾಚನಾಲಯಗಳನ್ನು ಸ್ಥಾಪಿಸುವುದು. ಸುಶಿಕ್ಷಿತ ನಿರುದ್ಯೋಗಿಗಗಳಿಗೆ, ಭೂರಹಿತ ಕಾರ್ಮಿಕರಿಗೆ ತರಬೇತಿ ನೀಡಿ ಸ್ವಯಂ ಉದ್ಯೋಗಕ್ಕೆ ಅವಕಾಶ ಕಲ್ಪಿಸುವುದು ಹಾಗೂ ಅವರಿಂದ ಉತ್ಪಾದಿಸಲ್ಪಟ್ಟಂತಹ ವಸ್ತುಗಳಿಗೆ ರಾಜ್ಯಸರ್ಕಾರ ಮಾರುಕಟ್ಟೆ ಒದಗಿಸಿದರೆ ಅವರ ವಲಸೆ ತಪ್ಪಿಸಬಹುದು. ಜನಸಾಮಾನ್ಯರಿಗೆ ಮನರಂಜನಾ ಮಾರ್ಗಗಳಾದ ಸಿನಿಮಾ, ನಾಟಕ, ಜಾನಪದ ನೃತ್ಯ, ಗ್ರಾಮೀಣ ಜನಪದ ಕಲೆಗಳು ಇವುಗಳಿಗೆ ಪ್ರೋತ್ಸಾಹ ನೀಡಿದರೆ ಅವರು ವಲಸೆ ನಿಲ್ಲಿಸುತ್ತಾರೆ. ಇಂತಹ ಗ್ರಾಮೀಣ ಮನರಂಜನೆಗೆ ಸರ್ಕಾರ ಯಾವುದೇ ಕಾರಣಕ್ಕೂ ತೆರಿಗೆ ವಿಧಿಸಬಾರದು, ತೆರಿಗೆ ವಿಧಿಸಿದರೆ ಪುನಃ ವಲಸೆ ಆರಂಭಿಸುತ್ತಾರೆ. ಗ್ರಾಮೀಣ ಕ್ರೀಡೆಗಳಾದ ಕಬಡ್ಡಿ, ಚಿನ್ನಿದಾಂಡು, ಅಟ್ಯಾ-ಪಾಟ್ಯಾ, ಲಗೋರಿ, ಅಳಗುಳಿಮಣೆ ಕುಂಟಾಬಿಲ್ಲೆ ಆಟ, ಗುಂಡು ಎತ್ತುವ ಸ್ಪರ್ಧೆ, ಬಂಡಿ ಹಾಗು ಎತ್ತುಗಳನ್ನು ಓಡಿಸುವ ಸ್ಪರ್ಧೆ, ತೆಂಗಿನಕಾಯಿ ಒಡೆಯುವ ಸ್ಪರ್ಧೆ, ಟಗರಿನ/ಕೋಳಿಕಾಳಗ ಸ್ಪರ್ಧೆಗಳಿಗೆ ಪ್ರೋತ್ಸಾಹ ನೀಡಬೇಕು. ಈ ಕ್ರೀಡೆಗಳನ್ನು ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ನಡೆಸುವುದರಿಂದ ವಲಸೆ ತಡೆಗಟ್ಟಬಹುದು.

ರಾಷ್ಟ್ರದಲ್ಲಿ ಖಾಸಗೀಕರಣ/ಉದಾರೀಕರಣ/ಜಾಗತೀಕರಣ ಪ್ರಾರಂಭವಾಗಿ ಒಂದೂವರೆ ದಶಕಗಳಾಗಿ ಎಲ್ಲಾ ರಂಗದಲ್ಲೂ ಅಡಿ ಇಟ್ಟಿದೆ. ಈ ಯುಗದಲ್ಲಿ ಕಾರ್ಯಕ್ಷಮತೆ ಇಲ್ಲದವರ ಮತ್ತು ಅನಕ್ಷರಸ್ತರಿಗೆ ಇತರರಷ್ಟು ಅವಕಾಶಗಳು ಲಭ್ಯವಾಗುವುದಿಲ್ಲ. ಇದರಿಂದಾಗಿ ಸಮಾಜದಲ್ಲಿ ಆರ್ಥಿಕ ಅಸಮಾನತೆ ಹೆಚ್ಚಾಗುವ ಸಾಧ್ಯತೆಯಿದೆ. ಆದ್ದರಿಂದ ಬಾಂಗ್ಲಾದೇಶದ ಹೆಸರಾಂತ ಆರ್ಥಿಕ ತಜ್ಞರಾದ ಮಹಮ್ಮದ್ ಯುನಿಸ್ ಹೇಗೆ ಎಲ್ಲಾ ಕಡೆ ಸಣ್ಣ ಸಣ್ಣ ಸಾಲಗಳನ್ನು ಸೃಷ್ಟಿಸಿ ಆ ರಾಷ್ಟ್ರದ ಅಭಿವೃದ್ಧಿಗೆ ಪೂರಕವಾದರೋ, ಅದೇ ರೀತಿ ನಮ್ಮ ರಾಷ್ಟ್ರದಲ್ಲಿನ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಕಾರ್ಯನಿರ್ವಹಿಸಿದರೆ ಗ್ರಾಮೀಣ ಬಡಜನಪದರ ಏಳಿಗೆಗೆ ಉತ್ತಮ ವ್ಯವಸ್ಥೆಯಾಗುವುದರಲ್ಲಿ ಸಂದೇಹವಿಲ್ಲ.

ರಾಷ್ಟ್ರದ ಮುಂಚೂಣಿಯಲ್ಲಿರುವ ರಾಷ್ಟ್ರೀಕರಣಗೊಂಡ ಬ್ಯಾಂಕಾದ ಕಾರ್ಪೋರೇಷನ್ ಬ್ಯಾಂಕು ಶಾಖಾರಹಿತ ಬ್ಯಾಂಕಿಂಗ್ ವ್ಯವಸ್ಥೆಯನ್ನು ಆರ್.ಬಿ.ಐ. ಅನುಮೋದನೆಯೊಂದಿಗೆ ಜಾರಿಗೆ ತಂದಿದೆ. ಈ ವ್ಯವಸ್ಥೆಯು ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆಯ ಎರಡು ಹಳ್ಳಿಗಳಲ್ಲಿ ಪ್ರಾಯೋಗಿಕವಾಗಿ ಜಾರಿಗೆ ತಂದು ಯಶಸ್ಸಿನತ್ತ ಮುನ್ನಡೆದಿದೆ. ಈ ರೀತಿಯಾಗಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಈ ವ್ಯವಸ್ಥೆಯನ್ನು ಜಾರಿಗೆ ತಂದರೆ, ಬಹುದೂರದಲ್ಲಿರುವ ಗ್ರಾಮಗಳಲ್ಲಿನ ದುರ್ಬಲ ವರ್ಗದವರ ಪ್ರಗತಿಯನ್ನು ಕಾಣಲು ಸಾಧ್ಯವಾಗಬಹುದು.

**ಶಾಖಾರಹಿತ ಯೋಜನೆ**

ಈ ಮಾದರಿಯಲ್ಲಿ ಗ್ರಾಹಕನ ಹೆಬ್ಬೆಟ್ಟಿನ ಗುರುತನ್ನು ಆತನ ಖಾತೆಯ 'ಕೊಡಸಂಖ್ಯೆ' ಎಂದು ಪರಿಗಣಿಸಲಾಗಿದ್ದು ಅದರ ಜೊತೆಗೆ ಅವರ ಭಾವಚಿತ್ರವಿರುವ ವಿಳಾಸ ಸಹಿತ ಖಾತೆದಾರನ ಗುರುತಿನ ಚೀಟಿ ಸ್ಮಾರ್ಟ್‌ಕಾರ್ಡನ್ನು ಬ್ಯಾಂಕುಗಳು ನೀಡುತ್ತವೆ.

ಈ ಪ್ರದೇಶಗಳಲ್ಲಿ ಜನರು ಒಂದೆಡೆ ಸೇರುವ ಸಂತೆಗಳು, ಊರುಕೇರಿ, ಚಾವಡಿಗಳು, ದೇವಸ್ಥಾನಗಳು, ಸಾರ್ವಜನಿಕ ಸಭಾಂಗಣದಲ್ಲಿ ಸೇರುವ ತನ್ನ ಗ್ರಾಹಕರಿಗೆ ನಿಗದಿತ ವೇಳೆಯ ಅಂಕುಶವಿಲ್ಲದೆ ಇಡೀ ದಿನ ತಮ್ಮ ವ್ಯವಹಾರವನ್ನು ನಡೆಸಬಹುದು. ಆರ್.ಬಿ.ಐ.ನ ಅನುಮೋದನೆಯೊಂದಿಗೆ ಎಲ್ಲಾ ಗ್ರಾಮೀಣ ಬ್ಯಾಂಕುಗಳು ಅಳವಡಿಸಿಕೊಂಡು ಕಾರ್ಯಗತಗೊಳಿಸಬೇಕು.

ಗುಡ್ಡಗಾಡುಗಳಲ್ಲಿ ವಾಸಿಸುವ ಗ್ರಾಮೀಣ ರೈತರು, ಕುಗ್ರಾಮದಲ್ಲಿ ವಾಸಿಸುವ ಹಾಲು ಉತ್ಪಾದಕರು ಬ್ಯಾಂಕ ವ್ಯವಹಾರ ನಡೆಸಲು ಹತ್ತಾರು ಮೈಲಿ ಪಯಣಿಸಿ, ದೊಡ್ಡ ಊರುಗಳಿಗೆ ಹೋಗಿ ಅಲ್ಲಿಯ ಬ್ಯಾಂಕ್ ಶಾಖೆಗಳಿಗೆ ಭೇಟಿನೀಡುವ ಅವಶ್ಯಕತೆ ಇನ್ನು ಮುಂದೆ ಬಾರದು. ಈ ಕೆಲಸಕ್ಕಾಗಿ ಬ್ಯಾಂಕುಗಳಿಂದ ನೇಮಿಸಲ್ಪಟ್ಟ ಅದೇ ಗ್ರಾಮದ ಸುಶಿಕ್ಷಿತ ಕಾರ್ಯಕರ್ತನಿಂದ ಬ್ಯಾಂಕಿಂಗ್‌ಸೇವೆ ಗ್ರಾಮೀಣ ಜನರ ಮನೆ ಬಾಗಿಲಿಗೆ ದೊರೆಯುವಂತಿದೆ.

ಜಪಾನ್ ದೇಶದ ರೈತ ಮಸನೋಬು ಪುಕೋಕಾ ಪ್ರಕೃರ್ತಿಯಲ್ಲಿನ ವಿದ್ಯಮಾನಗಳನ್ನು ಅಭ್ಯಾಸ ಮಾಡಿ ಸಹಜ 'ಕೃಷಿ ಪದ್ಧತಿ'ಯನ್ನು ರೂಪಿಸಿದವರು. ಇದು ಕೇವಲ ಕೃಷಿ ವಿಧಾನವಷ್ಟೇ ಆಗಬಾರದು. ನಮ್ಮ ಬದುಕಿನ ಚಿಂತನೆ ಕ್ರಮವೂ ಆಗಬೇಕು ಎಂದಿದ್ದರು. ಆದರೆ ಈಗಿನ ರೈತ ಬದಲಾಗಿದ್ದಾನೆ ಎತ್ತು ಬಳಸಿ ಉಳುಮೆ ಮಾಡುವ ಗೊಬ್ಬರ ತಯಾರಿಸುವ, ಬೀಜ ಸಂಸ್ಕರಿಸುವ, ಒಕ್ಕಣೆ ಕೊಡುವ, ಮಣ್ಣಿನ ಸೂಕ್ಷ್ಮ ಜೀವಿಗಳು ಸಾಯುತ್ತಿರುವುದು ಕ್ರಿಮಿನಾಶಕಗಳಿಂದಾಗಿ, ಜೀನ್ನೊಣ್ಣ ಪಾತರಗಿತ್ತಿ ಹೊಲಗಳಿಗೆ ಬರುವುದನ್ನು ನಿಲ್ಲಿಸಿವೆ. ಟ್ರಾಕ್ಟರ ಭರಾಟೆಯಲ್ಲಿ ಎತ್ತುಗಳು ಕಸಾಯಿಕಾನೆ ಸೇರ ತೊಡಗಿವೆ. ಕಂಪನಿ ಬೀಜಗಳಿಂದಾಗಿ ಸ್ಥಳೀಯ ಬೀಜಗಳು ಉಳ ಇಡಿದಿವೆ. ಆದ್ದರಿಂದ ನಮ್ಮ ಮೂಲ ಕೃಷಿಯನ್ನು ಒಂದು ಸಂಸ್ಕೃತಿ ಎಂಬಂತೆ ಪಾಲಿಸಿಕೊಂಡು ಹೋಗಬೇಕಾದ ಅವಶ್ಯಕತೆಯಿದೆ. ಆದ್ದರಿಂದ ನಮ್ಮ ರೈತರು ಸಾವಯವ ಗೊಬ್ಬರ ಉಪಯೋಗಿಸಿ ಬೆಳೆ ಬೆಳೆದರೆ ಮಣ್ಣಿನ ಪೋಷಣೆ ರಕ್ಷಣೆಯಾಗಿ ಉತ್ಪನ್ನ ಹೆಚ್ಚಾಗಬಹುದು. ಜೊತೆಗೆ ಕೃಷಿ ವೆಚ್ಚ ಕಡಿಮೆಯಾಗಬಹುದು. ಸುಸ್ಥಿರ ಕೃಷಿಯನ್ನು ಅಳವಡಿಸಿಕೊಂಡು ಮುಂದಿನ ಪೀಳಿಗೆಗೆ ಭೂಮಿಯ ಫಲವತ್ತತೆಯನ್ನು ಮಾಡುವ ಕಾರ್ಯಮಾಡಬಹುದಾಗಿದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಜನಸಾಮಾನ್ಯರ ಸಾಲಮನ್ನಾ ಕಾರ್ಯಕ್ರಮವನ್ನು ೨೦೦೬-೦೭, ೦೭-೦೮ರಲ್ಲಿ ಜಾರಿಗೊಳಿಸಿ ಸುಮಾರು ೧ ಲಕ್ಷಕೋಟಿ ರೂಪಾಯಿಗಳ ಸಾಲವನ್ನು ಮನ್ನಾಮಾಡಿದ್ದಾರೆ. ಅದನ್ನು ವಾಣಿಜ್ಯ/ಸಹಕಾರಿ/ಗ್ರಾಮೀಣ ಬ್ಯಾಂಕುಗಳಿಗೂ ಅನ್ವಯವಾಗುವಂತೆ ಜಾರಿಗೆ ತಂದಿದ್ದಾರೆ. ಆದರೆ ಅದರ ಪ್ರಭಾವವು ದುರ್ಬಲ ವರ್ಗದವರಿಗಿಂತ ಶ್ರೀಮಂತ ವರ್ಗದವರು ಹೆಚ್ಚಿನ ಲಾಭ ಪಡೆದಿರುತ್ತಾರೆ. ಆದ ಕಾರಣ ಸಮಾಜದಲ್ಲಿನ ಎಲ್ಲಾ ದುರ್ಬಲವರ್ಗದವರಿಗೂ ಸಾಲಮನ್ನಾ ದೊರೆಯುವಂತಾಗಬೇಕು.

ಇತ್ತೀಚಿನ ದಿನಗಳಲ್ಲಿ ಸಣ್ಣ/ಅತಿಸಣ್ಣ ರೈತರ ಹಿತಾಸಕ್ತಿಗೆ ವಿರುದ್ಧವಾದ ಆರ್ಥಿಕ ಮತ್ತು ವಾಣಿಜ್ಯ ವ್ಯವಸ್ಥೆ ಒಂದೆಡೆಯಾದರೆ, ವರುಷದಿಂದ ವರುಷಕ್ಕೆ ಕಡಿಮೆಯಾಗುತ್ತಿರುವ ಮಳೆಯ ಪ್ರಮಾಣ, ಸುಧಾರಿತ ಬೇಸಾಯ ಪದ್ಧತಿ ಕೈಗೊಳ್ಳಲು ಹಣದ ಅಭಾವ, ಶಿಕ್ಷಣ ಮತ್ತು ಸಾಮಾನ್ಯ ಜ್ಞಾನದ ಅಭಾವದಿಂದ ಅವರ ಪರಿಸ್ಥಿತಿ ತುಂಬಾ ಕ್ಲಿಷ್ಟಕರವಾಗಿದೆ. ಪ್ರಸ್ತುತ ರಾಷ್ಟ್ರದ ಕೃಷಿ ಕ್ಷೇತ್ರಕ್ಕೆ ಅಲ್ಪಾವಧಿಯ ಸಾಲದ ಅವಶ್ಯಕತೆ ವರ್ಷಕ್ಕೆ ೧ ಲಕ್ಷ ಕೋಟಿ ರೂಪಾಯಿಗಳಾದರೆ, ಬ್ಯಾಂಕು ಮತ್ತು ಇತರೆ ಹಣಕಾಸಿನ ಸಂಸ್ಥೆಗಳಿಂದ ದೊರಕುತ್ತಿರುವ ಸಾಲದ ಪ್ರಮಾಣ ಪ್ರತಿಶತ ೧೨ ರಿಂದ ೧೪ರಷ್ಟು ಮಾತ್ರವಾಗಿದೆ. ಆದ್ದರಿಂದ ಬ್ಯಾಂಕುಗಳು ಮುಂದಿನ ದಿನಗಳಲ್ಲಿ ಈ ಪ್ರಮಾಣವನ್ನು ಸುಧಾರಿಸಿ ರಾಷ್ಟ್ರದ ಕೃಷಿಕರ ಅಭಿವೃದ್ಧಿಗೆ ಪ್ರೋತ್ಸಾಹ ನೀಡುತ್ತಾರೆ ಎಂಬ ಆಶಯವನ್ನು ಹೊಂದಬಹುದಾಗಿದೆ.

ಸಾಲ ಮನ್ನಾದಂತಹ ಕಾರ್ಯಕ್ರಮಗಳು ಸಾಲಮರುಪಾವತಿ ಮಾಡದವರಿಗೆ ಅನುಕೂಲವಾಗುತ್ತದೆ. ಆದರೆ ನಿಜವಾಗಿ ಸಾಲ ಮರುಪಾವತಿ ಮಾಡುವವರೂ ಕೂಡ ಮುಂದಿನ ದಿನಗಳಲ್ಲಿ ಸಾಲಮರುಪಾವತಿ ಮಾಡಬಾರದೆಂಬ ನಿರ್ಧಾರಕ್ಕೆ ಬರುತ್ತಾರೆ. ಆದಕಾರಣ ಸರ್ಕಾರಗಳು ಸಾಲಮನ್ನಾ ಯೋಜನೆಗಳನ್ನು ಜಾರಿಗೆ ತಂದಾಗ ಅವರಿಗೂ ಹಣವಾಪಸ್ಸು ಮಾಡುವಂತಹ ಕಾರ್ಯಕ್ರಮದಿಂದ ಅವರಿಗೂ ಉತ್ತೇಜನ ಸಿಗಬಹುದೆಂಬ ಆಶಯವನ್ನು ವ್ಯಕ್ತಪಡಿಸಬಹುದು.

ರಾಷ್ಟ್ರದ ಜನಪದರು ದುಶ್ಚಟಗಳಿಂದ ದೂರಾಗಿ, ಕಷ್ಟಪಟ್ಟು ದುಡಿಯುತ್ತಾ ಹೋದರೆ, ಅವರ ಆರ್ಥಿಕ ಪರಿಸ್ಥಿತಿ ಸುಧಾರಿಸುತ್ತದೆ. ಆಗ ಅವರು ಯಾರ ಗುಲಾಮರಾಗಿ ಸಲಾಮು ಹೊಡೆಯುವ ಅಗತ್ಯ ಬೀಳುವುದಿಲ್ಲ. ಗ್ರಾಮೀಣ ಬ್ಯಾಂಕುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಯು ಸಾಕಷ್ಟು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕೆಲವೊಂದು ಪ್ರದೇಶಗಳಲ್ಲಿ ಆ ಸಿಬ್ಬಂದಿಗೆ ಬೇಕಾದ ಆಹಾರ, ಕುಡಿಯುವ ನೀರು ಸಿಗುವುದು ಕಷ್ಟವಾಗಿದೆ. ಈ ಸಿಬ್ಬಂದಿಗಳ ಮಕ್ಕಳಿಗೆ ಬೇಕಾದ ಉತ್ತಮಶಿಕ್ಷಣ, ವೈದ್ಯಕೀಯ ಸೌಲಭ್ಯ, ಸಾರಿಗೆ ಸಂಪರ್ಕದ ಕೊರತೆಯು ಕೂಡ ಇದೆ. ಸರಕಾರವು ಈ ಪ್ರದೇಶಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಟ್ಟದ್ದಾರೆ. ಇವರ ಪರಿಸ್ಥಿತಿ ಸುಧಾರಿಸುತ್ತದೆ ಹಾಗೂ ಕರ್ತವ್ಯವನ್ನು ನಿಭಾಯಿಸಲು ಸಾಧ್ಯವಾಗುತ್ತದೆ.

ಈ ಬ್ಯಾಂಕುಗಳಲ್ಲಿ ಸಂದೇಶ ವಾಹಕರ ಹುದ್ದೆಯನ್ನು ಮಂಜೂರು ಮಾಡಿರುವುದಿಲ್ಲ. ಇವರನ್ನು ತಾತ್ಕಾಲಿಕವಾಗಿ ದಿನಗೂಲಿ ಆಧಾರದ ಮೇಲೆ ನೇಮಕ ಮಾಡಿಕೊಂಡಿರುತ್ತಾರೆ. ಹೀಗೆ ಹಲವಾರು ವರ್ಷ ಕಾರ್ಯನಿರ್ವಹಿಸಿದರೂ ಇವರಿಗೆ ಯಾವುದೇ ಸೇವಾಭದ್ರತೆಯನ್ನು ಒದಗಿಸಿಲ್ಲ. ಇವರನ್ನು ಖಾಯಂ

ಮಾಡಬೇಕೆಂದು ಹೈಕೋರ್ಟಿನ ಆದೇಶವಾದರೂ ಅದನ್ನು ಜಾರಿಗೊಳಿಸಿರುವುದಿಲ್ಲ. ಆದಕಾರಣ ಆ ಹುದ್ದೆಯನ್ನು ಖಾಯಂಗೊಳಿಸಿ ಅವರಿಗೆ ನ್ಯಾಯಬದ್ಧವೇತನ ನೀಡಬೇಕು.

ಬ್ಯಾಂಕುಗಳಲ್ಲಿ ಹಲವು ಕಡೆ ಸಿಬ್ಬಂದಿ ಕೊರತೆಯಿದೆ. ಕೆಲವು ಶಾಖೆಗಳಲ್ಲಿ ಕೃಷಿಕ್ಷೇತ್ರ ಅಧಿಕಾರಿಗಳು ಇರುವುದಿಲ್ಲ. ಇದರಿಂದ ವ್ಯವಸ್ಥಾಪಕ ಪ್ರಬಂಧಕರಿಗೆ ಕೃಷಿ ಚಟುವಟಿಕೆಗಳಲ್ಲಿ ಸಾಲ ವಿತರಿಸುವುದು ಕಷ್ಟವಾಗುತ್ತದೆ. ಆದ ಕಾರಣ ಎ.ಇ.ಓ. ಕೃಷಿ ವಿಸ್ತರಣಾ ಅಧಿಕಾರಿ ಇಲ್ಲದ ಶಾಖೆಗಳಲ್ಲಿ ಅವರನ್ನು ನೇಮಕಮಾಡಿದರೆ ಕೃಷಿಗೆ ಬೇಕಾದ ಸೌಲಭ್ಯಗಳು ಸಕಾಲದಲ್ಲಿ ದೊರೆತು ಅಭಿವೃದ್ಧಿ ಸಾಧಿಸಲು ಸಹಾಯಕವಾಗುತ್ತದೆ.

೧. ಗ್ರಾಮೀಣ ಬ್ಯಾಂಕುಗಳು ಸ್ವತಂತ್ರವಾಗಿ ಕಾರ್ಯನಿರ್ವಹಿಸಬೇಕಾದರೆ, ಪ್ರಾಯೋಜಿತ ಬ್ಯಾಂಕನ ಹಿಡಿತದಿಂದ ಬಿಡುಗಡೆಗೊಳಿಸಿ ರಾಷ್ಟ್ರೀಯ ಗ್ರಾಮೀಣ ಬ್ಯಾಂಕನ್ನು ಸ್ಥಾಪಿಸುವುದರಿಂದ ಕಾರ್ಯನಿರ್ವಹಣೆ ಸುಲಭವಾಗಬಹುದು.

೨. ವಾಣಿಜ್ಯ ಬ್ಯಾಂಕುಗಳಲ್ಲಿನ ಬ್ಯಾಂಕ್ ಸಿಬ್ಬಂದಿಗೆ ಇರುವಂತೆ ಆಹಂತದ ಬಡ್ತಿಯನ್ನು ಗ್ರಾಮೀಣ ಬ್ಯಾಂಕ್ ಸಿಬ್ಬಂದಿಗೂ ವಿಸ್ತರಿಸುವುದರಿಂದ ಬ್ಯಾಂಕುಗಳಲ್ಲಿನ ತಾರತಮ್ಯವನ್ನು ತೊಡೆದು ಹಾಕಿದಂತಾಗುತ್ತದೆ.

೩. ವಾಣಿಜ್ಯ ಬ್ಯಾಂಕಿನಲ್ಲಿರುವಂತಹ Core Banking Systemಅನ್ನು ಗ್ರಾಮೀಣ ಬ್ಯಾಂಕನಲ್ಲೂ ವಿಸ್ತರಿಸುವುದರಿಂದ ಗ್ರಾಮೀಣ ಜನಪದರಿಗೆ ಅನುಕೂಲವಾಗುತ್ತದೆ.

೪. ವಾಣಿಜ್ಯ ಬ್ಯಾಂಕಿನಲ್ಲಿರುವಂತೆ ೧೫ ವರ್ಷಗಳ ಸೇವೆ ಸಲ್ಲಿಸಿದ ಬ್ಯಾಂಕ್ ಸಿಬ್ಬಂದಿಗೆ ವಿ.ಆರ್.ಎಸ್. ನೀಡಿದಂತೆ ಗ್ರಾಮೀಣ ಬ್ಯಾಂಕು ನೌಕರರಿಗೂ ವಿಸ್ತರಿಸುವುದರಿಂದ ಹೊಸ ಪೀಳಿಗೆಗೆ ಉದ್ಯೋಗಾವಕಾಶ ದೊರೆತು ದಕ್ಷತೆಯಿಂದ ಕಾರ್ಯನಿರ್ವಹಿಸಲು ಸಾಧ್ಯವಾಗಬಹುದು.

೫. ಗ್ರಾಮೀಣ ಬ್ಯಾಂಕುಗಳ ಒಗ್ಗೂಡುವಿಕೆಯಿಂದ ಸಂಪನ್ಮೂಲ ಕ್ರೋಢೀಕರಣವಾಗಬಹುದು, ಆದರೆ ಜಿಲ್ಲೆ ಜಿಲ್ಲೆಗಳ ಮಧ್ಯೆ ಧೃವೀಕರಣ ಸಾಧ್ಯವಾಗುವುದಿಲ್ಲ.

೬. ಗ್ರಾಮೀಣ ಬ್ಯಾಂಕುಗಳಲ್ಲಿ ಭದ್ರತಾ ಸೌಲಭ್ಯವನ್ನು ಒದಗಿಸುವುದರಿಂದ, ಯಾವುದೇ ಭಯವಿಲ್ಲದೆ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತದೆ.

೭. ಕಳೆದ ೨೦ ವರ್ಷಗಳಿಂದ ನೇಮಕಾತಿ ಆಗಿಲ್ಲ. ಹಾಗಾಗಿ ಸಿಬ್ಬಂದಿ ಕೊರತೆಯಾಗುತ್ತದೆ. ಆದಕಾರಣ ಹೊಸದಾಗಿ ನೇಮಕಾತಿ ಮಾಡಿಕೊಳ್ಳುವುದರಿಂದ, ಯುವಪಡೆ ಕಾರ್ಯನಿರ್ವಹಿಸಲು ಸಾಧ್ಯವಾಗುವುದರ ಜೊತೆಗೆ ನಿರುದ್ಯೋಗದ ಸಮಸ್ಯೆಯನ್ನು ನಿವಾರಿಸಬಹುದು.

೮. ಗ್ರಾಮೀಣ ಪ್ರದೇಶದಲ್ಲಿ ವೈದ್ಯರಿಗೆ ವಾಸಕ್ಕೆ ಗೃಹಗಳಿರುವಂತೆ ಬ್ಯಾಂಕ್ ನೌಕರರಿಗೆ ವಾಸ ಗೃಹ ನೀಡಿದರೆ ಜನಪದರಲ್ಲೇ ವಾಸಿಸುವ ಜೊತೆಗೆ ಅವರಲ್ಲೇ ಬೆರೆತು ಕೆಲಸ ನಿರ್ವಹಿಸಲು ಸಾಧ್ಯವಾಗುತ್ತದೆ.

ಬ್ಯಾಂಕುಗಳ ಪ್ರವೃತ್ತಿ ಪ್ರಸ್ತುತ ಸನ್ನಿವೇಶದಲ್ಲೂ ವಿಳಂಬದಿಂದ ಕೂಡಿದೆ. ಸಿಬ್ಬಂದಿಗಳ ಅಸಹಜ ವರ್ತನೆ, ಸೇವಾಶುಲ್ಕ ಹೆಚ್ಚಳ, ಅನಾವಶ್ಯಕ ಪ್ರಶ್ನೆಗಳ ಸುರಿಮಳೆ ಹೆಚ್ಚಾಗಿದೆ. ಹಾಗೆಯೇ ಸರಿಯಾದ ರೀತಿಯಲ್ಲಿ ಸಾಲದ ಮೇಲ್ವಿಚಾರಣೆ ಇರುವುದಿಲ್ಲ. ಅರ್ಹರಿಗೆ ಸಾಲದೊರೆಯುವುದಿಲ್ಲ. ರಾಜಕೀಯ ಪ್ರವೇಶದಿಂದಾಗಿ ಪುಡಾರಿಗೆ ಅಧಿಕ ಸಾಲ ದೊರೆಯುತ್ತದೆ. ಈ ಎಲ್ಲಾ ನ್ಯೂನ್ಯತೆಗಳನ್ನು ಹೋಗಲಾಡಿಸಿ ಕೊಂಡು ಭವಿಷ್ಯದಲ್ಲಿ ಮುಂದುವರೆದರೆ ಬಾಂಗ್ಲಾದೇಶದಲ್ಲಾದ ಬದಲಾವಣೆಯನ್ನು ನಮ್ಮ ದೇಶದಲ್ಲೂ ಕಾಣಬಹುದು.

ಇಂದು ಬ್ಯಾಂಕುಗಳು ನರಸಿಂಹಮ್ ಸಮಿತಿ ಸಲಹೆಯಂತೆ ವಾಣಿಜ್ಯಬ್ಯಾಂಕಿನ ಎಲ್ಲಾ ಕಾರ್ಯಗಳನ್ನು ನಿರ್ವಹಿಸುತ್ತಿವೆ. ಭವಿಷ್ಯದಲ್ಲಿ ಮೂಲ ಉದ್ದೇಶವನ್ನೇ ಮರೆತು ಬರೀ ಆದ್ಯತೇತರ ವಲಯಕ್ಕೆ ಒತ್ತನ್ನು ನೀಡಿ ಆದ್ಯತಾ ವಲಯವನ್ನು ನಿರ್ಲಕ್ಷಿಸಿದರೆ ಈ ಬ್ಯಾಂಕುಗಳು ೧೦ರಲ್ಲಿ ೧೧ನೇಯದಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಈ ಎರಡು ವಲಯಗಳಲ್ಲಿ ಸಂಪೂರ್ಣ ಸಮತೋಲನ ಸಾಧಿಸಿ ಮುಂದುವರೆದರೆ ಮಾತ್ರ ಬ್ಯಾಂಕುಗಳು ಪೂರ್ಣ ಪ್ರಮಾಣದಲ್ಲಿ ಯಶಸ್ಸು ಕಾಣಬಹುದು.

# ಅನುಬಂಧಗಳು

೧. ಗ್ರಂಥಸೂಚಿ

೨. ಲೇಖನಗಳು

೩. ವರದಿಗಳು

೪. ನಿಯತಕಾಲಿಕೆಗಳು

೫. ಛಾಯಾಚಿತ್ರಗಳು

## ಗ್ರಂಥಸೂಚಿ

೧. ಅರೋರ, ಆರ್.ಸಿ, ಇಂಟಿಗ್ರೇಟೆಡ್ ರೂರಲ್ ಡೆವಲೆಪಮೆಂಟ್, ಎಸ್.ಚಾಂದ್ ಅಂಡ್ ಕಂಪನಿ, ನ್ಯೂಡೆಲ್ಲಿ, ೧೯೭೯.

೨. ಅಬ್ದುಲ್ ಅಜೀಜ್ (ಸಂ), ಕರ್ನಾಟಕ ಆರ್ಥಿಕತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೩. ಅಬ್ದುಲ್ ಅಜೀಜ್ (ಸಂ), ದಿ ರೂರಲ್ ಪೂರ್, ಅಶಿಶ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

೪. ಅರ್ಜುನ್ ಗೋಳಸಂಗಿ, ಗೋಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ಮಲ್ಲಿಕಾರ್ಜುನ ಪ್ರಕಾಶನ, ಗೋಳಸಂಗಿ, ೧೯೯೫.

೪a. ಅಣ್ಣಿಗೇರಿ, ನಾಣ್ಯಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೫. ಅರವಿಂದ ಜೋಷಿ, ಕೌಟಿಲ್ಯನ ಅರ್ಥಶಾಸ್ತ್ರ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೭೫.

೬. ಇಂಡಿಯಾ, ೧೯೯೯, ೨೦೦೩, ಗೌರ್ನಮೆಂಟ್ ಆಫ್ ಇಂಡಿಯಾ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

೭. ಇತಿಹಾಸ ದರ್ಶನ (ಸಂ.೧೭), ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು.

೮. ಎಕಾನಾಮಿಕ್ ಸರ್ವೆ, ಪ್ಲಾನಿಂಗ್ ಡಿಪಾರ್ಟ್‌ಮೆಂಟ್, ಬೆಂಗಳೂರು, ೯೮.೯೮

೯. ಎಕಾನಾಮಿಕ್ ಸರ್ವೆ, ೨೦೦೧, ೨೦೦೩, ೨೦೦೫, ೨೦೦೬

೧೦. ಕೆ.ಕೆ.ಡೆವೆಟ್, ಎಕಾನಾಮಿಕ್ ಥಿಯರಿ, ಎಸ್.ಚಾಂದ್ ಅಂಡ್ ಕಂಪನಿ, ನ್ಯೂ ಡೆಲ್ಲಿ

೧೧. ಕರ್ನಾಟಕ ಚರಿತ್ರೆ ಮಾಲೆ, ಪ್ರೊ.ಬಿ.ಷೇಕ ಅಲಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨. ಕ್ಲಾರ್ಕ ಸಿ, ದಿ ಕಂಡಿಷನ್ ಆಫ್ ಎಕಾನಾಮಿಕ್ ಪ್ರೊಗ್ರೆಸ್, ಮ್ಯಾಕಮಿಲನ್, ಲಂಡನ್, ೧೯೫೭.

೧೩. ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೧೪. ಕೆ.ಕೃಷ್ಣಭಟ್, ಕೌಟಿಲ್ಯನ ಅರ್ಥಶಾಸ್ತ್ರ, ಸಮಾಜ ಪುಸ್ತಕಾಲಯ, ಧಾರವಾಡ.

೧೫. ಗುರುಮೂರ್ತಿ ಕೆ.ಜಿ., ಜನಪದ ಸಮಾಜ ಮತ್ತು ಸಂಸ್ಕೃತಿ, ಕನ್ನಡ ಅಧ್ಯಯನ ಪೀಠ, ಧಾರವಾಡ, ೧೯೭೯.

೧೬. ಕ್ಲಾರ್ಕ ಸಿ., ದಿ ಕಂಡಿಷನ್ ಆಫ್ ಎಕಾನಾಮಿಕ್ ಪ್ರೊಗ್ರೆಸ್, ಮ್ಯಾಕ್‌ಮಿಲನ್, ಲಂಡನ್, ೧೯೫೭.

೧೭. ಕಿಂಡಲ್‌ಬರ್ಗರ್, ಎಕಾನಾಮಿಕ್ ಡೆವಲಪ್‌ಮೆಂಟ್ ಮ್ಯಾಗ್ರಹಿಲ್ ಬುಕ್ ಕಂಪನಿ ಇನ್ ನ್ಯೂಯಾರ್ಕ್, ೧೯೬೫.

೧೮. ಕುಜನೆಟ್ ಐ., 'ಮಾಡ್ರನ್ ಎಕಾನಾಮಿಕ್' ಗ್ರೋಥರೇಟ್ ಸ್ಟ್ರಚರ್, ಯಾಲಿ ಯುನಿವರ್‌ಸಿಟಿ, ಕ್ರಿಸ್ ನ್ಯೂಹೆವನ್.

೧೯. ಗಾಡ್ಗಿಲ್ ಡಿ.ಆರ್., ಡಿಸ್ಟ್ರಿಕ್ ಡೆವಲೆಪ್‌ಮೆಂಟ್ ಪ್ಲಾನಿಂಗ್, ಜಿ.ಐ.ಪಿ.ಇ. ಪುಣೆ, ೧೯೬೭.

೨೦. ಗೊರೂರು ರಾಮಸ್ವಾಮಿ ಅಯ್ಯಂಗಾರರು, ಜನಪದ ಜೀವನದರ್ಶನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೭೪.

೨೧. ಗ್ರಾಮಗಳು ಅಂದು-ಇಂದು, ಚಿನ್ನಸ್ವಾಮಿ ಸೋಸಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೨೨. ಚನ್ನಣ್ಣ ವಾಲಿಕಾರ, ಜಾನಪದ ಲೋಕ, ಗುಲ್ಬರ್ಗ ದಲಿತ ಬಂಡಾಯ ವಿಚಾರ ಸಮಿತಿ, ೧೯೯೩.

೨೩. ಚನ್ನಪ್ಪ ಗೊ.ರು.(ಸಂ), ಗ್ರಾಮಜ್ಯೋತಿ, ಬೆಂಗಳೂರು, ಕೆ.ಆರ್.ಲಿಂಗಪ್ಪ ಅಭಿನಂಧನಾ ಸಮಿತಿ, ೧೯೭೯.

೨೩a. ಚಂದ್ರಶೇಖರಯ್ಯ, ಭಾರತೀಯ ಕರೆನ್ಸಿ ಮತ್ತು ಬ್ಯಾಂಕಿಂಗ್ ಸಮಸ್ಯೆಗಳು, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೩.

೨೪. ಚಾಂದನಿ ಪಿ., 'ಇಂಡಿಯನ್ ಎಕಾನಮಿಕ' ವಿಕಾಸ್ ಪಬ್ಲಿಷಿಂಗ್ ಹೌಸ್ ಪ್ರೈ ಲಿಮಿಟೆಡ್, ನವದೆಲಿ, ೧೯೭೮.

೨೫. ಚಂದ್ರಪೂಜಾರಿ ಮತ್ತು ಟಿ.ಆರ್.ಸಿ., ಅಭಿವೃದ್ಧಿ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಸಂ.೨, ಸಂಚಿಕೆ ೧,

೨೬. ಚಂದ್ರಪೂಜಾರಿ ಮತ್ತು ಟಿ.ಆರ್.ಸಿ., ಜನ ಯೋಜನೆ, ಕನ್ನಡ ವಿಶ್ವವಿದ್ಯಾಲಯ, ಸಂ.೨, ಸಂಚಿಕೆ ೧,

೨೭. ಜಾನಪದ ಕೈಪಿಡಿ

೨೮. ಜ್ಞಾನ ಗಂಗೋತ್ರಿ ಸಂಪುಟ ೧

೨೯. ಜೆ.ಪಿ.ಮಿಶ್ರ., 'ಡೈನಮಿಕ್ಸ್ ಆಫ್ ರೂರಲ್ ಡೆವಲಪ್‌ಮೆಂಟ್ ಇನ್ ವಿಲೇಜ್ ಎರಿಯಾ' ಅಶಿಷ ಪಬ್ಲಿಷಿಂಗ್ ಹೌಸ್ ನ್ಯೂಡೆಲ್ಲಿ, ೧೯೮೨.

೩೦. ಸ.ಚಿ.ರಮೇಶ, ಜನಪದ ಕರ್ನಾಟಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೩೧. ಟಿಂಬರ್ ಜನ್ ಜೆ, ದಿ ಸ್ಟಡಿ ಆಫ್ ಡೆವಲೆಪ್‌ಮೆಂಟ್, ರೆನ್ಸಯುನಿವರ್ಸಿಟಿ ಡ್ರಸ್ ಬೆಲ್ಜಿಮಾರ್, ೧೯೫೮.

೩೨. ಟೊಡ್ಯಾರೊ, ಎಕಾನಾಮಿಕ್, ಪಾರ ಡೆವಲಪ್‌ಮೆಂಟ್ ವರ್ಲ್ಡ್, ಲಾಂಗಮನ್‌ಗ್ರೂಪ್, ಲಂಡನ್, ೧೯೯೭.

೩೩. ಟೋಕಿ ಎಂ.ಎಸ್. ಮತ್ತು ಶರ್ಮಾ (ಸಂ), ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ಐಬಿಹೆಚ್ ಪಬ್ಲಿಷಿಂಗ್ ಹೌಸ್, ನವದೆಹಲಿ, ೧೯೭೫.

೩೪. ಡಾಕೊಸ್ತ ಎಂ, ಪೈನಾನ್ಸ್ ಅಂಡ್ ಡೆವಲಪ್‌ಮೆಂಟ್, ವೆಸ್ಟನ್ಯೂ ಪ್ರೆಸ್ ಕೊಲೆರಡೂ, ೧೯೮೨.

೩೫. ಡಿಂಗ್ರಾ ಐ.ಸಿ, ರೂರಲ್ ಎಕಾನಾಮಿಕ್ಸ್, ಸುಲ್ತಾನ ಚಾಂದ್ ಅಂಡ್ ಸನ್ಸ, ಸುಲ್ತಾನ ನ್ಯೂಡೆಲ್ಲಿ, ೧೯೮೩.

೩೬. ಡಿಂಗ್ರಾ ಡಿ.ಸಿ., ಇಂಡಿಯನ್ ಎಕಾನಮಿ, ಎಸ್.ಚಾಂದ ಅಂಡ್ ಕಂಪನಿ, ನ್ಯೂಡೆಲ್ಲಿ, ೨೦೦೪.

೩೭. ಡಾ.ಎಸ್.ಕೊಪ್ಪ, ತರ್ದವಾಡಿನಾಡು ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ, ೧೯೯೦.

೩೮. ತಿಂಗಳಾಯ ಕೆ.ಎಸ್., ರೂರಲ್ ಬ್ಯಾಂಕ್ಸ್ ಇನ್ ಇಂಡಿಯಾ, ಜೆ.ಎಸ್.ಹೆಗ್ಡೆ ಇನ್ಸಟಿಟೂಟ್ ಆಪ್‌ಮ್ಯಾನೇಜ್‌ಮೆಂಟ್, ನಿಟ್ಟೆ.

೩೮a. ದೇಸಾಯಿ ಎಸ್‌ಎಸ್.ಎಂ., ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ಹಿಮಾಲಯ ಪಬ್ಲಿಷಿಂಗ್‌ಹೌಸ್, ನ್ಯೂಡೆಲ್ಲಿ.

೩೯. ತಿರುಲ್‌ವಾಲ್ ಎ.ಪಿ., ಗ್ರೋಥ ಅಂಡ್ ಡೆವಲೆಪಮೆಂಟ್, ಮ್ಯಾಕಮಿಲನ್, ಲಂಡನ್, ೧೯೭೨.

೪೦. ನಾಯಕ ಡಿ.ಬಿ, ಲಂಬಾಣಿ ಜನಪದ ಸಾಹಿತ್ಯ, ಬಂಜಾರ ಪ್ರಕಾಶನ, ಗುಲ್ಬರ್ಗಾ, ೨೦೦೦.

೪೧. ನಂಜುಂಡಪ್ಪ ಡಿ.ಎಂ., ಏರಿಯಾ ಪ್ಲಾನಿಂಗ್ ಅಂಡ್ ರೂರಲ್ ಡೆವಲಪಮೆಂಟ್, ಅಸೋಸಿಯೇಟ್, ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ, ೧೯೮೧.

೪೨. ನರ್ಕ್ಸ್, ಪ್ರಾಬ್ಲಮ್ ಆಫ್ ಕ್ಯಾಪಿಟಲ್ ಪಾರಮೇಶನ್ ಇನ್ ಅಂಡರ್ ಡೆವಲೆಪ್‌ಮೆಂಟ್ ಕಂಟ್ರೀಸ್, ಬಾಸಿಲ್ ಬ್ಲಾಕವೆಲ್, ಆಕ್ಸಫರ್ಡ್, ೧೯೫೩.

೪೨a. ನರ್ಡ್-ರೂರಲ್ ಡೆವಲಪ್‌ಮೆಂಟ್ ಇನ್ ಇಂಡಿಯಾ, ನರ್ಡ, ಹೈದ್ರಾಬಾದ್.

೪೩. ನಾಗೇಶ ಎಚ್.ವಿ., ಗ್ರಾಮವ್ಯಾಸಂಗ, ಧಾರವಾಡ, ೧೯೮೧.

೪೪. ನಾಯಕ್ ಹಾ.ಮ. ಜಾನಪದ ಸ್ವರೂಪ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು.

೪೫. ನರಗುಂದಕರ, ಕೌಟಿಲ್ಯರಾಜ ಮತ್ತು ಆಡಳಿತ,ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೫.

೪೬. ಪುರುಷೋತ್ತಮ ಬಿಳಿಮಲೆ, ಜಾನಪದ ಕ್ಷೇತ್ರ ಕಾರ್ಯ ಆಧುನಿಕ ವಿಧಾನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಸಯ, ಹಂಪಿ, ೯೩.

೪೭. ಪೈ ಸಿ.ಸಿ.ಎ., ಜಾನಪದ ವೈಜ್ಞಾನಿಕ ಕ್ಷೇತ್ರಕಾರ್ಯ, ಧಾರವಾಡ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೭೮.

೪೮. ಪಾಲ್‌ಸ್ಕೊವಿಕಸ್ಟರ್ನ, ಅನುಯಲ್‌ವರ್ಲ್ಡ್‌ಬ್ಯಾಂಕ್ ಕಾನ್ಪರೆನ್ಸ ಅನ್ ಡವಲಪ್‌ಮೆಂಟ್ ಎಕಾನಾಮಿಕ್ಸ್, ವಿಶ್ವ ಬ್ಯಾಂಕ್, ೨೦೦೦.

೪೯. ಬ್ರಹ್ಮಾನಂದ ಪಿ.ಆರ್., ಪ್ರೊಡೆಕ್ಟವಿಟಿ ಇನ್ ಇಂಡಿಯನ್ ಎಕಾನಮಿ, ಹಿಮಾಲಯ ಪಬ್ಲಿಷಿಂಗಹೌಸ್, ಬಾಂಬೆ, ೧೯೮೨.

೫೦. ಬಳ್ಳಾರಿ ಜಿಲ್ಲಾ ಗ್ಯಾಜೆಟಿಯರ, ೧೯೭೬.

೫೧. ಬಸವರಾಜ ಎಲ್, ಬಸವೇಶ್ವರ ವಚನ ಸಂಗ್ರಹ, ಡಿ.ವಿ.ಕೆ.ಮೂರ್ತಿ, ಮೈಸೂರು.

೫೨. ಬಿ.ಪಿ.ಹೂಗಾರ, ಭಾರತದ ಇತಿಹಾಸ, ಎಸ್.ಎಸ್.ಬುಕ್ ಡಿಪೊ, ಗುಲ್ಬರ್ಗಾ, ೨೦೦೫.

೫೩. ಮನೊರಮ ಇಯರ್‌ಬುಕ್, ೨೦೦೦.

೫೪. ಮೇಯರ ಜಿ.ಎಂ, ಎಕಾನಾಮಿಕ್ ಡವಲಪಮೆಂಟ್, ವ್ಯಾಲಿ, ಲಂಡನ್, ೧೯೭೪.

೫೫. ಮಿನಾಸ್ ಬಿ.ಎಸ್., ಪ್ಲಾನಿಂಗ್ ಅಂಡ್ ದಿಪೂರ್, ಎಸ್ ಚಾಂದ ಅಂಡ್ ಕಂಪನಿ, ನ್ಯೂಡೆಲ್ಲಿ, ೧೯೭೪.

೫೬. ಮಿರ್ಡಾಲ್ ಜಿ., ಏಷಿಯನ್ ಡ್ರಾಮ Vol-1 ಅಂಡ್ III, ಪೆಂಗ್ವಿನ್ ಪ್ರೆಸ್ ಲಂಡನ್, ೧೯೬೮.

೫೭. ಮೇಯರ್ ಅಂಡ್ ಬಾಲ್ಡ್ವಿನ್, ಎಕಾನಾಮಿಕ್ ಡೆವಲೆಪ್‌ಮೆಂಟ್, ಏಷ್ಯಾಪಬ್ಲಿಷಿಂಗ್‌ಹೌಸ್, ಬಾಂಬೆ, ೧೯೬೧.

೫೮. ಮಹಾದೇವ ಸಿ, ಹೊಸಪೇಟೆ ದರ್ಶನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೫೯. ರೈಷ ಅಹಮದ್, ರೂರಲ್ ಬ್ಯಾಂಕಿಂಗ್ ಅಂಡ್ ಎಕಾನಮಿಕ ಡವಲಪಮೆಂಟ್, ಮಿಥ್ಥಲ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ, ೧೯೯೧.

೬೦. ರಾಬಿನ್ಸ್ ಎ.ಜಿ., ಬ್ಯಾಕವರ್ಡಏರಿಯಾಸ್ ಇನ್ ಅಡ್ವಾನ್ಸ್ಡ್ ಕಂಟ್ರೀಸ್, ಮ್ಯಾಕಮಿಲನ್ ಲಂಡನ್, ೧೯೬೯.

೬೧. ರಾವ ಬಿ.ಪಿ., (ಸಂ). ರೂರಲ್ ಅಂಡ್ ಪಾರ್ಮಸೆಕ್ಟಾರ್ ಇನ್ ರೂರಲ್ ಡೆವಲೆಪ್‌ಮೆಂಟ್, ಕಮರ್ಷಿಯಲ್ ಬ್ಯಾಂಕಿಂಗ್ ಇನ್ ಇಂಡಿಯಾ, ವರ್ಧಮಾನ್ ಪಬ್ಲಿಕೇಷನ್ಸ್, ಬೇಲಾಪುರ, ವಾರಣಾಸಿ, ೧೯೯೩.

೬೨. ಲೆವಿಸ್ ಎ., ಎಕಾನಾಮಿಕ ಡೆವಲೆಪಮೆಂಟ್ ವಿಥ ಅನಲಿಮಿಟೆಡ್ ಸಪ್ಲೈಸ್ ಆಫ್ ಲೇಬರ್, ಮ್ಯಾಂಚಸ್ಟರ್ ಯುನಿವರ್ಸಿಟಿ ಪ್ರೆಸ್ ಮ್ಯಾಂಚಸ್ಟರ್, ೧೯೫೪.

೬೩. ಲೆಬನಸ್ಟೈನ್., ಎಕಾನಾಮಿಕ್ ಬ್ಯಾಕವರ್ಡನೆಸ್ ಅಂಡ್ ಎಕಾನಿಮಿಕ್ ಗ್ರೋಥ್, ಜಾನ್‌ವೈಲಿ ಅಂಡ್ ಸನ್ಸ್, ನ್ಯೂಯಾರ್ಕ್, ೧೯೬೦.

೬೪. ಲಕ್ಕಪ್ಪಗೌಡ ಎಚ್.ಜೆ.(ಸಂ), ಸುವರ್ಣ ಜಾನಪದ, ಜಾನಪದ ಅಕಾಡೆಮಿ, ಬೆಂಗಳೂರು, ೧೯೯೮.

೬೫. ವಾದವಾ ಸಿ.ಡಿ., ರೂರಲ್ ಬ್ಯಾಂಕ್ಸ್ ಪಾರ್ ರೂರಲ್ ಡೆವಲಪಮೆಂಟ್, ಮ್ಯೂಕಮಿಲನ್, ಮದ್ರಾಸ್, ೧೯೮೦.

೬೬. ವೆಂಕಟರಾವ ಡಿ., ಕೃಷಿ ಹಣಕಾಸು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೦.

೬೭. ಸ.ಚಿ.ರಮೇಶ್, ಜನಪದ ಕರ್ನಾಟಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೬೮. ಸಿಂಗ್ ಎ.ಕೆ., ಪ್ಯಾಟ್ರನ್ಸ್ ಅಂಡ್ ರೀಜನಲ್ ಡೆವಲಪಮೆಂಟ್, ರೆನ್ಸ ಯುನಿವರ್ಸಿಟಿ ಪ್ರೆಸ್, ಬೆಲ್ಜಿಮಾರ, ೧೯೫೮.

೬೯. ಸಿಂಗ್ ಪಿ, ಕಮ್ಯೂನಿಟಿ ಡೆವಲಪಮೆಂಟ್ ಪ್ರೊಗ್ರಾಂ ಇನ್ ಇಂಡಿಯಾ, ದೀಪ್ ಅಂಡ್ ದೀಪ ಪಬ್ಲಿಕೇಷನ್ಸ್, ನವದೆಹಲಿ.

೭೦. ಸುಂದರಂ ಎಸ್, 'ಮನಿ ಬ್ಯಾಂಕಿಂಗ್ ಇಂಟರನ್ಯಾಷನಲ್ ಟ್ರೇಡ್ ಅಂಡ್ ಫೈನಾನ್ಸ್' ಎಸ್.ಚಾಂದ್ ಅಂಡ್ ಕಂಪನಿ, ನ್ಯೂಡೆಲ್ಲಿ, ೨೦೦೦.

೭೧. ಶರ್ಮಾ ಎಸ್.ಕೆ. ಮಲ್ಹೋತ್ರ, ಇಂಟಿಗ್ರೇಟೆಡ್ ರೂರಲ್ ಡೆವಲೆಪಮೆಂಟ್, ಸೌತ ಏಷಿಯಾ ಬುಕ್ ಹೌಸ್, ಕೊಲಂಬಿಯಾ, ೧೯೯೭.

೭೨. ಶಿವಚಿತ್ತಪ್ಪ, ಕೈಗಾರಿಕಾ ಅರ್ಥಶಾಸ್ತ್ರ, ಗುರುಕೃಪ ಪ್ರಕಾಶನ, ಮೈಸೂರು.

೭೩. ಶೇಷನವರತ್ನ- ಮನುಸ್ಮೃತಿ, ಸಮಾಜ ಪುಸ್ತಕಾಲಯ, ಧಾರವಾಡ, ೨೦೦೭.

## ಲೇಖನಗಳು


೧. ಅಹುಲ್ಲಿವಾಲ್ ಎಂ.ಎಸ್., ಇನ್‌ಇಕ್ವಾಲಿಟಿ ಪಾವರ್ಟಿ ಅಂಡ್ ಡೆವಲೆಪ್‌ಮೆಂಟ್, ವರ್ಲ್ಡ್ ಬ್ಯಾಂಕು, ನಂ.೩೬, ರಿಪ್ರಿಂಟ ಪ್ರೆಸ್ ಜರ್ನಲ್ ಆಫ್ ಡೆವಲಪಮೆಂಟ್ ಎಕಾನಾಮಿಕ್ಸ್, ೧೯೭೬, ಪುಟ.೩೦೭, ೩೪೨.

೨. ಇಕ್ಬಾಲ್ ಬಿ.ಎ., ರೂರಲ್ ಇಂಡಸ್ಟ್ರೀಸ್ ಇನ್‌ಡವಲಪಿಂಗ್ ಕಂಟ್ರೀಸ್, ಖಾದಿಗ್ರಾಮೋದ್ಯೋಗ, ವ್ಯಾಲುಂ ೨೫, ಪುಟ.೫೪೯-೫೫೨.

೩. ಕ್ಲಾರ್ಕ ಜೆ.ಎಲ್., ಪಾವರ್ಟಿ ಅಂಡ್ ರೂರಲ್ ಬ್ಯಾಂಕಿಂಗ್ ವ್ಯಾಲುಂ ೧ ನಂ ೨ ಏಪ್ರಿಲ್ ಜೂನ್ ೧೯೭೨, ಪುಟ. ೧೭೯-೧೮೪.

೪. ಕಿಶೋರ ಸಿ.ರಾಟ್ ಅಂಡ್ ಅಹಮದ್ ಕಮಲ್‌ನಬಿ, ಸಿಡಿ ರೇಷಿಯೋ ಆಫ್ ರುಕ್ಷಿಕ್ಯುಲ್ಯ ಗ್ರಾಮ್ಯ ಬ್ಯಾಂಕ, ಎ ಮೈಕ್ರೊಸ್ಟಡಿ ಸದರನ್ ಎಕಾನಾಮಿಸ್ಟ ವ್ಯಾಲುಂ ನಂ ೩೯, ನಂ.೧೯ ಫೆಬ್ರವರಿ ೨೦೦೧, ಪುಟ. ೧೪ ರಿಂದ ೨೦.

೫. ಕುರಿಯನ್ ವಿ. ಕಾಳೇಮೆಮೊರಿಯಲ್ ಲಕ್ಚರ್, ಅಗ್ರಿಕಲ್ಚರ್ ಅಂಡ್ ರೂರಲ್ ಡೆವಲಪ್‌ಮೆಂಟ್, ಜಿ.ಐ.ಪಿ.ಇ. ಪುಣೆ, ಜುಲೈ ೧೭, ೧೯೯೨.

೬. ಕುಂಬಾರ ಎಲ್.ಎಸ್., ಮೋಹನ್‌ದಾಸ್ ಎ.ಎಸ್., ಬಂಡೂರಿಯಾ, ಟ್ರಾನ್‌ಜಾಕ್ಷನ್ ಅಂಡ್ ಸರ್ವಿಸ್ ಕಾಸ್ಟಪಾರ್ ಕೊ ಅಪರೇಟಿವ್ಸ್ ಅಂಡ್ ರೀಜನಲ್ ರೂರಲ್ ಬ್ಯಾಂಕ್ಸ್,ಇಂಡಿಯನ್ ಜರ್ನಲ್ ಆಪ್ ಅಗ್ರಿಕಲ್ಚರ್ ಎಕಾನಾಮಿಕ್ಸ್ ವ್ಯಾಲುಂ ೪೯ನಂ ೩ ಜುಲೈ ಟು ಸೆಪ್ಟೆಂಬರ್, ೧೯೯೪.

೭. ಕೃಷ್ಣಸ್ವಾಮಿ ಸಿ., ಎ ಬ್ಯಾಂಕಿಂಗ್ ಇನ್ ರೂರಲ್ ಏರಿಯಾ, ಕುರುಕ್ಷೇತ್ರ ವ್ಯಾಲುಂ ೨೪ ನಂ.೧೬, ಮೇ ೧೬, ೧೯೭೬ ಪುಟ.೫,೬.

೮. ಗಣೇಶನ್ ಪಿ. ಪಬ್ಲಿಕ ಸೆಕ್ಟಾರ್ ಬ್ಯಾಂಕ್ಸ್ ಅಂಡ್ ಪ್ರೆಯಾಟಿ ಸೆಕ್ಟಾರ್ ಅಡ್ವಾನ್ಸಸ್ ಎ ಕ್ರಿಟಿಕಲ್ ಅನಾಲಿಸಸ್, ಸದರನ್ ಎಕಾನಾಮಿಸ್ಟ ವ್ಯಾಲುಂ ೩೭, ನಂ. ೮ ಆಗಸ್ಟ್ ೧೫, ೧೯೯೮ ಪುಟ. ೧೨ ರಿಂದ ೧೬.

೯. ಗುಪ್ತಾ ಎಸ್.ಕೆ., ಪ್ರಾಬಲಿಟಿ ಅಂಡ್ ರೀಜನಲ್ ರೂರಲ್ ಬ್ಯಾಂಕ್ಸ್, ಕುರುಕ್ಷೇತ್ರ, ಜುಲೈ ೧೯೯೬, ಪುಟ.೩೩.

೧೦. ಚಟರ್ಜಿ ಬಿ.ಕೆ., ಎಕ್ಸಸೈಜ್ ಇನ್ ರೂರಲ್‌ಬ್ಯಾಂಕ್ಸ್, ಈಸ್ಟರ್ನ್ ಎಕಾನಮಿಸ್ಟ್, ವಾಲ್ಯೂಂ, ೭೧. ನಂ.೩, ಸೆಪ್ಟೆಂಬರ್ ೨೯, ೧೯೭೮ ಪುಟ ೬೧೬, ೬೧೭.

೧೧. ಚೌಬೆ ಬಿ.ಎನ್. ರೀಜನಲ್ ರೂರಲ್ ಬ್ಯಾಂಕ್ಸ್ ಅಂಡ ಕೋಆಪರೇಟಿವ್ಸ್ ರಿವ್ಯೂ ವಾಲ್ಯುಂ ೧೩ ನಂ.೩ ಏಪ್ರಿಲ್ ೧೯೮೬, ಪುಟ.೧೮೫.

೧೨. ಚೌದರಿ ಆರ್.ಬಿ.ಕೆ., ರೀಜನಲ್ ರೂರಲ್ ಬ್ಯಾಂಕ್ಸ್ ದೇರ್ ಪಂಕ್ಷನಿಂಗ್ ಅಂಡ್ ರೋಲ್ ಸಜೆಸ್ಟ್, ಕುರುಕ್ಷೇತ್ರ, ಜುಲೈ ೧೯೯೬. ಪುಟ.೩೦

೧೩. ಜೋಷಿ ಎನ್.ಪಿ., ರೀಜನಲ್ ರೂರಲ್ ಬ್ಯಾಂಕ್ಸ್ ಅನಲಿಟಿಕಲ್ ಸ್ಟಡಿ, ಕುರುಕ್ಷೇತ್ರ ವಾಲ್ಯುಂ ೩೦, ನಂ.೨೨. ಆಗಸ್ಟ್೧೮, ೧೯೮೨ ಪುಟ.೬ ರಿಂದ ೮.

೧೩. ಜೋಷಿ ಎನ್.ಪಿ., ರೀಜನಲ್ ರೂರಲ್ ಬ್ಯಾಂಕ್ಸ್ ಅನಲಿಟಿಕಲ್‌ಸ್ಟಡಿ, ಕುರುಕ್ಷೇತ್ರ ವಾಲ್ಯುಂ ೩೦ ನಂ.೨೨, ಆಗಸ್ಟ್ ೧೮, ೧೯೮೨ ಪುಟ.೬ ರಿಂದ ೮.

೧೪. ಟೋಪ ದತ್ತ, ರೀಜನಲ್ ರೂರಲ್ ಬ್ಯಾಂಕ್ಸ್ ಸೆಪ್ಟೆಂಬರ್ ೯, ೧೯೭೮ ಇ.ಪಿ.ಡಬ್ಲ್ಯೂ ಪುಟ.೧೫೧೫

೧೫. ಡಾಬೆ ಸಿ.ಡಿ., ರೂಲ್ ಆಫ್ ಕಮರ್ಷಿಯಲ್ ಬ್ಯಾಂಕ್ಸ್ ಇನ್ ಪೈನಾನ್ಸಿಂಗ್ ಅಗ್ರಿಕಲ್ಚರ್, ಕೊ ಅಪರೇಟಿವ್, ನ್ಯೂಸ್ ಡೈಜೆಸ್ಟ್, ವಾಲ್ಯುಂ ೨೪, ನಂ.೮, ಆಗಸ್ಟ್ ೧೯೭೮, ಪುಟ.೧೧೪ ರಿಂದ ೧೧೯.

೧೬. ತಳವಾರ ಆರ್.ಕೆ., ಸಮ್‌ಇಷ್ಯೂಸ್ ಇನ್ ರೂರಲ್ ಬ್ಯಾಂಕಿಂಗ್, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಂತ್ಲಿ ರಿವ್ಯೂ ವ್ಯಾಲುಂ ೨೬, ನಂ.೫ ಡಿಸೆಂಬರ್ ೧೯೮೨, ಪುಟ.೧.

೧೭. ತಿಂಗಳಾಯ ಎನ್.ಕೆ., ಕ್ರೆಡಿಟ್ ಡಿಪ್ಲಾಯ್‌ಮೆಂಟ್ ರಿಜನಲ್ ಡಿಸ್‌ಪ್ಯಾರಿಟಿಸ್, ಪಿಗ್ಮಿ ಎಕಾನಾಮಿಕ ರಿವ್ಯೂ ವ್ಯೂಲುಂ ೨೬ ನಂ.೫ ಡಿಸೆಂಬರ್ ೧೯೮೨, ಪುಟ.೧.

೧೮. ದತ್ತಾ ಅಂಡ್ ಬಬತೋಷ್, ಪ್ಲಾನಿಂಗ್ ಪಾರ್ ರೂರಲ್ ಬ್ಯಾಂಕ್ಸ್ ಇ.ಪಿ.ಡಬ್ಲ್ಯೂ, ವಾಲ್ಯುಂ ೧೨. ನಂ. ೩೫, ಆಗಸ್ಟ್, ೧೯೭೭, ಪುಟ.೧೯೪೫-೧೯೫೦.

೧೯. ದಿ ರೀಜನಲ್ ರೂರಲ್ ಬ್ಯಾಂಕ್ಸ್ ಅಂಡ್ ಅಗ್ರಿಕಲ್ಚರ್, ಕಾಮರ್ಸ್ ಆನುಯಲ್ ನಂ ೧೯೭೯, ವ್ಯೂಲುಂ ೧೩೯. ಪುಟ. ೧೧೫-೧೧೯

೨೦. ನವೀನಚಂದ್ರಜೋಷಿ, ರೋಲ್ ಆಫ್ ಕಮರ್ಷಿಯಲ್ ಬ್ಯಾಂಕ್ಸ್ ಇನ್ ರೂರಲ್ ಕ್ರೆಡಿಟ್ ಅಂಡ್ ಡೆವಲಪ್‌ಮೆಂಟ್, ಕುರುಕ್ಷೇತ್ರ, ಜೂನ್ ೧೯೯೮ ಪುಟ.೨೦.

೨೧. ನಗೇರಿ ಜಾ, ರೂಲ್ ಆಫ್ ಬ್ಯಾಂಕಿಂಗ್ ಇನ್ ರೂರಲ್ ಡೆವಲೆಪ್‌ಮೆಂಟ್, ಸದರನ್ ಎಕಾನಾಮಿಕ್ಸ ವಾಲ್ಯುಂ ನಂ ೨೦, ನಂ.೨೪, ಏಪ್ರಿಲ್ ೧೫, ೧೯೮೨, ಪುಟ.೨೯, ೩೧.

೨೨. ನರೇಶ ಕುಮಾರ, ಹೌವ್ ಬ್ಯಾಂಕ್ಸ್ ಹೆಲ್ಪ್ ಇನ್ ರೂರಲ್ ಡೆವಲೆಪ್‌ಮೆಂಟ್, ಕುರುಕ್ಷೇತ್ರ ವ್ಯೂಲುಂ ೩೦, ನಂ.೭ ಜೂನ್ ೧೯೮೨, ಪುಟ ೧೨-೧೬.

೨೩. ನಟರಾಜನ್ ಬಿ. ರೀಜನಲ್ ರೂರಲ್ ಬ್ಯಾಂಕ್ಸ್ ಪಾರ್ ರೂರಲ್ ಡೆವಲೆಪ್‌ಮೆಂಟ್, ಸ್ವರಜ್ಞಾನ ವಾಲ್ಯುಂ ೨೧ ನಂ ೭, ಆಗಸ್ಟ್ ೧೪, ೧೯೭೬ ಪು.೩-೬.

೨೪. ನೀಲಾಮುಖರ್ಜಿ, ಕ್ರೆಡಿಟ್ ನೀಡ್ಸ್ ಆಫ್ ರೂರಲ್ ಪೂರ್ ಅಂಡ್ ದಿ ರೀಜನಲ್ ರೂರಲ್ ಬ್ಯಾಂಕ್ಸ್, ಕುರುಕ್ಷೇತ್ರ, ಜುಲೈ ೧೯೯೬. ಪುಟ.೧೨.

೨೫. ಪಟೇಲ್ ಎ.ಆರ್., ಆರ್.ಆರ್.ಬೀಸ್ ಅಂಡ್ ಮೇಕಿಂಗ್ ದೆಮ್ ವಯಬಲ್, ಕುರುಕ್ಷೇತ್ರ, ಜುಲೈ ೧೯೯೬, ಪುಟ-೧೭.

೨೬. ಪಟೇಲ್ ಕೆ.ವಿ., ಬ್ಯಾಂಕರ್ ಅಂಡ್ ದಿ ನ್ಯೂ ಎಕಾನಾಮಿಕ ಪ್ರೋಗ್ರಾಂ, ಕುರುಕ್ಷೇತ್ರ, ವ್ಯೂಲುಂ ೨೫, ನಂ.೯ ಫೆಬ್ರವರಿ ೧೯೯೭, ಪುಟ.೮-೯.

೨೭. ಪಟೇಲ್ ಕೆ.ವಿ., ಬ್ಯಾಂಕರ್ ಅಂಡ್ ದಿ ಪ್ರೊಸಸ್ ಆಫ್ ರೂರಲ್ ಡೆವಲಪಮೆಂಟ್, ಪ್ರಜ್ಞಾನನ, ವಾಲ್ಯುಂ ೮, ನಂ.೩, ಜುಲೈ ಯಿಂದ ಸೆಪ್ಟೆಂಬರ್ ೧೯೭೯. ಪುಟ.೨೩೩-೨೫೪.

೨೮. ಪಟೇಲ್ ಕೆ.ವಿ., ಸೇಠಿ ಎಚ್.ಆರ್., ರೀಜನಲ್ ರೂರಲ್ ಬ್ಯಾಂಕ್ಸ್ ಪರಪಾರಮೆನ್ಸ್ ಅಂಡ್ ಪ್ರಾಸಸ್ಪೆಕ್ಟಸ್ ಪ್ರಜ್ಞಾನನ ವ್ಯಾಲುಂ ೯ ನಂ.೧ ಜನವರಿ ಯಿಂದ ಮಾರ್ಚ್ ೧೯೮೧ ಪುಟ.೧-೪೦.

೨೯. ಪಟೇಲ್ ಎ.ಆರ್., ಇಷ್ಯೊ ಇನ್‌ಬ್ಯಾಂಕಿಂಗ್ ರೂರಲ್ ಫೈನಾನ್ಸ್ ಪ್ರೊಸಿಡಿಂಗ್ಸ್ ಆಫ್ ದಿ ಬ್ಯಾಂಕ್ ಎಕಾನಾಮಿಕ್ ಕಾನ್ಫರೆನ್ಸ್ ೯೭, ಬಾಂಬೆ.

೩೦. ಪ್ರಸನ್ನಭಟ್, ಸೇವಿಂಗ್ ಥ್ರೂ ಬ್ಯಾಂಕ್ಸ್, ಕಾಮರ್ಸ್ ವ್ಯೂಲುಂ ೧೪೩, ನಂ.೩೬೫೮ ಜುಲೈ ೨೫, ೧೯೮೧ ಪುಟ.೩೩-೩೪.

೩೧. ಬಾದ್ರಾ ಜೆ.ಡಿ., ರೂರಲ್ ಬ್ಯಾಂಕ್ಸ್ ಅಂಡ್ ರೂರಲ್ ಡೆವಲಪ್‌ಮೆಂಟ್, ದಿ ಕೋಆಪರೇಟಿವ್, ವಾಲ್ಯುಂ ೧೪, ನಂ.೨೨, ಮಾರ್ಚ್ ೧೯೭೬ ಪುಟ.೫೦೯-೫೧೦.

೩೨. ಬೈದ್ಯನಾಥಮಿಶ್ರ., ಆರ್.ಆರ್.ಬಿಸ್, ಅಂಡ್ ರೂರಲ್ ಡೆವಲಪಮೆಂಟ್, ಕುರುಕ್ಷೇತ್ರ ಜುಲೈ ೧೯೯೬, ಪುಟ.೨೬.

೩೩. ಭಟ್ಟಾಚಾರ್ಯ ಬಿ.ಎಸ್., ಬ್ಯಾಂಕ್ಸ್ ಅಂಡ್ ರೂರಲ್ ಡೆವಲಪಮೆಂಟ್ ಎ ಕೇಸ್ ಸ್ಟಡಿ, ಇಂಡಿಯನ್ ಮ್ಯಾನೇಜ್‌ಮೆಂಟ್ ವ್ಯಾಲುಂ ೧೬ ನಂ.೧ ಜನವರಿ ೧೯೯೭, ಪುಟ.೧೧-೧೩.

೩೪. ಮುರಳಿ ಬಿ., ಬ್ಯಾಂಕ್ಸ್ ಅಂಡ್ ಬ್ಯಾಲೆನ್ಸಡ ರೀಜನಲ್ ಡವಲಪಮೆಂಟ್, ಸದರನ್ ಎಕಾನಾಮಿಸ್ಟ
ವಾಲ್ಯುಂ ೧೮, ನಂ.೨೩, ೨೪ ಏಪ್ರಿಲ್ ೧೯೮೦ ಪುಟ.೩೩-೩೮.

೩೫. ಮಿರ್ಡಾಲ್ ಜಿ., ದಿ ವರ್ಲ್ಡ್ ಪಾವರ್ಟಿ ಪ್ರಾಬ್ಲಮ್, ಎನಸೈಕ್ಲೋಪಿಡಿಯಾ, ಬ್ರಿಟಿನಿಕಾ ಐವನ್‌ಸಿ
ವಿಲಿಯಂ ಬೆಂಟಾನ್, ಚಿಕಾಗೋ ೧೯೭೨, ಪುಟ.೨೨-೩೪.

೩೬. ಮುಕುಂದಹಾಸು., ಗ್ರೇನ್‌ಬ್ಯಾಂಕ್ ಎ ವೇ ಆಫ್ ಯಾರಾಡಿರೇಷನ್ ಆಪ ಪಾವರ್ಟಿ, ಕುರುಕ್ಷೇತ್ರ,
ಜುಲೈ ೧೯೯೬, ಪುಟ.೪೫.

೩೭. ಮಜುಮ್‌ದಾರ ಎನ್.ಎ., ಬ್ಯಾಂಕಿಂಗ್ ಸೆಕ್ಟಾರ್ ರಿಪಾರ್ಮ್ಸ್, ವ್ಯಾಲುಂ ೩೩, ನಂ.೪೭
ಇ.ಪಿ.ಡಬ್ಲ್ಯೂ ನವೆಂಬರ್ ೨೧. ೧೯೯೮, ಪುಟ.೨೯೫೪-೫೫.

೩೮. ರಂಗರಾಜನ್ ಸಿ., ಫೈನಾಷಿಯಲ್ ಡೆವಲೆಪಮೆಂಟ್ ಅಂಡ್ ಎಕಾನಾಮಿಕ ಗ್ರೋಥ, ಜರ್ನಲ್
ಆಫ್ ಸೋಷಿಯಲ್ ಅಂಡ್ ಎಕಾನಾಮಿಕ್ ಡೆವಲಪಮೆಂಟ್ ವ್ಯಾಲುಂ ೧, ಜನವರಿ-ಜುಲೈ
೧೯೯೮.

೩೯. ರಂಗರಾವ್ ಎ., ಇಂಪ್ಯಾಕ್ಟ ಆಫ್ ದಿ ಆರ್.ಆರ್.ಬೀಸ್ ಆನ್ ಇನ್‌ಕಂ ಅಂಡ್
ಎಂಪ್ಲಾಯ್‌ಮೆಂಟ್ ಆಪ್ ವಿಕರ್ ಸೆಕ್ಷನ್, ಕುರುಕ್ಷೇತ್ರ ಜುಲೈ ೧೯೯೬, ಪುಟ.೨೧.

೪೦. ರಾಜ.ಕೆ.ಎನ್.ರೀಜನಲ್ ರೂರಲ್ ಬ್ಯಾಂಕ್ಸ್ ಸಮ್ ಇಷ್ಯೂಸ್, ಕುರುಕ್ಷೇತ್ರ ಜುಲೈ ೧೯೯೬
ಪುಟ.೧೦

೪೧. ರಾಸುರೆ ಕೆ.ಎ., ಡಾ.ಬಸವರಾಜು ಸಿ.ಎಸ್., ಗ್ರಾಮ ಜೀವನದ ಬೆನ್ನೆಲುಬಾಗಿರುವ ಗ್ರಾಮೀಣ
ಬ್ಯಾಂಕ್, ಯೋಜನಾ, ಜುಲೈ ೧೯೯೭, ಪುಟ.೩೪.

೪೨. ರಾವ್ ವಿ.ಕೆ.ಆರ್.ವಿ., ಇನ್‌ಪ್ರಾಸ್ಟಕ್ಚರ್ ಅಂಡ್ ಎಕಾನಾಮಿಕ್ ಡೆವಲೆಪಮೆಂಟ್, ಕಾಮರ್ಸ್
ವಾಲ್ಯುಂ ೧೪೧, ನಂ.೩೦೨೮.

೪೩. ರೂರಲ್ ಬ್ಯಾಂಕ್ಸ್ ಅಂಡ್ ಪಾರ್ಮಸೆಕ್ಟರ್ ಇನ್ ರೂರಲ್ ಡೆವಲಪಮೆಂಟ್, ಸದರನ
ಎಕಾನಮಿಸ್ಟ್, ವಾಲ್ಯುಂ, ೩೨ ನಂ.೧೩ ನವೆಂಬರ್ ೧, ೧೯೯೩, ಪುಟ.೨೦.

೪೪. ರೂರಲ್ ಬ್ಯಾಂಕ್ಸ್ ನಾನ್ ಅಂಡ್ ಪಾರ್ಮಸೆಕ್ಟರ್ ಇನ್ ರೂರಲ್ ಡೆವಲಪಮೆಂಟ್. ಆಫ್
ಕರ್ನಾಟಕ. ಲ್ಯಾಂಡಬ್ಯಾಂಕ್ ಜರ್ನಲ್ ವ್ಯಾಲುಂ XXXII ಸೆಪ್ಟೆಂಬರ್ ೧೯೯೩, ಪುಟ.೭೨.

೪೫. ವರದಾಚಾರಿ ಟಿ.ಆರ್., ವಿಲೇಜ್ ಆಡಾಪ್ಸನ್ ಎನ್ಯೂ ಅಪ್ರೋಚ್ ಟು ಪಾರ್ಮ್‌ಪೈನಾನ್ಸಿಂಗ್
ಸ್ಟೇಟ್‌ಬ್ಯಾಂಕ್ ಆಫ್ ಇಂಡಿಯಾ ಮಂಡಲಿ ರಿವ್ಯೂ, ವಾಲ್ಯುಂ ೯ ನಂ.೩ ಮಾರ್ಚ್ ೧೯೭೦
ಪುಟ.೯೬-೧೦೩.

೪೬. ವಿಕೇಪಾಟೀಲ್ ದಿ ರೂರಲ್‌ಬ್ಯಾಂಕಿಂಗ್, ಪ್ರಾಬ್ಲಮ್ಸ್ ಆಫ್ ಲೂಕಲೈಸಡ ಬ್ಯಾಂಕಿಂಗ್ ಇನ್ಸಟಿಟ್ಯೂಷನ್ಸ್ ಇ.ಪಿ.ಡ್ಯು, ವಾಲ್ಯುಂ ನಂ.೧೨ ಮಾರ್ಚ್ ೧೯-೨೫, ೨೦೦೫. ಪುಟ.೧೨೨೪.

೪೭. ವಿಜಯರತ್ನಂ ಎನ್., ಕಮರ್ಷಿಯಲ್ ಬ್ಯಾಂಕ್ಸ್, ಮಾಸ್ ಬ್ಯಾಂಕಿಂಗ್ ವಿಥರಿಯಾಲಿಟಿ, ಯೋಜನಾ ವ್ಯಾಲುಂ ೨೭, ನಂ.೧೩ ಜುಲೈ ೧೬, ೧೯೮೩ ಪುಟ.೧೯-೨೦.

೪೮. ಶರ್ಮಾ ಪೈ.ಸಿ, ಬ್ಯಾಂಕ್ ಫೈನಾನ್ಸ್‌ಪಾರ್ ರೂರಲ್ ಇಂಡಸ್ಟ್ರೀಸ್, ಕಾಮರ್ಸ್ ವ್ಯಾಲುಂ ೧೪೩ ನಂ. ೩೬೫೮. ೧೯೮೩.

೪೯. ಶಿವಮಗ್ಗಿ ಎ.ಎಚ್.ಟಿ. ಬ್ಯಾಂಕಿಂಗ್ ಇನ್‌ಪ್ರಾಸ್‌ಪೆಕ್ಟ್ಸ್ ಪಾರ್ ರೂರಲ್ ಸೆಕ್ಟಾರ್ ಇಪಿಡಬ್ಲ್ಯೂ ಅಕ್ಟೋಬರ್ ೨೫, ೧೯೯೭.

೫೦. ಶೈಲೇಂದ್ರ ಇನ್ಸ್‌ಟಿಟೂಷನ್ ರಿಫಾರ್ಮ್ ಅಂಡ್ ರೂರಲ್ ಪೋರ್ಸ್, ಇಂಡಿಯನ್ ಜರ್ನಲ್ ಆಫ್ ಆಗ್ರೋ ಎಕಾನಾಮಿಕ್ ನಂ.೩ ಜುಲೈ, ೧೯೯೬.

೫೧. ಸರಿಯಾ ಆರ್.ಜಿ., ರೂರಲ್ ಬ್ಯಾಂಕ್ಸ್, ಕೊ ಅಪರೇಟಿವ್ ನ್ಯೂ ಡೈಜೆಸ್ಟ್, ವಾಲ್ಯುಂ ೨೨, ನಂ.೧೧, ನವೆಂಬರ್ ೧೯೭೧, ಪುಟ.೧೩೨-೧೩೪.

೫೨. ಸತೀಶ ಸಿ.ಕೆ., ಗೋಪಾಲಕೃಷ್ಣ, ವಯಬಲಿಟಿ ಆಫ್ ರೂರಲ್ ಬ್ಯಾಂಕಿಂಗ್ ಇ.ಪಿ.ಡಬ್ಲ್ಯೂ ಅಕ್ಟೋಬರ್ ೨೫, ೧೯೯೭, ಪುಟ.೨೭೮೨.

೫೩. ಸಮ್ಮರಿ ಆಪ್ ವರ್ಲ್ಡ್ ಡೆವಲಪಮೆಂಟ್ ರಿಪೋರ್ಟ್ ಆಟ್ಯಾಕಿಂಗ್ ಪಾವರ್ಟಿ, ಬವರವಿಲ್ ಸದರನ್ ಎಕಾನಾಮಿಸ್ಟ್, ಪೆಬ್ರುವರಿ ೨೦೦೧, ೧.೧೪.೨೦.

೫೪. ಸಿಂಗ್ ಆರ್.ಡಿ., ಕೆ.ಎಸ್.ಬಾಬು, ಪರಪಾರಮನ್ಸ್ ಅಂಡ್ ಪ್ರಾಸಸ್ಪೆಕ್ಟಸ್ ಆಫ್ ಆರ್.ಆರ್.ಬಿಸ್, ಆನ್ ಆಪ್ರೈಸಲ್, ಕುರುಕ್ಷೇತ್ರ ಜುಲೈ ೧೯೯೬, ಪುಟ.೨೧.

೫೫. ಸಿಂಹ ಎಸ್.ಪಿ., ಡೆವಲೆಪ್‌ಮೆಂಟ್ ಅಂಡ್ ಪ್ರಾಸಪ್ಪೆಕ್ಟಸ್, ಕಾಮರ್ಸ್ ವ್ಯಾಲುಂ ೧೩೯, ೧೯೭೯, ಪುಟ ೧೦೧-೧೧೯.

೫೬. ಸಿದ್ದಪ್ಪ ಬಿ, ಇಂಪಾಕ್ಟ್ ಆಫ್ ಆರ್.ಆರ್.ಬಿ.ಆನ್ ಎಪ್ಲಾಯ್‌ಮೆಂಟ್, ಆಫ್ ವಿಕರ ಸೆಕ,ನ್ಸ್ ಇನ್ ಕರ್ನಾಟಕ, ಕುರುಕ್ಷೇತ್ರ ವ್ಯಾಲುಂ XLIII ನಂ.೧೦ ಜುಲೈ ೧೯೯೫, ಪುಟ.೧೨.

# ವರದಿಗಳು

೧. ಗೌರ್ನಮೆಂಟ್ ಆಫ್ ಇಂಡಿಯಾ, ಮಿನಿಸ್ಟ್ರಿ ಆಫ್ ಅಗ್ರಿಕಲ್ಚರ್ ಅಂಡ್ ರೂರಲ್ ಡೆವಲಪ್‌ಮೆಂಟ್ ಅನುಯಲ್ ರಿಪೋರ್ಟ್, ೧೯೮೪, ನ್ಯೂಡೆಲ್ಲಿ.

೨. ಗೌರ್ನ್‌ಮೆಂಟ್ ಆಫ್ ಇಂಡಿಯಾ, ಪ್ಲಾನಿಂಗ್ ಕಮಿಷನ್ ೬ನೇ ಪಂಚವಾರ್ಷಿಕ ಯೋಜನೆ, ೧೯೮೦-೮೫ ನ್ಯೂಡೆಲ್ಲಿ ೧೯೮೧ ಪುಟ.೮.

೩. ಗೌರ್ನ್‌ಮೆಂಟ್ ಆಫ್ ಇಂಡಿಯಾ, ಇಂಡಿಯಾ ೨೦೦೦, ಮಿನಿಸ್ಟ್ರಿ ಆಫ್ ಇನ್‌ಫಾರಮೇಶನ್ ಅಂಡ್ ಬ್ರಾಡ್‌ಕಾಸ್ಟಿಂಗ್ ನ್ಯೂಡೆಲ್ಲಿ, ೨೦೦೦.

೪. ಗೌರ್ನಮೆಂಟ್ ಆಫ್ ಇಂಡಿಯಾ, ರಿಪೋರ್ಟ್ ಆಫ್ ದಿ ರೂರಲ್ ಬ್ಯಾಂಕಿಂಗ್ ಎನಕ್ವಯರಿ ಕಮಿಟಿ, ಬಾಂಬೆ, ೧೯೭೧-೧೯೭೨.

೫. ಗೌರ್ನ್ಮೆಂಟ್ ಆಫ್ ಇಂಡಿಯಾ, ಎಕಾನಾಮಿಕ್ ಸರ್ವೇ ೯೮, ೧೯೯೯ ಮಿನಿಸ್ಟ್ರಿ ಆಫ್ ಫೈನಾನ್ಸ್, ನ್ಯೂಡೆಲ್ಲಿ.

೬. ಗೌರ್ನ್ಮೆಂಟ್ ಆಫ್ ಇಂಡಿಯಾ, ಎಕಾನಾಮಿಕ್ ಸರ್ವೇ ೨೦೦೦, ೨೦೦೨ ಮಿನಿಸ್ಟ್ರಿ ಆಫ್ ಫೈನಾನ್ಸ್, ನ್ಯೂಡೆಲ್ಲಿ.

೭. ಗೌರ್ನಮೆಂಟ್ ಆಫ್ ಇಂಡಿಯಾ ಕೊ ಆಪರೇಷನ್ ಇನ್ ಇಂಡಿಯಾ, ೧೯೭೫.

೮. ನಬಾರ್ಡ್, ಆನುಯಲ್ ರಿಪೋರ್ಟ್, ೯೪-೯೫, ಬಾಂಬೆ.

೯. ನಬಾರ್ಡ್, ಆನುಯಲ್ ರಿಪೋರ್ಟ್, ೮೭-೮೮, ಬಾಂಬೆ.

೧೦. ನಬಾರ್ಡ್., ಸ್ಟ್ಯಾಟಿಸ್ಟಿಕಲ್ ಸ್ಟೇಟ್‌ಮೆಂಟ್ ರಿಲೇಟಿಂಗ್ ಟು ಕೋ ಅಪರೇಟಿವ್ ಮೂಮೆಂಟ್ ಇನ್ ಇಂಡಿಯಾ ವ್ಯಾಲುಂ I and II ಬಾಂಬೆ, ೧೯೭೯-೮೦.

೧೧. ನಬಾರ್ಡ್ ಕೋಆಪರೇಟಿವ್ ಮೂಮೆಂಟ್ ಇನ್ ಇಂಡಿಯಾ ಬಾಂಬೆ ೯೪-೧೯೯೫.

೧೨. ನಬಾರ್ಡ್ ಕೋಆಪರೇಟಿವ್ ಮೂಮೆಂಟ್ ಇನ್ ಇಂಡಿಯಾ ಬಾಂಬೆ ೧೯೭೯-೮೦.

೧೩. ನಬಾರ್ಡ್ ಕೋಆಪರೇಟಿವ್ ಮೂಮೆಂಟ್ ಇನ್ ಇಂಡಿಯಾ ಬಾಂಬೆ ೨೦೦೦-೨೦೦೫.

೧೪. ಪ್ರೊಗ್ರಾಸ್ ಆಫ್ ಕೋ ಆಪರೇಟಿವ್ ಕ್ರೆಡಿಟ್ ಸೊಸೈಟೀಸ್ ಇನ್ ಇಂಡಿಯಾ ೧೯೯೭-೯೮ ಬಾಂಬೆ.

೧೫. ಮಾರ್ಜಿನಲ್ ಪಾರ್ಮರ್ಸ್ ಅಂಡ್ ಅಗ್ರಿಕಲ್ಚರ್ ಲೇಬರ್ಸ್ ಡೆವಲಪ್‌ಮೆಂಟ್ ಎ ಪೀಲ್ಡ್ ಸ್ಟಡಿ, ೧೯೭೩.

೧೬. ಯುನೈಟೆಡ್ ನೇಷನ್ಸ್, ಇಂಡಸ್ಟ್ರೀಲೈಷೇಶನ್ ಅಂಡ್ ರೂರಲ್ ಡೆವಲೆಪ್‌ಮೆಂಟ್, ನ್ಯೂಯಾರ್ಕ್, ೧೯೭೮ ಪುಟ.೮

೧೭. ಆರ್.ಬಿ.ಐ., ರಿಪೋರ್ಟ್ ಆಫ್ ಪ್ಲಾನಿಂಗ್ ಆಫ್ ಅಗ್ರಿಕಲ್ಚರ್ ಬೈ ಕಮರ್ಷಿಯಲ್ ಬ್ಯಾಂಕ್, ೧೯೬೮, ಬೆಂಬೆ, ೧೯೬೯.

೧೮. ಆರ್.ಬಿ.ಐ., ಸ್ಟಾಟಿಕಲ್ ಟೇಬಲ್ಸ್, ರಿಲೇಟಿಂಗ್ ಟು ಬ್ಯಾಂಕ್ಸ್ ಇನ್ ಇಂಡಿಯಾ ೧೯೮೬.

೧೯. ಆರ್.ಬಿ.ಐ., ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ ೯೮-೯೮, ಆರ್.ಬಿ.ಐ., ಬುಲೆಟಿನ್ ೯೯ ಪುಟ.೮೦-೮೮.

೨೦. ಅದೇ ೯೬-೯೭.

೨೧. ಆರ್.ಬಿ.ಐ., ರಿಪೋರ್ಟ್ ಆನ್‌ಕರೆನ್ಸಿ ಅಂಡ್ ಫೈನಾನ್ಸ್ ಮಾರ್ಚ್ ೨೦೦೭.

೨೨. ಆರ್.ಬಿ.ಐ., ಸ್ಟಾಟಿಸ್ಟಿಕಲ್ ಟೇಬಲ್ಸ್ ರಿಲೇಟಿಂಗ್ ಟು ಬ್ಯಾಂಕ್ಸ್ ಇಂಡಿಯಾ, ಬಾಂಬೆ, ೧೯೬೪.

೨೩. ಆರ್.ಬಿ.ಐ., ರಿಪೋರ್ಟ್ ಆಫ್ ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೂ ಕಮಿಟಿ ಬಾಂಬೆ, ೧೯೬೯.

೨೪. ಆರ್.ಬಿ.ಐ., ಸ್ಟಾಟಿಸ್ಟಿಕಲ್ ಟೇಬಲ್ ರಿಲೇಟಿಂಗ್ ಟು ಬ್ಯಾಂಕ್ಸ್ ಇಂಡಿಯಾ, ೧೯೭೦.

೨೫. ಆರ್.ಬಿ.ಐ., ಸ್ಟಾಟಿಸ್ಟಿಕಲ್ ಟೇಬಲ್ ರಿಲೇಟಿಂಗ್ ಟು ಬ್ಯಾಂಕ್ಸ್ ಇಂಡಿಯಾ, ೧೯೮೧, ೮೫, ೯೬, ೯೭.

೨೬. ಆರ್.ಬಿ.ಐ, ರಿಪೋರ್ಟ್ ಆನ್ ಕಮಿಟಿ ಟು ಸ್ಟಡಿ ಪಂಕ್ಷನಿಂಗ್ ಆಫ್ ಪಬ್ಲಿಕ್ ಸೆಕ್ಟರ್ ಬ್ಯಾಂಕ್ಸ್, ಬಾಂಬೆ ೧೯೭೮.

೨೭. ಆರ್.ಬಿ.ಐ., ರಿಪೋರ್ಟ್ ಆನ್ ಟ್ರೆಂಡ್ ಪ್ರೊಗ್ರೆಸ್ ಆಪ್ ಬ್ಯಾಂಕಿಂಗ್ ಇನ್ ಇಂಡಿಯಾ ಬಾಂಬೆ ೧೯೮೪, ೮೫

೨೮. ಆರ್.ಬಿ.ಐ., ರಿಪೋರ್ಟ್ ಆನ್ ಟ್ರೆಂಡ್ ಪ್ರೊಗ್ರೆಸ್ ಆಪ್ ಬ್ಯಾಂಕಿಂಗ್ ಇನ್ ಇಂಡಿಯಾ ಬಾಂಬೆ ೨೦೦೫-೦೬, ೦೬-೦೭

೨೯. ಆರ್.ಬಿ.ಐ., ರಿಪೋರ್ಟ್ ಆನ್ ಕರೆನ್ಸ್ ಅಂಡ್ ಫೈನಾನ್ಸ್ ವ್ಯಾಲುಂ ೨, ಬಾಂಬೆ ೧೯೯೦-೯೧.

೩೦. ಆರ್.ಬಿ.ಐ., ಬ್ಯಾಂಕಿಂಗ್ ಸ್ಟಾಟಸ್ಟಿಕ್ಸ್ ವ್ಯಾಲುಂ ೨೭, ಬಾಂಬೆ ಮಾರ್ಚ್ ೧೯೯೮, ೨೦೦೫.

೩೧. ಆರ್.ಬಿ.ಐ., ರಿಪೋರ್ಟ್ ಆಫ್ ದಿ ಇಂಡಿಯನ್ ಸೆಂಟ್ರಲ್ ಬ್ಯಾಂಕಿಂಗ್ ಎನ್‌ಕ್ವಯರಿ ಕಮಿಟಿ, ದೆಹಲಿ ೧೯೫೧.

೩೨. ಆರ್.ಬಿ.ಐ., ರಿಪೋರ್ಟ್ ಆಫ್ ದಿ ಇಂಡಿಯಾ ರೂರಲ್ ಕ್ರೆಡಿಟ್ ಸರ್ವೆ ಕಮಿಟಿ ಬಾಂಬೆ, ೧೯೫೪.

೩೩. ಆರ್.ಬಿ.ಐ., ರಿಪೋರ್ಟ್ ಆಫ್ ದಿ ಇಂಡಿಯಾ ರೂರಲ್ ಕ್ರೆಡಿಟ್ ಸರ್ವೆ ಕಮಿಟಿ ಬಾಂಬೆ, ೧೯೬೯.

೩೪. ಆರ್.ಬಿ.ಐ., ರಿಪೋರ್ಟ್ ಆಫ್ ದಿ ವರ್ಕಿಂಗ್ ಗ್ರೂಪ್ ಪ್ರಿಯಾರಿಟಿ ಸೆಕ್ಟರ್ ಲೆಂಡಿಂಗ್ ಅಂಡ್ ೨೦ ಪಾಯಿಂಟ್ ಎಕಾನಾಮಿಕ್ ಪ್ರೋಗ್ರಾಂ ರೂಲ್ ಆಫ್ ಬ್ಯಾಂಕ್ಸ್ ಬಾಂಬೆ ೧೯೮೦.

೩೫. ಆರ್.ಬಿ.ಐ., ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ ೧೯೯೭, ೯೮.

೩೬. ಆರ್.ಬಿ.ಐ., ಮಾರ್ಜಿನಲ್ ಪಾರಮರ್ಸ್ ಅಂಡ್ ಅಗ್ರಿಕಲ್ಚರ್ ಲೇಬರ್ಸ್ ಡೆವಲೆಪ್‌ಮೆಂಟ್ ಏಜನ್ಸಿ, ಬಾಂಬೆ ೧೯೭೬.

೩೭. ಆರ್.ಬಿ.ಐ., ರಿಪೋರ್ಟ್ ಆಫ್ ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೂ ಕಮಿಟಿ, ಬಾಂಬೆ ೧೯೯೬.

೩೮. ಆರ್.ಬಿ.ಐ., ರಿಪೋರ್ಟ್ ಆನ್ ಕರೆನ್ಸಿ ಅಂಡ್ ಫೈನಾನ್ಸ್ ವ್ಯಾಲುಂ ೧, ೧೯೯೦, ೯೧ ಬಾಂಬೆ. ೯೧.

೩೯. ಆರ್.ಬಿ.ಐ., ರಿಪೋರ್ಟ್ ಆನ್ ಕರೆನ್ಸಿ ಅಂಡ್ ಫೈನಾನ್ಸ್ ವ್ಯಾಲುಂ ೨, ೧೯೯೦, ೯೧ ಬಾಂಬೆ. ೯೧.

೪೦. ರಿಪೋರ್ಟ್ ಆಫ್ ಆಲ್ ಇಂಡಿಯಾ ರೂರಲ್ ಕ್ರೆಡಿಟ್ ರಿವ್ಯೂ ಕಮಿಟಿ, ೧೯೯೭, ೯೮ ಬಾಂಬೆ ೮೦.

೪೧. ರಿಪೋರ್ಟ್ ಆಫ್ ದಿ ಕಮಿಟಿ ಆನ್ ಕೊ ಅಪರೇಟಿವ್ ಇನ್ ಇಂಡಿಯಾ, ಬಾಂಬೆ, ೧೯೧೫.

೪೨. ರಿಪೋರ್ಟ್ ಆನ್ ದಿ ಪಂಕ್ಷನ್ಸ್ ಆಫ್ ಪಬ್ಲಿಕ್ ಸೆಕ್ಟರ್ ಬ್ಯಾಂಕ್ಸ್, ಬಾಂಬೆ ೧೯೭೮.

೪೩. ರಿಪೋರ್ಟ್ ಆನ್ ದಿ ಕರೆನ್ಸಿ ಅಂಡ್ ಫೈನಾನ್ಸ್ ೧೯೯೬, ೯೭

೪೪. ರಿಪೋರ್ಟ್ ಆನ್ ಟ್ರೆಂಡ್ ಅಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ ೯೦, ೯೧ ಬಾಂಬೆ.

೪೫. ರಿಪೋರ್ಟ್ ಆನ್ ಟ್ರೆಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ ೯೫,೯೬ ಬಾಂಬೆ.

೪೬. ವಿಶ್ವಬ್ಯಾಂಕ ರೂರಲ್ ಡೆವಲಪಮೆಂಟ್

೪೭. ವಿಶ್ವಬ್ಯಾಂಕ್ ಇಂಟಿಗ್ರೇಟೆಡ್ ರೂರಲ್ ಡೆವಲೆಪ್‌ಮೆಂಟ್ ವಾಲ್ಯುಂ ೧೭, ೧೯೭೮.

೪೮. ವಿಶ್ವಬ್ಯಾಂಕ ಅಗ್ರಿಕಲ್ಚರ್ ಸೆಕ್ಟಾರ್ ಪಾಲಿಸಿ ಪೇಪರ್ ೧೯೭೨, ವಾಷಿಂಗ್‌ಟನ್, ಡಿ.ಸಿ.

## ನಿಯತಕಾಲಿಕೆಗಳು

೧. ಸಂಯುಕ್ತ ಕರ್ನಾಟಕ, ಸಹಕಾರ, ಸರ್ವರ ಸ್ವತ್ತು, ಬಿ.ಜಿ.ಬಣಕಾರ, ೨೬.೧೧.೨೦೦೮, ಪುಟ.೪

೨. ಸಂಯುಕ್ತ ಸಹಕಾರ, ಸಹಕಾರಿ ಬ್ಯಾಂಕುಗಳು, ಬಿ.ಜಿ.ಬಣಕಾರ, ೦೭.೧೧.೨೦೦೬, ಪುಟ.೧

೩. ಸಂಯುಕ್ತ ಕರ್ನಾಟಕ, ಸಹಕಾರ, ಪ್ರಗತಿ ಬ್ಯಾಂಕ್ ನೌಕರರ ಧರಣಿ, ೨೬.೦೬.೨೦೦೮ ಪುಟ. ೪

೪. ಸಂಯುಕ್ತ ಕರ್ನಾಟಕ, ಸಹಕಾರ, ಸಹಕಾರಿ ಸಂಘಗಳ ಪುನಶ್ಚೇತನ, ೧೧.೦೬.೨೦೦೮, ಪುಟ.೧

೫. ಸಂಯುಕ್ತ ಕರ್ನಾಟಕ, ಸಹಕಾರ, ಬ್ಯಾಂಕಿಂಗ್ ಸೇವೆಯ ಕುಂದುಕೊರತೆಗಳು, ೧೮.೧೦.೨೦೦೮, ಪು.೨

೬. ವಿಜಯ ಕರ್ನಾಟಕ, ಸಹಕಾರ, ಕೃಷಿ ಸಾಲದ ಒಂದು ಅವಲೋಕನ, ೦೭.೦೬.೨೦೦೬, ಪುಟ.೪

೭. ಸಂಯುಕ್ತ ಕರ್ನಾಟಕ, ಸಹಕಾರ, ಸಣ್ಣ ಸಾಲ ಬೆಳವಣಿಗೆ ಹೇಗೆ, ೧೯.೨.೨೦೦೭, ಪುಟ.೧

೮. ವಿಜಯ ಕರ್ನಾಟಕ, ಸಹಕಾರ, ಗ್ರಾಮೀಣಬ್ಯಾಂಕ್ ಪಾತ್ರ ಪ್ರಮುಖವಾದುದು, ೦೫.೦೩.೨೦೦೧, ಪುಟ

೯. ಸಂಯುಕ್ತ ಕರ್ನಾಟಕ, ಸಹಕಾರ, ಬ್ಯಾಂಕ ಠೇವಣಿ ಭಾಗ್ಯದ ಬಾಗಿಲು ತೆಗೆದೀತೆ, ೧೫.೨.೨೦೦೬.

೧೦. ಸಂಯುಕ್ತ ಕರ್ನಾಟಕ, ಸಹಕಾರ, ಪ್ರಗತಿ ಮತ್ತು ಗ್ರಾಮೀಣ ಪ್ರಗತಿ, ೦೫.೦೨.೨೦೦೬.

೧೧. ವಿಜಯ ಕರ್ನಾಟಕ, ಸಹಕಾರ, ಮೈಕ್ರೋ ಫೈನಾನ್ಸ್, ೨೮.೦೬.೨೦೦೮, ಪುಟ.೩

೧೨. ವಿಜಯ ಕರ್ನಾಟಕ, ಸಹಕಾರ, ಕಡುಬಡವರಿಗೂ ಆರ್ಥಿಕ ಆಧಾರ, ೪.೧.೨೦೦೬

೧೩. ವಿಡಯ ಕರ್ನಾಟಕ, ಸಹಕಾರ, ಭಾರತದ ಬ್ಯಾಂಕಿನ ಮುಂದಿನ ದಿನಗಳಲ್ಲಿ, ೨೭.೦೮.೨೦೦೩.

೧೪. ವಿಜಯ ಕರ್ನಾಟಕ, ಸಹಕಾರ, ಸಾಮಾನ್ಯ ಭಾಷೆ ಬಳಕೆ ಬ್ಯಾಂಕುಗಳಲ್ಲಿ, ೦೬.೧೨.೨೦೦೬

೧೫. ವಿಜಯ ಕರ್ನಾಟಕ, ಸಹಕಾರ, ಲೇವಾದೇವಿ ಮೇಲೆ ನಿರ್ಬಂಧ, ೦೯.೦೯.೨೦೦೩

೧೬. ವಿಜಯ ಕರ್ನಾಟಕ, ಸಹಕಾರ, ಸಾಂಘಿಕ ಹಣಕಾಸು ಸಂಸ್ಥೆಗಳು, ೦೪.೦೧.೨೦೦೬

೧೭. ಸಂಯುಕ್ತ ಕರ್ನಾಟಕ, ಸಹಕಾರ, ಕಿಸಾನ್ ಕ್ರೆಡಿಟ್ ಕಾರ್ಡು ಕೆ.ಸಿ.ಸಿ. ಬೆಳವಣಿಗೆ, ೧೩.೨.೨೦೦೮

## ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ಊರು | ತಾಲ್ಲೂಕು | ಜಿಲ್ಲೆ | ವೃತ್ತಿ |
|---|---|---|---|---|---|---|---|
| ೦೧. | ಧರ್ಮನಾಯಕ | ೩೫ | ಲಂಬಾಣಿ | ಕಾಲುವೆತಾಂಡ | ಹೆಚ್‌ಬಿಹಳ್ಳಿ | ಬಳ್ಳಾರಿ | ಕೃಷಿ |
| ೦೨. | ಮಿಟ್ಟಿನಾಯಕ | ೩೬ | ಲಂಬಾಣಿ | ಕಾಲುವೆತಾಂಡ | ಹೆಚ್‌ಬಿಹಳ್ಳಿ, | ಬಳ್ಳಾರಿ | ಕೃಷಿ |
| ೦೩. | ತಿಪ್ಪಾನಾಯ್ಕ | ೪೦ | ಲಂಬಾಣಿ | ಕಾಲುವೆತಾಂಡ | ಹೆಚ್‌ಬಿಹಳ್ಳಿ | ಬಳ್ಳಾರಿ | ಕೃಷಿ |
| ೦೪. | ಕುಷ್ಣನಾಯ್ಕ | ೩೦ | ಲಂಬಾಣಿ | ಕಾಲುವೆತಾಂಡ | ಹೆಚ್‌ಬಿಹಳ್ಳಿ | ಬಳ್ಳಾರಿ | ಕೃಷಿ |
| ೦೫. | ಪಕ್ಕೀರಪ್ಪ | ೨೮ | ಕುರುಬ | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಕೃಷಿ |
| ೦೬. | ವಿರೂಪಾಕ್ಷಯ್ಯ | ೩೫ | ಐನೂರು | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಕೃಷಿ |
| ೦೭. | ಎಚ್.ಎಂ.ರುದ್ರಯ್ಯ | ೪೦ | ಐನೂರು | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಕೃಷಿ |
| ೦೮. | ತಿಪ್ಪನಾಯಕ | ೪೦ | ಲಂಬಾಣಿ | ನಾಗಲಾಪುರ | ಹೆಚ್‌ಬಿಹಳ್ಳಿ | ಬಳ್ಳಾರಿ | ಕೃಷಿ |
| ೦೯. | ಗೌಡುರ ಬಸವನಗೌಡ | ೩೬ | ಲಿಂಗಾಯತ | ನಾಗಲಾಪುರ | ಹೆಚ್‌ಬಿಹಳ್ಳಿ | ಬಳ್ಳಾರಿ | ವ್ಯವಹಾರ |
| ೧೦. | ಅಗಸರ ತಿಪ್ಪಣ್ಣ | ೩೫ | ಅಗಸರು | ನಾಗಲಾಪುರ | ಹೆಚ್‌ಬಿಹಳ್ಳಿ | ಬಳ್ಳಾರಿ | ಅಗಸ |

| | | | | | | | |
|---|---|---|---|---|---|---|---|
| ೧೧ | ಸೊಣ್ಣದಬಸವರಾಜ | ೩೦ | ಲಿಂಗಾಯತ | ನಾಗಲಾಪುರ | ಹೆಚ್‌ಬಿಹಳ್ಳಿ | ಬಳ್ಳಾರಿ | ಕಿರಾಣಿ ವ್ಯಾಪಾರಿ |
| ೧೨. | ರಹಮಾನ್‌ಸಾಬ್ | ೩೨ | ಮುಸ್ಲಿಂ | ನಾಗಲಾಪುರ | ಹೆಚ್‌ಬಿಹಳ್ಳಿ | ಬಳ್ಳಾರಿ | ಸಣ್ಣ ಉದ್ದಿಮೆ |
| ೧೩. | ಬಸವಣ್ಣಮ್ಮ | ೩೧ | ಲಿಂಗಾಯತ | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಟೈಲರ್ |
| ೧೪. | ವೀರೇಶ | ೩೦ | ಲಿಂಗಾಯತ | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಖಾನಾವಳಿ |
| ೧೫. | ಹಡಪದ ಕೊಟ್ರೇಶ್ | ೨೮ | ಹಡಪದರು | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಕ್ಷೌರಿಕ |
| ೧೬. | ಭಜಂತ್ರಿ ಹುಲುಗಪ್ಪ | ೩೦ | ತಳವಾರರು | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಬುಟ್ಟಿ ಹೆಣೆಯುವವರು |
| ೧೭. | ಶಂಕರ್ | ೨೮ | ಲಿಂಗಾಯತರು | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ವೈದ್ಯರು |
| ೧೮. | ಕಲೀಲ್‌ಸಾಬ್ | ೨೯ | ಮುಸ್ಲಿಂ | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಸೈಕಲ್‌ಷಾಪ್ |
| ೧೯. | ಹೇಮಪ್ಪ ತಳವಾರ | ೩೦ | ತಳವಾರ | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಹೈನುಗಾರಿಕೆ |
| ೨೦. | ಲಲಿತವ್ವ | ೨೮ | ಲಿಂಗಾಯತ | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಹೈನುಗಾರಿಕೆ |
| ೨೧. | ದೇವಕ್ಕ | ೨೬ | ಎಸ್‌ಸಿ | ಕೋಡಿಹಳ್ಳಿ | ಹೆಚ್‌ಬಿಹಳ್ಳಿ | ಬಳ್ಳಾರಿ | ಹೈನುಗಾರಿಕೆ |
| ೨೨. | ರುದ್ರಪ್ಪ | ೨೮ | ಎಸ್‌ಸಿ | ಕೋಡಿಹಳ್ಳಿ | ಹೆಚ್‌ಬಿಹಳ್ಳಿ | ಬಳ್ಳಾರಿ | ಹೈನುಗಾರಿಕೆ |
| ೨೩. | ರಂಗಮ್ಮ | ೨೮ | ಎಸ್‌ಸಿ | ಕೋಡಿಹಳ್ಳಿ | ಹೆಚ್‌ಬಿಹಳ್ಳಿ | ಬಳ್ಳಾರಿ | ಹೈನುಗಾರಿಕೆ |
| ೨೪. | ಮೆಹಬೂಬ್‌ಬೀ | ೩೦ | ಮುಸ್ಲಿಂ | ಹಂಪಸಾಗರ | ಹೆಚ್‌ಬಿಹಳ್ಳಿ | ಬಳ್ಳಾರಿ | ಹೈನುಗಾರಿಕೆ |

| | | | | | | | |
|---|---|---|---|---|---|---|---|
| ೧೫. | ಸುಲ್ತಾನ್ ಸಾಬ್ | ೩೫ | ಮುಸ್ಲಿಂ | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೧೬. | ಜಡೆಪ್ಪ | ೩೦ | ಉಪ್ಪಾರ | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೧೭. | ಕಣೇಕಲ್ ಹುಸೇನಬಿ | ೨೫ | ಮುಸ್ಲಿಂ | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೧೮. | ಕೃಷ್ಣಪ್ಪ | ೩೧ | ಶೆಟ್ಟರು | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೧೯. | ಕೆಂಚಮಲ್ಲಪ್ಪ | ೨೮ | ರೆಡ್ಡಿ | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೨೦. | ಹಜಾಮರ ಹೊನ್ನೂರಪ್ಪ | ೩೨ | ಹಡಪದ | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೨೧. | ನರಸಿಂಹಲುದಂಡ | ೩೧ | ರೆಡ್ಡಿರು | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೨೨. | ಶೋಭಾದೇವಿ | ೨೮ | ಶೆಟ್ಟರು | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ/ಅತಿಸಣ್ಣ ರೈತರು |
| ೨೩. | ರಾಂಪುರ ಶರಿಪಾಬಿ | ೨೫ | ಮುಸ್ಲಿಂ | ಹೊಸದರೋಜಿ | ಸಂಡೂರು | ಬಳ್ಳಾರಿ | ವ್ಯಾಪಾರ |
| ೨೪. | ದೊಡ್ಡ ಯರ್ರಿಸ್ವಾಮಿ | ೨೭ | ಐನೂರು | ದೇವಳ್ಳಿ | ಸಂಡೂರು | ಬಳ್ಳಾರಿ | ವ್ಯಾಪಾರ |
| ೨೫. | ಎಂ.ಪ್ರಭಯ್ಯ | ೩೦ | ಐನೂರು | ದೇವಳ್ಳಿ | ಸಂಡೂರು | ಬಳ್ಳಾರಿ | ವ್ಯಾಪಾರ |
| ೨೬. | ವೆಂಕಟರಮಣಗುಪ್ತಿ | ೩೨ | ಶೆಟ್ಟರು | ದೇವಳ್ಳಿ | ಸಂಡೂರು | ಬಳ್ಳಾರಿ | ವ್ಯಾಪಾರ |
| ೨೭. | ಜಕ್ರಿಸಾಬ್ | ೩೦ | ಮುಸ್ಲಿಂ | ಹೊಸದರೋಜಿ | ಸಂಡೂರು | ಬಳ್ಳಾರಿ | ವ್ಯಾಪಾರ |
| ೨೮. | ಹನುಮಂತಶೆಟ್ಟಿ | ೨೮ | ಶೆಟ್ಟರು | ಹೊಸದರೋಜಿ | ಸಂಡೂರು | ಬಳ್ಳಾರಿ | ವ್ಯಾಪಾರ |

| | | | | | | | |
|---|---|---|---|---|---|---|---|
| ೩೯. | ಪ್ರಮೀಳಮ್ಮ | ೨೯ | ಪ.ಜಾ. | ಹೊಸದರೋಜಿ | ಸಂಡೂರು | ಬಳ್ಳಾರಿ | ಹೈನುಗಾರಿಕೆ |
| ೪೦. | ಸುವರ್ಣಮ್ಮ | ೩೦ | ಪ.ಜಾ. | ಹೊಸದರೋಜಿ | ಸಂಡೂರು | ಬಳ್ಳಾರಿ | ಹೈನುಗಾರಿಕೆ |
| ೪೧. | ಜಿ.ಮಂಜುಳ | ೨೮ | ಲಿಂಗಾಯತ | ಹೊಸದರೋಜಿ | ಸಂಡೂರು | ಬಳ್ಳಾರಿ | ಹೈನುಗಾರಿಕೆ |
| ೪೨. | ಶರಭಯ್ಯ | ೨೬ | ಅಗಸರು | ಹೊಸದರೋಜಿ | ಸಂಡೂರು | ಬಳ್ಳಾರಿ | ದೋಬಿ |
| ೪೩. | ಭಾರತೀವಾಣಿ | ೨೮ | ಐನೂರು | ಹೊಸದರೋಜಿ | ಸಂಡೂರು | ಬಳ್ಳಾರಿ | ವ್ಯಾಪಾರ |
| ೪೪. | ಶಿವಪ್ಪವಡ್ಡರ | ೩೬ | ವಡ್ಡರು | ಹೊಸದರೋಜಿ | ಸಂಡೂರು | ಬಳ್ಳಾರಿ | ಉದ್ದಿಮೆದಾರರು |
| ೪೫. | ಎಂ.ಸೈಫುಲ್ಲಾ | ೨೪ | ಮುಸ್ಲಿಂ | ಹೊಸದರೋಜಿ | ಸಂಡೂರು | ಬಳ್ಳಾರಿ | ಸೈಕಲ್‌ಷಾಪು |
| ೪೬. | ಎಂ.ಮಲ್ಲಿಕಾರ್ಜುನ | ೨೬ | ಐನೂರು | ಹೊಸದರೋಜಿ | ಸಂಡೂರು | ಬಳ್ಳಾರಿ | ಉದ್ದಿಮೆದಾರರು |
| ೪೭. | ನಾಗರತ್ನಮ್ಮ | ೨೫ | ಲಿಂಗಾಯತ | ಹೊಸದರೋಜಿ | ಸಂಡೂರು | ಬಳ್ಳಾರಿ | ಸಣ್ಣ ಉದ್ದಿಮೆ |
| ೪೮. | ಭೋವಿ ಬಂಗಾರಪ್ಪ | ೨೮ | ಭೋವಿ | ಚಿಲಕನಹಟ್ಟಿ | ಹೊಸಪೇಟೆ | ಬಳ್ಳಾರಿ | ಕೃಷಿಕರು |
| ೪೯. | ಹುಲುಗಪ್ಪ | ೩೦ | ವಡ್ಡರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೫೦. | ಶಾಂತನಗೌಡ | ೬೦ | ಲಿಂಗಾಯತರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಶಿಕ್ಷಕರು |
| ೫೧. | ರಾಮದುರ್ಗದ ಕಾಳಮ್ಮ | ೨೯ | ರೆಡ್ಡಿ ಲಿಂಗಾಯರು | ಚಿಲಕನಹಟ್ಟಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೫೨. | ಬಸವರಾಜು | ೪೦ | ಲಿಂಗಾಯತರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಶಿಕ್ಷಕರು |

| | | | | | | | |
|---|---|---|---|---|---|---|---|
| ೫೩. | ಶಂಕರಪ್ಪ | ೫೦ | ಲಿಂಗಾಯತರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಶಿಕ್ಷಕರು |
| ೫೪. | ಜಹಂಗೀರ್‌ಸಾಬ್ | ೩೨ | ಮುಸ್ಲಿಂ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೫೫. | ಸತ್ತಾರ್‌ಸಾಬ್ | ೩೦ | ಮುಸ್ಲಿಂ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೫೬. | ಯುವರಾಜ | ೩೧ | ಈಡಿಗರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೫೭. | ಪ್ರೇಮಾನಂದಯ್ಯ | ೩೫ | ಐನೂರು | ಡಣಾಪುರ | ಹೊಸಪೇಟೆ | ಬಳ್ಳಾರಿ | ಕೃಷಿ |
| ೫೮. | ಹನುಮಂತಪ್ಪ | ೩೬ | ಆದಿದ್ರಾವಿಡ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೫೯. | ಚಂದ್ರಶೇಖರಯ್ಯ | ೪೦ | ಶೆಟ್ಟರು | ಚಿಲನಕಹಟ್ಟಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೬೦. | ರಾಮಶೆಟ್ಟಿ | ೪೦ | ಶೆಟ್ಟರು | ಚಿಲನಕಹಟ್ಟಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೬೧. | ಕೆಂಚಮ್ಮ | ೩೫ | ಲಿಂಗಾಯತರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೬೨. | ಲಕ್ಷ್ಮಮ್ಮ | ೩೬ | ಪ.ಪಂ. | ಚಿಲನಕಹಟ್ಟಿ | ಹೊಸಪೇಟೆ | ಬಳ್ಳಾರಿ | ಕೃಷಿ |
| ೬೩. | ಟಿ.ಅಂಜಿನಪ್ಪ | ೩೦ | ಪ.ಪಂ. | ಚಿಲನಕಹಟ್ಟಿ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೬೪. | ಗೌರಿಬಾಯಿ | ೩೨ | ಲಂಬಾಣಿ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೬೫. | ಗಾಳೆಮ್ಮ | ೨೫ | ಹರಿಜನ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೬೬. | ತಿಮ್ಮಪ್ಪ | ೨೮ | ಪ.ಪಂ. | ಚಿಲನಕಹಟ್ಟಿ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೬೭. | ಸಗರಿ ಸಣ್ಣ ಬುಡೇನಸಾಬ್ | ೩೧ | ಮುಸ್ಲಿಂ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಕೃಷಿ |

| | | | | | | | |
|---|---|---|---|---|---|---|---|
| ೬೮. | ಗುಬ್ಬಿ ಮಂಜುನಾಥ | ೩೦ | ನಾಯಕ | ತಿಮ್ಮಲಾಪುರ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೬೯. | ದುರುಗಮ್ಮ | ೩೫ | ಹರಿಜನ | ಚಿಲಕನಹಟ್ಟಿ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೭೦. | ಹರಿಜನ ಗಾಳೆಮ್ಮ | ೩೫ | ಹರಿಜನ | ತಿಮ್ಮಲಾಪುರ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೭೧. | ಪಾರ್ವತಿ | ೩೦ | ನಾಯಕ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಹೈನುಗಾರಿಕೆ |
| ೭೨. | ಶಾರದ | ೩೩ | ಬಡಗೇರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ವ್ಯಾಪಾರ |
| ೭೩. | ಚಿನಗಾರ ಪಂಪಣ್ಣ | ೩೬ | ಬಡಗೇರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ವ್ಯಾಪಾರ |
| ೭೪. | ರಾಜಾಸಾಬ್ | ೩೦ | ಮುಸ್ಲಿಂ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ವ್ಯಾಪಾರ |
| ೭೫. | ಕುಂಬಾರ ಬಸಮ್ಮ | ೩೨ | ಕುಂಬಾರರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಹೊಟೇಲ್ |
| ೭೬. | ಕುಂಬಾರ ಯಮುನಪ್ಪ | ೩೫ | ಕುಂಬಾರರು | ಚಿಲಕನಹಟ್ಟಿ | ಹೊಸಪೇಟೆ | ಬಳ್ಳಾರಿ | ಕುಂಬಾರಿಕೆ |
| ೭೭. | ಕುಂಬಾರ ಹನುಮಂತಪ್ಪ | ೩೭ | ಕುಂಬಾರರು | ಚಿಲಕನಹಟ್ಟಿ | ಹೊಸಪೇಟೆ | ಬಳ್ಳಾರಿ | ಕುಂಬಾರಿಕೆ |
| ೭೮. | ರಾಮಪ್ಪ | ೩೮ | ಲಿಂಗಾಯತ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಹೋಟಲ್ |
| ೭೯. | ಡಾ.ರಾಘುವೇಂದ್ರ | ೨೯ | ಲಿಂಗಾಯತ | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಡಾಕ್ಟರ್ |
| ೮೦. | ಪದ್ಮಾಚಾರಿ | ೩೦ | ಅಕ್ಕಸಾಲಿಗರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಚಿನಿವಾರಿಕೆ |
| ೮೧. | ಶಾಂತಮ್ಮ | ೨೫ | ಉಪ್ಪಾರರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ವ್ಯವಹಾರ |
| ೮೨. | ವಿಜಯಕುಮಾರ, ಪಂಚಾಯತಿ ಸದಸ್ಯರು | ೩೦ | ಲಿಂಗಾಯತರು | ಮರಿಯಮ್ಮನಹಳ್ಳಿ | ಹೊಸಪೇಟೆ | ಬಳ್ಳಾರಿ | ಹೊಟೇಲ್ |

## ಜಾನಪದ ಅಧ್ಯಯನ ವಿಭಾಗ

## ಕನ್ನಡ ವಿಶ್ವವಿದ್ಯಾಲಯ, ಹಂಪಿ

### ಜನಪದರ ದೃಷ್ಟಿಯಲ್ಲಿ ಬ್ಯಾಂಕುಗಳು ಅಂದು ಇಂದು

### (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

ಭಾಗ ೧: ಗ್ರಾಮ.....................ತಾಲ್ಲೂಕು...........................ದಿನಾಂಕ..........

ಭಾಗ ೨: ಕುಟುಂಬದ ಮಾಹಿತಿ

೧. ಕುಟುಂಬದ ಮುಖ್ಯಸ್ಥನ ಹೆಸರು.......................................

೨. ಸದಸ್ಯರ ಸಂಖ್ಯೆ...............ಗಂಡು...............ಹೆಣ್ಣು...............

೩. ಅಕ್ಷರಸ್ತರ ಸಂಖ್ಯೆ...................ಗಂಡು...............ಹೆಣ್ಣು.........

೪. ಉದ್ಯೋಗ ಅ) ಕೃಷಿ ಆ) ಸಣ್ಣ ಉದ್ಯಮ ಇ) ಹೈನುಗಾರಿಕೆ ಳ) ಕರಕುಶಲತೆ
೫. ವ್ಯಾಪಾರಸ್ಥರು

೫. ನಿವೇಶನ..........ಇದೆ/ಇಲ್ಲ ಕಚ್ಚಾ/ಪಕ್ಕಾ/ಜನತಾ ಮನೆ

೬. ಕುಟುಂಬದಲ್ಲಿ ದುಡಿಯುವವರ ಸಂಖ್ಯೆ.............

೭. ಕುಟುಂಬದ ಒಟ್ಟು ವರಮಾನ....................

ಭಾಗ ೩: ಆಸ್ತಿಗಳು

೧. ಭೂಮಿ, ಸ್ವಂತ/ಬಾಡಿಗೆ/ಗುತ್ತಿಗೆ

೨. ಎತ್ತುಗಳು ಸ್ವಂತ/ಬಾಡಿಗೆ/ಗುತ್ತಿಗೆ

೩. ಹೈನುಗಾರಿಕೆ ಇದೆ/ಇಲ್ಲ.

೪. ಕರ ಕುಶಲತೆ/ನೇವಾರಿಕೆ/ಕಮ್ಮಾರ/ಬಡಗಿತನ/ಕುಂಬಾರ/ಬುಟ್ಟಿ ಎಣೆಯುವುದು/ಹಗ್ಗ ಎಣೆಯುವವರು ಇತ್ಯಾದಿ.

೫. ವ್ಯಾಪಾರಸ್ಥರು...................

೬. ಸಣ್ಣ ಉದ್ದಿಮೆದಾರರು..................

ಭಾಗ ೪: ಬ್ಯಾಂಕುಗಳಿಂದ ಪಡೆದ ಸಾಲ ಸೌಲಭ್ಯಗಳು

೧. ಬೆಳೆಸಾಲ. ದೊಡ್ಡ, ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಸಾಲ................

೨. ಹೈನುಗಾರಿಕೆಗೆ ಸಾಲ (ಹಸು, ಎಮ್ಮೆ, ಕುರಿ, ಇತ್ಯಾದಿ)

೩. ಕರಕುಶಲತೆಗೆ ಸಾಲ......................................

೪. ನೀರಾವರಿ ವಿಸ್ತರಣೆ ಸಾಲ....................................

೫. ಸಣ್ಣ ವ್ಯಾಪಾರಸ್ತರಿಗೆ ಸಾಲ.................................

೬. ಗೃಹ ನಿರ್ಮಾಣ ಸಾಲ.........................................

೭. ಶಿಕ್ಷಣಕ್ಕೆ ಸಾಲ........................................................

## ಫಲಾನುಭವಿಗಳ ಅಭಿಪ್ರಾಯಗಳು

೧. ಬ್ಯಾಂಕಿನ ಬಗ್ಗೆ ಹೇಗೆ ತಿಳಿದುಕೊಂಡಿರಿ.

ಅ) ಬ್ಯಾಂಕ್ ಅಧಿಕಾರಿಗಳಿಂದ ಆ) ಸ್ನೇಹಿತರಿಂದ ಇ) ಗ್ರಾಮಸ್ಥರುಗಳಿಂದ/ರೇಡಿಯೋ/ಪತ್ರಿಕೆಗಳಿಂದ

೨. ಬ್ಯಾಂಕಿನ ಸಾಲ ದೊರೆಯುವಿಕೆಯಿಂದ ನಿಮಗೆ ತೃಪ್ತಿಯಾಗಿದೆಯೇ? ಇಲ್ಲದಿದ್ದರೆ ಕಾರಣ ಕೊಡಿ.

ಅ) ಸಾಲ ಮುಂಗಡದ ಬಗ್ಗೆ/ಸಾಲ ವಿತರಿಸುವ ಬಗ್ಗೆ/ದಾಖಲೆ ಪತ್ರಗಳ ಬಗ್ಗೆ/ಸಾಲವಿಳಂಬದ ಬಗ್ಗೆ

೩. ಬ್ಯಾಂಕ್ ಅಧಿಕಾರಿಗಳ ವರ್ತನೆಯ ಬಗ್ಗೆ ತೃಪ್ತಿ ತಂದಿದೆಯೇ? ಹೌದು/ಇಲ್ಲ.

೪. ಬ್ಯಾಂಕಿನಿಂದ ಸಾಲ ಪಡೆಯುವಾಗ ನಿವೇನಾದರೂ ತೊಂದರೆ ಅನುಭವಿಸಿದ್ದೀರಾ ಹೌದು/ಇಲ್ಲ.

೫. ಬ್ಯಾಂಕಿನಿಂದ ಸಾಲ ಪಡೆದ ನಂತರದಲ್ಲಿ ತಮ್ಮ ವರಮಾನ ವೃದ್ಧಿಯಾಗಿದೆಯೇ. ಆದರೆ ಪ್ರಮಾಣವೆಷ್ಟು

ಪ್ರತಿಶತ ೧೦, ೨೦, ೩೦%.

೬. ಬ್ಯಾಂಕಿನ ಬಗ್ಗೆ ನಿವೇನು ಹೇಳಲು ಇಷ್ಟಪಡುವಿರಿ..........................................

.....................................................................................................

೭. ಬ್ಯಾಂಕನ್ನು ಮುಂದುವರೆಸಬೇಕೆ ಅಥವಾ ಬೇಡವೇ.......................................... ........

.....................................................................................................

ಮಾಹಿತಿದಾರರ ಸಹಿ

ಸಮೀಕ್ಷಿಸಿದವರ ಸಹಿ

# ಪ್ರಾಚೀನ ಕಾಲದ ಧಾನ್ಯ ಸಂಗ್ರಹದ ಬ್ಯಾಂಕುಗಳು





ಹಗೇವು

